Looking at the various *metres* (their names were not in the manuscripts) adduced in his Grammar, we find *only* such as are used also in Saṇskṛt. They are:

1. Kanda; 2. Utpalamâlikâ (pp. 81. 153); 3. Upendravajra (17); 4. *C*ampakamâlâ (136. 230); 5. Mattebhavikrîḍita (78. 188. 301); 6. Va*m*śastha (144); 7. Sragdharâ (128). (Gadyakâvya 72).

We may therefore arrive at the conclusion, that the pure Canarese metres had not yet come into existence at Keśava's time. A very common one of these is the Bhâmini Shaṭpadi. Now the Basava Purâṇa, the author of which, as stated above, is mentioned in the Râjaśekhara, is composed exclusively in this metre. Is not this, together with its other peculiarities alluded to on p. xi., a strong argument to the effect that Keśava's work is prior to the Basava Purâṇa? The date of this Canarese work is known to us by the following verse occurring in it (Canarese Anthology v. 667):

---

remember *Pampa* (Hampa), *Cittaja* (Manasija?) and the wise (?) *Nâgavarma*, (further) the poet *Keśava*, the best of the (poet-) pearls, and thus utter the work that the wise may be pleased".

V. 11 runs thus (in the kanda metre):

ಲಕ್ಷಣಶಿಕ್ಷಾಚಾರ್ಯನು
ಲಕ್ಷಿಣಕೇಶವನ ಶಬ್ದಮಣಿದರ್ಪಣಮಂ |
ಈಕ್ಷಿಸಿ ಶಿಕ್ಷಿಸಲೀಶ್ವರ
ಸಾಕ್ಷಾದಭಿನವಸುಕೇಶಿರಾಜಂ ಪುಸಿಯೇ || 11 ||

"When I teach (this book) after having studied the S*abdamaṇidarpaṇa* of the well-distinguished *Keśava* who was a master in teaching the characteristics (of the Canarese Language), can it be falsehood that Iśvara (i. e. myself) is manifestly a second Sukeśirâja?"

About Kâlidâsa see A. Weber's Mâlavikâgnimitra; the Bombay Guardian, 5th February, 1870, states that Kâlidâsa (and also Bhâravi, the author of the Kirâtârjunîya) are mentioned in a Jaina inscription of A. D. 584. About Bâṇa (whether Sumanobâṇa, the father in law of Keśava?), Daṇḍi and Harusha see A. Weber's Indische Skizzen. Pampa is perhaps the Hampa of our grammar (p. 4); *C*ittaja) may be the same as Manasija (p. 4). Nâgavarma is a well-known writer on metrics which have been frequently made use of in the Kavijihvâbandhana. We hope soon to be enabled to edit Nâgavarma's *C*handas.

"In such a manner that the learned, when hearing, will be pleased, Basava's tale which concerns the incarnation of the first bull, was finished on a Thursday, being the 10th day of the dark lunar half of the *S*râvaṇa month in the (43rd) year (of the known cyclus) called Saumya, whereby the year of the *S*aka era is formed by arranging the lord of the stars (1), the treasures (9), the eyes (2), and the moon (1)".

This is *S. S.* 1291 = A. D. 1369. The composition of the Purâṇa, therefore, took place 502 years ago. (The king of Kalyâṇa whose minister Basava was, is the same who A. D. 1182 had subverted the dynasty of the *C*âlukyas, see p. XXIII).

Our own impression is that Keśava wrote about 700 years ago.

One of our manuscripts (M. D.) has, at its conclusion, the following note: ಸ್ವಸ್ತಿ ಶ್ರೀ ಜಯಾಭ್ಯುದಯಶಾಲಿವಾಹನಶಕವರ್ಷ ೧೬೨೪ ಸಂದ ವರ್ತಮಾನವಾದ ಚಿತ್ರಭಾನುಸಂವತ್ಸರದ ಮಾಘಬ ೨ ಶುಕ್ರವಾರ ಮಘಾನಕ್ಷತ್ರದಲ್ಲಿಯು ಶಬ್ದಮಣಿದರ್ಪಣಸಂಪೂರ್ಣಂ. It has, therefore, been finished A. D. 1702, being 169 years old.

*Mercara, 3rd October* 1871. ***F. Kittel.***



# ಶಬ್ದಮಣಿದರ್ಪಣಂ.

ನಿಷ್ಠೂರಸಂಜಯ್ಯನವರು ಬರೆದ ವ್ಯಾಖ್ಯಾನಂ ಸಹಿತಮಾದುದು.

**The Jewel Mirror of Grammar, with the Commentary of Nishṭhûra Sanjayya.**

## ಪೀಠಿಕೆ PREFACE.

ಮೂಲಂ, *Original text in the Kanda-metre.*[1)]

The Author's esteem for Speech.

ಶ್ರೀವಾಗ್ದೇವಿಗೆ ಶಬ್ದದಿ
ನಾವಾವಿಂದ್ರಿಯದ ವಿಷಯಮಂ ಶ್ರೋತ್ರದೊಳು |
ದ್ಭಾವಿಪ ನಿರ್ಮಲಮೂರ್ತಿಗಿ
ಳಾವಂದ್ಯೆಗೆ ಶಾಸ್ತ್ರಮುಖದೊಳವನತನಪ್ಪೆಂ || 1 ||

ಪದಚ್ಛೇದಂ, *Separation of the words.*

ಶ್ರೀವಾಗ್ದೇವಿಗೆ ಶಬ್ದದಿಂ ಆ ಆ ಇಂದ್ರಿಯದ ವಿಷಯಮಂ ಶ್ರೋತ್ರದೊಳ್ ಉದ್ಭಾವಿಪ ನಿರ್ಮಲಮೂರ್ತಿಗೆ ಇಳಾವಂದ್ಯೆಗೆ ಶಾಸ್ತ್ರಮುಖದೊಳ್ ಅವನತಂ ಅಪ್ಪೆಂ.

ಅನ್ವಯಂ[2)], *Arrangement of the words in their prose-order, as given in the* ಟೀಕು.

ಆ ಆ ಇಂದ್ರಿಯದ ವಿಷಯಮಂ ಶ್ರೋತ್ರದೊಳ್ ಶಬ್ದದಿಂ ಉದ್ಭಾವಿಪ ನಿರ್ಮಲಮೂರ್ತಿಗೆ ಇಳಾವಂದ್ಯೆಗೆ ಶ್ರೀವಾಗ್ದೇವಿಗೆ ಶಾಸ್ತ್ರಮುಖದೊಳ್ ಅವನತಂ ಅಪ್ಪೆಂ.

---

1) The Kanda-metre is twice:

⏑⏑⏑⏑ | ⏑⏑⏑⏑ | ⏑⏑⏑⏑
⏑⏑⏑⏑ | ⏑⏑⏑⏑ | ⏑⏑⏑⏑ | ⏑⏑⏑⏑ | ⏑⏑⏑⏑ |

The other forms these original verse-feet may assume, are:— —; — ⏑⏑; ⏑⏑—; ⏑—⏑; see our edition of Nâgavarma's Metrics, verses 81, 82, 83, 84.

2) The ಪದಚ್ಛೇದಂ and ಅನ್ವಯಂ are given only in two of our Manuscripts; they will be, however, a help to beginners.

ಟೀಕು, *Meaning of each word and Remarks as given by Nishṭhûra Sanjayya.*

ಆ ಆ ಇಂದ್ರಿಯದ=ಶ್ರೋತ್ರ ತ್ವಕ್ಕು ನೇತ್ರ ಜಿಹ್ವೆ ಘ್ರಾಣಂಗಳೆಂಬ ಸರ್ವೇಂದ್ರಿಯಂಗಳ; ವಿಷಯಮಂ=ಶಬ್ದ ಸ್ಪರ್ಶ ರೂಪ ರಸ ಗಂಧಂಗಳೆಂಬ ಸಮಸ್ತ ವಿಷಯಂಗಳಂ; ಶ್ರೋತ್ರದೊಳ್=ಶ್ರೋತ್ರೇಂದ್ರಿಯವೊಂದಱಲ್ಲಿಯೆ; ಶಬ್ದದಿಂ=ಶಬ್ದದಿಂದೆ; ಉದ್ಭಾವಿಪ=ಅಭಿವ್ಯಕ್ತಮಾಗಿ ಅಱಿಯಿಸುವ; ನಿರ್ಮಲಮೂರ್ತಿಗೆ=ವಿಮಲಸ್ವರೂಪಿಯಾದ; ಇಳಾವಂದ್ಯೆಗೆ=ಭೂಜನದಿಂದೆ ವಂದಿಸಿಕೊಂಬಳಾದ; ಶ್ರೀ=ಐಶ್ವರ್ಯೋಪಲಕ್ಷಿತೆಯಾದ; ವಾಗ್ದೇವಿಗೆ=ವಾಕ್ಕೆಂಬ ದೇವಿಗೆ; ಶಾಸ್ತ್ರಮುಖದೊಳ್=ಶಬ್ದಶಾಸ್ತ್ರಪ್ರಾರಂಭದಲ್ಲಿ; ಅವನತಂ=ನಮಸ್ಕರಿಸುವಾತಂ; ಅಪ್ಪೆಂ=ಆಗುವೆಂ.

ವೃತ್ತಿ, *The author's explanatory Gloss.*

ಕಾಂತಿಯೆಂಬ ಗುಣದೊಳನ್ವಿತೆಯಪ್ಪ ವಾಕ್ಕೆಂಬ ದೇವಿಗೆ ಪಂಚೇಂದ್ರಿಯಂಗಳ ವಿಷಯಮಪ್ಪ ಶಬ್ದ ಸ್ಪರ್ಶ ರೂಪ ರಸ ಗಂಧಂಗಳೊಳ್ಪಂ ಶ್ರೋತ್ರೇಂದ್ರಿಯವೊಂದಱಲ್ಲಿಯೆ ಶಬ್ದಮುಖದಿನಭಿವ್ಯಕ್ತಿಯಂ ಮಾಳ್ಪ ವಿಮಲಸ್ವರೂಪಿಗೆ ಭುವನಸ್ತುತ್ಯೆಗೆಯೀ ಶಾಸ್ತ್ರಪ್ರಾರಂಭದಲ್ಲಿ ನಮಸ್ಕರಿಸುವಾತನಪ್ಪೆಂ.

ಮೂಲಂ.

The Author's name is Keṣava, his father is Mallikârjuna, and he is a daughter's son of the poet Sumanobâṇa who is a teacher to the Yâdavas.

ಕವಿಸುಮನೋಬಾಣನ ಯಾ
ದವಕಟಕಾಚಾರ್ಯನೆಸೆವ ದೌಹಿತ್ರನೆನಾಂ |
ಕವಿಕೇಶವನೆಂ ಯೋಗಿ
ಪ್ರವರಚಿದಾನಂದಮಲ್ಲಿಕಾರ್ಜುನಸುತನೆಂ || 2 ||

ಪದಚ್ಛೇದಂ.

ಕವಿಸುಮನೋಬಾಣನ ಯಾದವಕಟಕಾಚಾರ್ಯನ ಎಸೆವ ದೌಹಿತ್ರನೆಂ ಆಂ, ಕವಿಕೇಶವನೆಂ, ಯೋಗಿಪ್ರವರಚಿದಾನಂದಮಲ್ಲಿಕಾರ್ಜುನಸುತನೆಂ. (see S. 219.)

ಅನ್ವಯಂ.

ಯಾದವಕಟಕಾಚಾರ್ಯನ ಕವಿಸುಮನೋಬಾಣನ ಎಸೆವ ದೌಹಿತ್ರನೆಂ, ಯೋಗಿಪ್ರವರಚಿದಾನಂದಮಲ್ಲಿಕಾರ್ಜುನಸುತನೆಂ, ಆಂ ಕವಿಕೇಶವನೆಂ.

ಟೀಕು.

ಯಾದವ=ಯದುಕುಲದ ಕ್ಷತ್ರಿಯರ; ಕಟಕ=ಸಮೂಹಕ್ಕೆ; ಆಚಾರ್ಯನ=ಗುರುವಾದ; ಕವಿಸುಮನೋಬಾಣನ=ಸುಮನೋಬಾಣನೆಂಬ ಕವೀಶ್ವರನ; ಎಸೆವ ದೌಹಿತ್ರನೆಂ=ಶೋಭಿಸುವ ಮಗಳ ಮಗನಾದ; ಯೋಗಿ=ಯೋಗಿಗಳಲ್ಲಿ; ಪ್ರವರ=ಅತ್ಯಂತ ಶ್ರೇಷ್ಠನಾದ; ಚಿದಾನಂದಮಲ್ಲಿಕಾರ್ಜುನ=ಜ್ಞಾನಾನಂದಮುಳ್ಳ ಮಲ್ಲಿಕಾರ್ಜುನನ; ಸುತನೆಂ=ಮಗನಾದ; ಆಂ=ಶಾಸ್ತ್ರಕಾರನಾದ ನಾಂ; ಕವಿಕೇಶವನೆಂ=ಕೇಶಿರಾಜಕವೀಶ್ವರಂ.

ವೃತ್ತಿ.

ಯಾದವಕಟಕೋಪಾಧ್ಯಾಯನಪ್ಪ ಕವಿಸುಮನೋಬಾಣನ ಮಗಳ ಮಗನೆಂ, ಯೋಗಿವಲ್ಲಭನಪ್ಪ ಮಲ್ಲಿಕಾರ್ಜುನನಂದನನೆಂ, ಕೇಶಿರಾಜಕವಿಯೆಂ ಆಂ.

ಮೂಲಂ.

This Grammar was composed at the request of learned men.

ಗುಣಮಮರೆ ಶಬ್ದಮಣಿದ
ರ್ಪಣನಾಮಮನಿಟ್ಟು ನೆಱೆಯೆ ಕರ್ಣಾಟಕಲ |
ಕ್ಷಣಶಬ್ದಶಾಸ್ತ್ರಮಂ ಲಾ
ಕ್ಷಣಿಕರ್ಪೇೞೆಂದು ಬೆಸಸೆ ಬಗೆವುಗೆ ಪೇೞ್ದೆಂ || 3 ||

ಪದಚ್ಛೇದಂ.

ಗುಣಂ ಅಮರೆ, ಶಬ್ದಮಣಿದರ್ಪಣನಾಮಮಂ ಇಟ್ಟು ನೆಱೆಯೆ, ಕರ್ಣಾಟಕಲಕ್ಷಣಶಬ್ದಶಾಸ್ತ್ರಮಂ—ಲಾಕ್ಷಣಿಕರ್, ಪೇೞ್ ಎಂದು, ಬೆಸಸೆ—ಬಗೆವುಗೆ ಪೇೞ್ದೆಂ.

ಯಥಾನ್ವಯಂ.

ಟೀಕು.

ಗುಣಂ=ಶಬ್ದಸಾಮರ್ಥ್ಯವೆಂಬ ಗುಣಂ; ಅಮರೆ=ಪೊರ್ದುಗೆಯಾಗಲಾಗಿ; ಶಬ್ದಮಣಿದರ್ಪಣನಾಮಮಂ=ಶಬ್ದಮಣಿದರ್ಪಣವೆಂಬ ಪೆಸರಿಂ; ಇಟ್ಟು=ಕೊಟ್ಟು; ನೆಱೆಯೆ=ಪೆರ್ಚುಗೆಯಾಗೆ; ಕರ್ಣಾಟಕ=ಕನ್ನಡಕ್ಕೆ; ಲಕ್ಷಣ=ಲಕ್ಷಣವಾದ; ಶಬ್ದಶಾಸ್ತ್ರಮಂ=ವ್ಯಾಕರಣಶಾಸ್ತ್ರವಂ; ಲಾಕ್ಷಣಿಕರ್=ಲಕ್ಷಣಾಚಾರ್ಯರು; ಪೇೞೆಂದು=ಹೇಳೆಂದು; ಬೆಸಸೆ=ನಿರೂಪಿಸೆ; ಬಗೆವುಗೆ=ಮನಂಬುಗೆ; ಪೇೞ್ದೆಂ=ಹೇಳ್ದೆಂ.

ವೃತ್ತಿ.

ಶಬ್ದಸಾಮರ್ಥ್ಯಮಮರೆ, ವಿಸ್ತಾರದಿಂ ಕರ್ಣಾಟಕವ್ಯಾಕರಣಮಂ, ಶಬ್ದಮಣಿದರ್ಪಣಮೆಂಬ ಪೆಸರನಿಟ್ಟು—ಲಕ್ಷಣಾಚಾರ್ಯರ್, ಪೇೞೆಂದು, ಬೆಸಸೆ—ಮನಂಬುಗುವಂತೆ, ಪೇೞ್ದೆಂ.

ಮೂಲಂ.

Let learned men receive this work kindly!

ಅವಧರಿಪುದು ವಿಬುಧರ್ ದೋ
ಷಮಿದಱೊಳೇನಾನುಮುಳ್ಳೊಡಂ ಪ್ರಿಯದಿಂ ತಿ |
ರ್ದುವುದು ಗುಣಯುಕ್ತಮುಂ ದೋ
ಷವಿದೂರಮುಮಾಗೆ ಮೆಚ್ಚಿ ಕೈಕೊಳ್ವುದಿದಂ || 4 ||

ಪದಚ್ಛೇದಂ.

ಅವಧರಿಪುದು ವಿಬುಧರ್; ದೋಷಂ ಇದಱೊಳ್ ಏನಾನುಂ ಉಳ್ಳೊಡಂ ಪ್ರಿಯದಿಂ ತಿರ್ದುವುದು; ಗುಣಯುಕ್ತಮುಂ ದೋಷವಿದೂರಮುಂ ಆಗೆ, ಮೆಚ್ಚಿ, ಕೈಕೊಳ್ವುದು ಇದಂ.

ಅನ್ವಯಂ.

ಇದಂ ವಿಬುಧರ್ ಅವಧರಿಪುದು; ಇದಱೊಳ್ ದೋಷಂ ಏನಾನುಂ ಉಳ್ಳೊಡಂ ಪ್ರಿಯದಿಂ ತಿರ್ದುವುದು; ಗುಣಯುಕ್ತಮುಂ ದೋಷವಿದೂರಮುಂ ಆಗೆ, ಮೆಚ್ಚಿ, ಕೈಕೊಳ್ವುದು.

ಟೀಕು.

ಇದಂ=ಈ ಶಬ್ದಮಣಿದರ್ಪಣವಂ; ವಿಬುಧರ್=ವಿದ್ವಾಂಸರ್; ಅವಧರಿಪುದು=ಕೇಳ್ವುದು; ಇದಱೊಳ್=ಈ ಶಬ್ದಮಣಿದರ್ಪಣದಲ್ಲಿ; ದೋಷಂ=ಅಷ್ಟಾದಶದೋಷಂ; ಏನಾನುಂ=ಎತ್ತಾನುಂ; ಉಳ್ಳೊಡಂ=ಉಂಟಾದೊಡೆಯುಂ; ಪ್ರಿಯದಿಂ=ಪ್ರೀತಿಯಿಂದೆ; ತಿರ್ದುವುದು=ನೇರಿತ್ತಂಮಾಡುವದು; ಗುಣಯುಕ್ತಮುಂ=ಶಬ್ದಸಾಮರ್ಥ್ಯವೆಂಬ ಗುಣದೊಡನೆ ಕೂಡಿದುದುಂ; ದೋಷವಿದೂರಮುಂ=ದೋಷರಹಿತಮಾದುದುಂ; ಆಗೆ=ಆಗಲಾಗಿ; ಮೆಚ್ಚಿ=ಒಡಂಬಟ್ಟು; ಕೈಕೊಳ್ವುದು=ಅಂಗೀಕರಿಸುವದು.

ವೃತ್ತಿ.

ಶಬ್ದಮಣಿದರ್ಪಣದೊಳೇನಾನುಂ ದೋಷಮುಳ್ಳೊಡಂ ವಿದ್ವಾಂಸರವಧರಿಸಿ, ಕೇಳ್ದು, ಕರುಣದಿಂ, ಮನಪ್ರೀತಿವೆರಸಿ, ತಿರ್ದುವುದು; ಗುಣಾನ್ವಿತಮುಂ ನಿರ್ದೋಷಮುಮಾಗೆ, ಮೆಚ್ಚಿ, ಸ್ವೀಕರಿಪುದು.

ಮೂಲಂ.

ಗಜಗನ ಗುಣನಂದಿಯ ಮನ
ಸಿಜನಸಗನ ಚಂದ್ರಭಟ್ಟಗುಣವರ್ಮಶ್ರೀ |
ವಿಜಯರ ಹೊಂನನ ಹಂಪನ
ಸುಜನೋತ್ತಂಸನ ಸುಮಾರ್ಗಮಿದಱೊಳೆ ಲಕ್ಷ್ಯಂ || 5 ||

In this work quotations (cf. S. 196) have been made, for instance, from the works of the poets Gajaga, Guṇanandi (s. S. 24?), Manasija, Asaga, Candrabhaṭṭa, Guṇavarma (s. S. 118), Śrîvijaya, Honna, Hampa and Sujanottaṇsa (s. Ss. 88; 90; 108; 134?)

ಪದಚ್ಛೇದಂ.

ಗಜಗನ, ಗುಣನಂದಿಯ, ಮನಸಿಜನ, ಅಸಗನ, ಚಂದ್ರಭಟ್ಟಗುಣವರ್ಮಶ್ರೀವಿಜಯರ, ಹೊಂನನ, ಹಂಪನ, ಸುಜನೋತ್ತಂಸನ ಸುಮಾರ್ಗಂ ಇದಱೊಳೆ ಲಕ್ಷ್ಯಂ.

ಯಥಾನ್ವಯಂ.

ಟೀಕು.

ಗಜಗನ=ಗಜಗನೆಂಬ ಕವೀಶ್ವರನ; ಗುಣನಂದಿಯ=ಗುಣನಂದಿಯೆಂಬ ಕವೀಶ್ವರನ; ಮನಸಿಜನ=ಮನಸಿಜನೆಂಬ ಕವೀಶ್ವರನ; ಅಸಗನ=ಅಸಗನೆಂಬ ಕವೀಶ್ವರನ; ಚಂದ್ರಭಟ್ಟಗುಣವರ್ಮಶ್ರೀವಿಜಯರ=ಚಂದ್ರಭಟ್ಟನೆಂಬ ಗುಣವರ್ಮನೆಂಬ ಶ್ರೀವಿಜಯನೆಂಬೀ ಕವೀಶ್ವರರ; ಹೊಂನನ=ಹೊಂನನೆಂಬ ಕವೀಶ್ವರನ; ಹಂಪನ=ಹಂಪನೆಂಬ ಕವೀಶ್ವರನ; ಸುಜನೋತ್ತಂಸನ=ಸುಜನೋತ್ತಂಸನೆಂಬ ಕವೀಶ್ವರನ; ಸುಮಾರ್ಗಂ=ಲೇಸಾದ ಕಾವ್ಯಮಾರ್ಗಂ; ಇದಱೊಳೆ=ಈ ಶಬ್ದಮಣಿದರ್ಪಣದಲ್ಲಿಯೆ; ಲಕ್ಷ್ಯಂ=ಉದಾಹರಣೆಗಳ್ ಕುರುವಾಗಿರ್ಪವು.

ವೃತ್ತಿ.

ಈ ಕವಿಗಳಾದಿಯಾದ ಮತ್ತಂ ಪಲಂಬರ್ಪ್ರಸಿದ್ಧ ಕವಿಗಳುದಾಹರಣಂಗಳಿ ದಱಿಕೊಳೊಳವು.

ಮೂಲಂ.

Besides the Author wrote an explanatory Gloss (ಅರ್ಥವೃತ್ತಿ) to each Rule (ಸೂತ್ರಂ).

ಪ್ರಾಸಚ್ಛಂದೋನ್ವಯವಿ
ನ್ಯಾಸದಿನಂತಿಂತು ಶಬ್ದಮಿರ್ಕುಂ ವೃತ್ತಿ |
ನ್ಯಾಸಂ ತದ್ವ್ಯಾಕುಳಮೆಂ
ದಾ ಸೂತ್ರಕ್ಕರ್ಥವೃತ್ತಿ ವರ್ತಿಸೆ ಬರೆದೆಂ || 6 ||

ಪದಚ್ಛೇದಂ.

ಪ್ರಾಸಚ್ಛಂದೋನ್ವಯವಿನ್ಯಾಸದಿಂ ಅಂತು ಇಂತು ಶಬ್ದಂ ಇರ್ಕುಂ; ವೃತ್ತಿನ್ಯಾಸಂ ತದ್ವ್ಯಾಕುಳಂ ಎಂದು, ಆ ಸೂತ್ರಕ್ಕೆ ಅರ್ಥವೃತ್ತಿ ವರ್ತಿಸೆ ಬರೆದೆಂ.

ಅನ್ವಯಂ.

ಪ್ರಾಸಚ್ಛಂದೋನ್ವಯವಿನ್ಯಾಸದಿಂ ಶಬ್ದಂ ಅಂತಿಂತು ಇರ್ಕುಂ; ವೃತ್ತಿನ್ಯಾಸಂ ತದ್ವ್ಯಾಕುಳಂ ಎಂದು, ಆ ಸೂತ್ರಕ್ಕೆ ಅರ್ಥವೃತ್ತಿ ವರ್ತಿಸೆ ಬರೆದೆಂ.

ಟೀಕು.

ಪ್ರಾಸ=ಷಟ್ಪ್ರಾಸಂಗಳ; ಛಂದಃ=ಛಂದಸ್ಸಿನ; ಅನ್ವಯ=ಅರ್ಥದ; ವಿನ್ಯಾಸದಿಂ=ನಿಱುಗೆಯಿಂದೆ; ಶಬ್ದಂ=ಶಬ್ದಂಗಳ್; ಅಂತಿಂತು=ಪಲ್ಲಟವಾಗಿ; ಇರ್ಕುಂ=ಇರ್ಪುವು; ವೃತ್ತಿನ್ಯಾಸಂ=ವೃತ್ತಿವಿಸ್ತಾರಂ; ತತ್=ಅದು; ವ್ಯಾಕುಳಮೆಂದು=ಸಂದೇಹವಪ್ಪುದೆಂದು; ಆ ಸೂತ್ರಕ್ಕೆ=ಆಯಾ ಸೂತ್ರಂಗಳ್ಗೆ; ಅರ್ಥವೃತ್ತಿ=ಅರ್ಥದ ವೃತ್ತಿಯು; ವರ್ತಿಸೆ=ಪ್ರವರ್ತಿಸೆ; ಬರೆದೆಂ=(ಅಂಥ) ವೃತ್ತಿಯಂ ಲಿಖಿಸಿದೆಂ.

ವೃತ್ತಿ.

ಪ್ರಾಸದ ಛಂದದ ಅನ್ವಯದ ನಿಱುಗೆಯಿಂ (ನಿಱುಗೆಯಿಂ) ಶಬ್ದಂಗಳ್ ವ್ಯತ್ಯಯಮಾಗಿರ್ಪುವು; ಅವಱಿವಱ[1] ಬಱಿಯೊಳ್ವೃತ್ತಿಯ ವಿಸ್ತಾರಂ ವ್ಯಾಕುಲಮಾದಪುದೆಂದಾ(ಯಾ) ಸೂತ್ರಕ್ಕೆ (ಸೂತ್ರಂಗಳ್ಗೆ) ತಾತ್ಪರ್ಯಾರ್ಥಂ ಪ್ರವರ್ತಿಸುತ್ತಮಿರೆ ಬರೆದೆಂ.

ಮೂಲಂ.

The learned will accept this work favourably on account of its completeness.

ಜನಮಂಗೀಕರಿಪುದು ನೆ
ಟ್ಟನೆ ಸಂಬಂಧಾಭಿಧೇಯಶಕ್ಯಾನುಷ್ಠಾ |
ನನಿಜೇಷ್ಟಸಿದ್ಧಿಗಳ್ನೆಲ
ಸಿ ನಿಂದ ಕಾರಣದೆ ಶಬ್ದಮಣಿದರ್ಪಣಮಂ || 7 ||

1) Forms of the Neuter. See Ss. 95; 96; 110.

ಪದಚ್ಛೇದಂ.

ಜನಂ ಅಂಗೀಕರಿಪುದು, ನೆಟ್ಟನೆ ಸಂಬಂಧಾಭಿಧೇಯಶಕ್ಯಾನುಷ್ಠಾನನಿಜೇಷ್ಟಸಿದ್ಧಿಗಳ್ ನೆಲಸಿ ನಿಂದ ಕಾರಣದೆ, ಶಬ್ದಮಣಿದರ್ಪಣಮುಂ.

ಅನ್ವಯಂ.

ಸಂಬಂಧಾಭಿಧೇಯಶಕ್ಯಾನುಷ್ಠಾನನಿಜೇಷ್ಟಸಿದ್ಧಿಗಳ್ ನೆಟ್ಟನೆ ನೆಲಸಿ ನಿಂದ ಕಾರಣದೆ ಶಬ್ದಮಣಿದರ್ಪಣಮುಂ ಜನಂ ಅಂಗೀಕರಿಪುದು.

ಟೀಕು.

ಸಂಬಂಧ=ಪ್ರಕೃತಿಪ್ರತ್ಯಯಸಂಬಂಧ[1] ಲಕ್ಷ್ಯಲಕ್ಷಣಸಂಬಂಧ[2] ವಿಶೇಷ್ಯವಿಶೇಷಣಸಂಬಂಧ[3] ಕರ್ತೃಕರ್ಮಕ್ರಿಯಾಸಂಬಂಧಮೆಂದು[4], ಪೊರ್ದುಗೆಗೆ ನಿಮಿತ್ತಂ; ಅಭಿಧೇಯಂ=ಅರ್ಥಂ; ಶಕ್ಯಾನುಷ್ಠಾನಂ=ಆ ಅರ್ಥವನ್ನು ಸಾಧಿಸಲ್ಕಕ್ಕ ಉದ್ಯೋಗಂ; ನಿಜ=ತನ್ನ; ಇಷ್ಟಸಿದ್ಧಿಗಳ್=ಇಷ್ಟಾರ್ಥಸಿದ್ಧಿಗಳ್; ನೆಟ್ಟನೆ=ವ್ಯಕ್ತವಾಗಿ; ನೆಲಸಿ=ನೆಲೆಗೊಂಡು; ನಿಂದ ಕಾರಣದೆ=ಇರ್ಪ ಕಾರಣದಿಂದೆ; ಶಬ್ದಮಣಿದರ್ಪಣಮುಂ=ಶಬ್ದಮಣಿದರ್ಪಣವೆಂಬ ಶಾಸ್ತ್ರಮುಂ; ಜನಂ=ವಿದ್ವಜ್ಜನಂ; ಅಂಗೀಕರಿಪುದು=ಸ್ವೀಕರಿಸುವದು.

ವೃತ್ತಿ.

ಸಂಬಂಧಮೆಂದು, ಪೊರ್ದುಗೆಗೆ ನಿಮಿತ್ತಂ; ಅಭಿಧೇಯಮೆಂದರ್ಥಂ; ಶಕ್ಯಾನುಷ್ಠಾನಮೆಂದಾ ಪದಾರ್ಥಮಂ ಸಾಧಿಸಲ್ಕಕ್ಕುದ್ಯೋಗಂ; ಇಷ್ಟಸಿದ್ಧಿಯೆಂದದಱ ಫಲಪ್ರಾಪ್ತಿ. ಇವು ಶಬ್ದಮಣಿದರ್ಪಣದೊಳ್ನೆಲೆಗೊಂಡಿರ್ಪುದಱಿಂ ಸ್ವೀಕರಿಸದ ಲೋಕಮಿಲ್ಲ.

ಮೂಲಂ.

This work has 8 Chapters.

ಕ್ರಮದಿಂದೆ ಸಂಧಿ ನಾಮಂ
ಸಮಾಸಮಾ ತದ್ಧಿತಂ ಪೊದಱಿಖ್ಯಾತಂ |
ಪ್ರಮುದಿತ ಧಾತುಮಪಭ್ರಂ
ಶಮವ್ಯಯಂ ಸಂಧಿ ಶಬ್ದಮಣಿದರ್ಪಣದೊಳ್ || 8 ||

ಪದಚ್ಛೇದಂ.

ಕ್ರಮದಿಂದೆ ಸಂಧಿ, ನಾಮಂ, ಸಮಾಸಂ, ಆ ತದ್ಧಿತಂ, ಪೊದಱಿ ಆಖ್ಯಾತಂ, ಪ್ರಮುದಿತ ಧಾತುಂ, ಅಪಭ್ರಂಶಂ, ಅವ್ಯಯಂ—ಸಂಧಿ ಶಬ್ದಮಣಿದರ್ಪಣದೊಳ್.

ಅನ್ವಯಂ.

ಶಬ್ದಮಣಿದರ್ಪಣದೊಳ್ ಕ್ರಮದಿಂದೆ ಸಂಧಿ, ನಾಮಂ, ಸಮಾಸಂ, ಆ ತದ್ಧಿತಂ, ಪೊದಱಿಖ್ಯಾತಂ, ಪ್ರಮುದಿತಧಾತುಂ, ಅಪಭ್ರಂಶಂ, ಅವ್ಯಯಂ ಸಂಧಿ.

1) Relation between themes and affixes. 2) Relation between definables and definitions. 3) Relation between Substantives and Adjectives. 4) Relation between Subjects, Objects and Predicates.

ಟೀಕು.

ಶಬ್ದಮಣಿದರ್ಪಣದೊಳ್=ಶಬ್ದಮಣಿದರ್ಪಣದಲ್ಲಿ; ಕ್ರಮದಿಂದೆ=ತರುವಾಯಿಂದೆ; ಸಂಧಿ=ಸಂಧಿಪ್ರಕರಣಮೆಂದು; ನಾಮಂ=ನಾಮಪ್ರಕರಣಮೆಂದು; ಸಮಾಸಂ=ಸಮಾಸಪ್ರಕರಣಮೆಂದು; ಆ ತದ್ಧಿತಂ=ಆ ಪ್ರಸಿದ್ಧವಾದ ತದ್ಧಿತಪ್ರಕರಣಮೆಂದು; ಪೊದಳ್ದಿ=ಪ್ರಸಿದ್ಧವಡೆದ; ಆಖ್ಯಾತಂ=ಆಖ್ಯಾತಪ್ರಕರಣಮೆಂದು; ಪ್ರಮುದಿತಧಾತುಂ=ವಿಶೇಷವಾಗಿ ಸಂತೋಷಿಸಲ್ಪಟ್ಟ ಧಾತುಪ್ರಕರಣಮೆಂದು; ಅಪಭ್ರಂಶಂ=ಅಪಭ್ರಂಶಪ್ರಕರಣಮೆಂದು; ಅವ್ಯಯಂ=ಅವ್ಯಯಪ್ರಕರಣಮೆಂದು; ಸಂಧಿ=ಸಂಧಿಗಳೆಂಟು.

ವೃತ್ತಿ.

ತರುವಾಯಿಂ ಸಂಧಿಯೆಂದುಂ, ನಾಮಮೆಂದುಂ, ಸಮಾಸಮೆಂದುಂ, ತದ್ಧಿತಮೆಂದುಮ್, ಆಖ್ಯಾತಮೆಂದುಂ, ಧಾತುಮೆಂದುಮ್, ಅಪಭ್ರಂಶಮೆಂದುಮ್, ಅವ್ಯಯಮೆಂದುಮ್, ಈ ಶಬ್ದಮಣಿದರ್ಪಣದೊಳ್ಸಂಧಿಯೆಂಟಕ್ಕುಂ.

ಮೂಲಂ.

Origin of Sound (ಶಬ್ದದ್ರವ್ಯಂ) and Speech (or words, ಶಬ್ದಂ; cf. S. 34).

ಅನುಕೂಲಪವನನಿಂ ಜೀ
ವನಿಷ್ಟದಿಂ ನಾಭಿಮೂಲದೊಳ್ಕಹಳೆಯ ಪಾಂ |
ಗಿನ ವೊಲ್ ಶಬ್ದದ್ರವ್ಯಂ
ಜನಿಯಿಸುಗುಂ ಶ್ವೇತಮದಱ ಕಾರ್ಯಂ ಶಬ್ದಂ || 9 ||

ಪದಚ್ಛೇದಂ.

ಅನುಕೂಲಪವನನಿಂ ಜೀವನ ಇಷ್ಟದಿಂ ನಾಭಿಮೂಲದೊಳ್ ಕಹಳೆಯ ಪಾಂಗಿನ ವೊಲ್ ಶಬ್ದದ್ರವ್ಯಂ ಜನಿಯಿಸುಗುಂ ಶ್ವೇತಂ; ಅದಱ ಕಾರ್ಯಂ ಶಬ್ದಂ.

ಅನ್ವಯಂ.

ಜೀವನ ಇಷ್ಟದಿಂ ಅನುಕೂಲಪವನನಿಂ ನಾಭಿಮೂಲದೊಳ್ ಕಹಳೆಯ ಪಾಂಗಿನ ವೊಲ್ ಶಬ್ದದ್ರವ್ಯಂ ಶ್ವೇತಂ ಜನಿಯಿಸುಗುಂ; ಅದಱ ಕಾರ್ಯಂ ಶಬ್ದಂ.

ಟೀಕು.

ಜೀವನ=ಜೀವಾತ್ಮನ; ಇಷ್ಟದಿಂ=ಇಚ್ಛೆಯಿಂದೆ; ಅನುಕೂಲಪವನನಿಂ=ಜೀವನೊಡನೆ ಅನುಕೂಲವಾದ ಪ್ರಾಣಮಾರುತನಿಂದೆ; ನಾಭಿಮೂಲದೊಳ್=ನಾಭಿಯ ಮೊದಲಲ್ಲಿ; ಕಹಳೆಯ ಪಾಂಗಿನ ವೊಲ್=ನೆಗಪಿದ ಕಹಳೆಯಾಕಾರದ ಹಾಗೆ; ಶಬ್ದದ್ರವ್ಯಂ=ಶಬ್ದವೆಂಬ ದ್ರವ್ಯಂ; ಶ್ವೇತಂ=ಧವಳವರ್ಣಮಾಗಿ; ಜನಿಯಿಸುಗುಂ=ಪುಟ್ಟುವದು.

ವಿಚಾರಂ, *Remark.*

ಶಬ್ದದ್ರವ್ಯಮೆಂದೊಡೆ ಘಟಕ್ಕೆ ಮೃತ್ತಿಕೆಯೆಂತಂತೆ ಅಕ್ಷರಾತ್ಮಕವಾದ ಶಬ್ದಂಗಳ್ಪುಟ್ಟುವುದರ್ಕೆ ಉಪಾದಾನಕಾರಣವಾದ ವಸ್ತುವೆಂದಱವುದು; ಶಬ್ದಕ್ಕೆ ದ್ರವ್ಯತ್ವಮಂ ಜೈನರ್ ಪೇಳ್ದಪರ್.

ಅದಱ=ಆ ಶಬ್ದದ್ರವ್ಯದ; ಕಾರ್ಯಂ=ಪ್ರಯೋಜನಂ; ಶಬ್ದಂ=ಶಬ್ದಮಕ್ಕುಂ.

### ವೃತ್ತಿ.

ಅನುಕೂಲಪವನನ ಬೆಂಬೞಿಯಿಂ ಜೀವನೊಡನೆ ಸಂಬಂಧವಾಗಿರ್ಪುದಱಿಂ ನಾಭಿಯ ಮೊದಲಲ್ಲಿ ನೆಗಪಿದ ಕಹಳೆಯಾಕಾರದಿಂ ಶಬ್ದಮೆಂಬ ದ್ರವ್ಯಂ ಧವಳವರ್ಣವಾಗಿ ಪುಟ್ಟುಗುಂ; ಅದಱ ಕಾರ್ಯಮುಂ ಶಬ್ದಮೆಂಬರ್.

### ಮೂಲಂ.

Usefulness of Grammar.

ವ್ಯಾಕರಣದಿಂದೆ ಪದಮಾ
ವ್ಯಾಕರಣದ ಪದದಿನರ್ಥಮರ್ಥದೆ ತತ್ವಾ |
ಲೋಕಂ ತತ್ವಾಲೋಕದಿ
ನಾಕಾಂಕ್ಷಿಪ ಮುಕ್ತಿಯಕ್ಕುಮದೆ ಬುಧರ್ಗೆ ಫಲಂ || 10 ||

### ಪದಚ್ಛೇದಂ.

ವ್ಯಾಕರಣದಿಂದೆ ಪದಂ, ಆ ವ್ಯಾಕರಣದ ಪದದಿಂ ಅರ್ಥಂ, ಅರ್ಥದೆ ತತ್ವಾಲೋಕಂ, ತತ್ವಾಲೋಕದಿಂ ಆಕಾಂಕ್ಷಿಪ ಮುಕ್ತಿ ಅಕ್ಕುಂ; ಅದೆ ಬುಧರ್ಗೆ ಫಲಂ.

### ಯಥಾನ್ವಯಂ.

### ಟೀಕು.

ವ್ಯಾಕರಣದಿಂದೆ=ಶಬ್ದಶಾಸ್ತ್ರದಿಂದೆ; ಪದಂ=ಪದಸಿದ್ಧಿ; ಅಕ್ಕುಂ=ಅಪ್ಪುದು; ಆ ವ್ಯಾಕರಣದ=ಆ ಶಬ್ದಶಾಸ್ತ್ರದ; ಪದದಿಂ=ಪದಸಿದ್ಧಿಯಿಂದೆ; ಅರ್ಥಂ=ಅರ್ಥವಿಚಾರಂ ಅಪ್ಪುದು; ಅರ್ಥದೆ=ಅರ್ಥವಿಚಾರದಿಂದೆ; ತತ್ವಾಲೋಕಂ=ತತ್ವಜ್ಞಾನಂ ಅಪ್ಪುದು; ತತ್ವಾಲೋಕದಿಂ=ತತ್ವಜ್ಞಾನದಿಂದೆ; ಆಕಾಂಕ್ಷಿಪ ಮುಕ್ತಿ=ಬಯಸಲ್ಪಡುತ್ತಿರ್ಪ ಮೋಕ್ಷಂ ಅಪ್ಪುದು; ಅದೆ=ಆ ಮೋಕ್ಷವೆ; ಬುಧರ್ಗೆ=ವಿದ್ವಾಂಸರ್ಗೆ; ಫಲಂ=ಸತ್ಫಲಂ ಅಪ್ಪುದು.

### ವೃತ್ತಿ.

ವ್ಯಾಕರಣದಿಂದೆ ಪದಸಿದ್ಧಿಯಕ್ಕುಂ; ಆ ವ್ಯಾಕರಣದ ಪದಸಿದ್ಧಿಯಿಂದರ್ಥಜ್ಞಾನಮಕ್ಕುಂ; ಆ ಜ್ಞಾನದಿಂ ತತ್ವವಿಚಾರಮಕ್ಕುಂ; ತತ್ವವಿಚಾರದಿಂ ಬಯಸುವ ಮುಕ್ತಿದೊರೆಕೊಳ್ಗುಂ; ಬುಧರ್ಗದುಕಾರಣದಿಂ ವ್ಯಾಕರಣಮುಪಾದೇಯಂ.



# ೧ನೆಯ ಅಧ್ಯಾಯಂ. I CHAPTER.

## ಸಂಧಿ.

### ON LETTERS AND EUPHONISM.

### 1. ಅಕ್ಷರಸಂಜ್ಞಾಪ್ರಕರಣಂ. First Section: On Letters.

ಸೂತ್ರಂ. *Aphorism or Rule.*

Letters the first subject to be treated of.

ಆರಯೆ ತಚ್ಛಾಸ್ತ್ರವ್ಯವ
ಹಾರ ಜ್ಞಾನಾರ್ಥಮಾಗಿ ಪೇಟಿಲ್ಪಡೆಗುಂ |
ಧೀರರಿನಕ್ಷರಸಂಜ್ಞಾ
ಕಾರಂ ವ್ಯಾಕರಣದಾದಿಯೊಳ್ಪರಿವಿಡಿಯಿಂ || 1 ||

ಪದಚ್ಛೇದಂ.

ಆರಯೆ ತಚ್ಛಾಸ್ತ್ರವ್ಯವಹಾರ ಜ್ಞಾನಾರ್ಥಂ ಆಗಿ, ಪೇಟಿಲ್ ಪಡೆಗುಂ ಧೀರರಿಂ ಅಕ್ಷರಸಂಜ್ಞಾಕಾರಂ ವ್ಯಾಕರಣದ ಆದಿಯೊಳ್ ಪರಿವಿಡಿಯಿಂ.

ಅನ್ವಯಂ.

ತಚ್ಛಾಸ್ತ್ರವ್ಯವಹಾರ ಜ್ಞಾನಾರ್ಥಂ ಆಗಿ ಆರಯೆ, ವ್ಯಾಕರಣದ ಆದಿಯೊಳ್ ಧೀರರಿಂ ಅಕ್ಷರಸಂಜ್ಞಾಕಾರಂ ಪರಿವಿಡಿಯಿಂ ಪೇಟಿಲ್ ಪಡೆಗುಂ.

ಟೀಕು.

ತಚ್ಛಾಸ್ತ್ರ=ಆ ಶಬ್ದಶಾಸ್ತ್ರದ; ವ್ಯವಹಾರ=ವ್ಯವಹಾರಮಂ; ಜ್ಞಾನಾರ್ಥಮಾಗಿ=ತಿಳಿವ ಪ್ರಯೋಜನಮಾಗಿ; ಆರಯೆ=ವಿಚಾರಿಸೆ; ವ್ಯಾಕರಣದ=ವ್ಯಾಕರಣಶಾಸ್ತ್ರದ; ಆದಿಯೊಳ್=ಮೊದಲಲ್ಲಿ; ಧೀರರಿಂ=ವಿದ್ವಾಂಸರಿಂದೆ; ಅಕ್ಷರಸಂಜ್ಞಾಕಾರಂ=ಅಕ್ಷರಂಗಳ ಸಂಜ್ಞಾಸ್ವರೂಪಂ; ಪರಿವಿಡಿಯಿಂ=ತರುವಾಯಿಂದೆ; ಪೇಟಿಲ್ಪಡೆಗುಂ=ಹೇಳಲ್ಪಡುವುದು.

ವೃತ್ತಿ.

ಆ ಶಬ್ದಶಾಸ್ತ್ರವ್ಯವಹಾರಮಂ ತಿಳಿಯಲೋಸ್ಕರಮಾಗಕ್ಷರಸಂಜ್ಞಾಸ್ವರೂಪಂ ವ್ಯಾಕರಣದ ಮೊದಲೊಳ್ ಕ್ರಮದಿಂ ಪೇಟಿಲ್ಪಡೆಗುಂ.

ಸೂತ್ರಂ.

The two synonyms for "Letter" are ಅಕ್ಷರಂ and ವರ್ಣಂ.

ಅಕ್ಕರಮುಂ ವರ್ಣಮುಮೆಂ
ದಕ್ಕುಂ ಶುದ್ಧಾಕ್ಷರಕ್ಕೆ ನಾಮಂ ಬರೆಪಂ ।
ಬೊಕ್ಕುಚ್ಚರಿಸಲ್ಬಾರದು
ವಕ್ಕರಮಲ್ತವು ಘನಸ್ವನಾದಿಧ್ವನಿಗಳ್ ॥ 2 ॥

ಪದಚ್ಛೇದಂ.

ಅಕ್ಕರಮುಂ ವರ್ಣಮುಂ ಎಂದು, ಅಕ್ಕುಂ ಶುದ್ಧಾಕ್ಷರಕ್ಕೆ ನಾಮಂ; ಬರೆಪಂಬೊಕ್ಕು ಉಚ್ಚರಿಸಲ್ ಬಾರದುವು ಅಕ್ಕರಂ ಅಲ್ತು, ಅವು ಘನಸ್ವನಾದಿಧ್ವನಿಗಳ್.

ಯಥಾನ್ವಯಂ.

ಟೀಕು.

ಅಕ್ಕರಮುಂ=ಅಕ್ಕರಮೆಂದುಂ; ವರ್ಣಮುಂ=ವರ್ಣಮೆಂದುಂ; ಶುದ್ಧಾಕ್ಷರಕ್ಕೆ=ಶುದ್ಧವಾದಕ್ಷರಂಗಳ್ಗೆ; ನಾಮಂ=ಪೆಸರ್; ಅಕ್ಕುಂ=ಅಪ್ಪುದು; ಬರೆಪಂಬೊಕ್ಕು=ಬರೆವುದಂ ಪೊಕ್ಕು; ಉಚ್ಚರಿಸಲ್ ಬಾರದುವು=ಉಚ್ಚಾರಣೆಗೆ ಬಾರದುವು; ಅಕ್ಕರಂಗಳ್=ಅಕ್ಷರಂಗಳ್; ಅಲ್ತು=ಅಲ್ಲ; ಅವು=ತಾವು; ಘನ=ಮೇಘದ; ಸ್ವನ=ಧ್ವನಿ; ಆದಿ=ಮೊದಲಾದ; ಧ್ವನಿಗಳ್=ಪಲವು ತೆಱದ ಧ್ವನಿಗಳ್ ಅಪ್ಪುವು.

ವೃತ್ತಿ.

ಅಕ್ಕರಮೆಂದುಂ, ವರ್ಣಮೆಂದುಂ, ಶುದ್ಧಾಕ್ಷರಕ್ಕೆ ಪರ್ಯಾಯನಾಮಂ; ಬರೆಯಲುಮುಚ್ಚರಿಸಲ್ಬಾರದುವಕ್ಷರಂಗಳಲ್ತವು ಮೊಱಗು ಮೊದಲಾದ ಪಲ ತೆಱದ ಧ್ವನಿಗಳ್.

ಸೂತ್ರಂ.

In each letter Sound and Form.

ವ್ಯವಹರಿಪುವೆರಡು ರೂಪಿಂ
ದವಕ್ಕರಂ ಶ್ರಾವಣಂ ಸ್ವನೈಕಾಕಾರಂ ।
ವಿವಿಧಾಕಾರಂ ಲಿಪಿಭೇ
ದವೃತ್ತಿಯಿಂ ಚಾಕ್ಷುಷಂ ಪುರಾತನಮತದಿಂ ॥ 3 ॥

ಪದಚ್ಛೇದಂ.

ವ್ಯವಹರಿಪುವು ಎರಡು ರೂಪಿಂದೆ ಅವು ಅಕ್ಕರಂ; ಶ್ರಾವಣಂ ಸ್ವನೈಕಾಕಾರಂ, ವಿವಿಧಾಕಾರಂ ಲಿಪಿಭೇದವೃತ್ತಿಯಿಂ ಚಾಕ್ಷುಷಂ; ಪುರಾತನಮತದಿಂ.

ಅನ್ವಯಂ.

ಪುರಾತನಮತದಿಂ ಅಕ್ಕರಂ ಅವು ಎರಡು ರೂಪಿಂದೆ ವ್ಯವಹರಿಪುವು; ಸ್ವನೈಕಾಕಾರಂ ಶ್ರಾವಣಂ, ಲಿಪಿಭೇದವೃತ್ತಿಯಿಂ ವಿವಿಧಾಕಾರಂ ಚಾಕ್ಷುಷಂ.

### ಟೀಕು.

ಪುರಾತನಮತದಿಂದೆ=ಪೂರ್ವದ ಕವಿಗಳ ಮತದಿಂದೆ; ಅಕ್ಕರಂ=ಅಕ್ಷರಂಗಳ್; ಅವು=ಅವುತಾಂ; ಎರಡು ರೂಪಿಂದೆ=ಶ್ರಾವಣ ಚಾಕ್ಷುಷವೆಂಬೆರಡು ತೆಱದಾಕಾರದಿಂದೆ; ವ್ಯವಹರಿಪುವು=ವರ್ತಿಪುವು; ಸ್ವನೈಕಾಕಾರಂ=ಧ್ವನಿಯೊಂದಱಾಕಾರವನುಳ್ಳುದು; ಶ್ರಾವಣಂ=ಶ್ರಾವಣವೆನಿಪುದು; ಲಿಪಿ=ಲಿಪಿಗಳ; ಭೇದ=ಭೇದದ; ವೃತ್ತಿಯಿಂ=ವರ್ತನೆಯಿಂದೆ; ವಿವಿಧಾಕಾರಂ=ನಾನಾ ಪ್ರಕಾರವಾದ ಆಕಾರವನುಳ್ಳುದು; ಚಾಕ್ಷುಷಂ=ಚಾಕ್ಷುಷವೆನಿಸುವದು.—ಶ್ರಾವಣಮೆಂದೊಡೆ ಕಿವಿಯಲ್ಲಿ ಕೇಳ್ವುದು; ಚಾಕ್ಷುಮೆಂದೊಡೆ ಕಣ್ಣೊಳ್ಕಾಣ್ಬುದೆಂದಱಿವುದು.

### ವೃತ್ತಿ.

ಎರಡು ತೆಱದಾಕಾರದಿಂದಕ್ಕರಂ ವರ್ತಿಸುಗುಂ; ಶಬ್ದಾಕಾರದಿಂ ಕಿವಿಗೆ ವಿಷಯಮಾದಕ್ಷರಂ ಶ್ರಾವಣಮೆಂಬುದು, ಲಿಪಿಭೇದದಿಂ ಪಲವಾಕಾರಮಾಗಿ ಕಣ್ಗೆ ತೋಱುವಕ್ಕರಂ ಚಾಕ್ಷುಷಮೆಂಬುದು; ಇದನಾದಿಮಾರ್ಗದಿನಱಿವುದು.

## I. The Alphabet.

### ಸೂತ್ರಂ.

The 48 independent (for the dependent ones see Ss. 12; 17) letters of the Sanskṛt-Canarese Alphabet.*

ವರ್ಣಂಗಳ ಪಾಠಕ್ರಮ
ಮರ್ಣವವೃತಧಾತ್ರಿಯೊಳ್ಪ್ರಸಿದ್ಧಂ ನಿಜದಿಂ |
ವರ್ಣಂಗಳಕಾರಾದ್ಯಾ
ಪೂರ್ಣತೆಯಂ ಪಡೆವುವಾ ಳಕಾರಂಬರೆಗಂ || 4 ||

### ಪದಚ್ಛೇದಂ.

ವರ್ಣಂಗಳ ಪಾಠಕ್ರಮಂ ಅರ್ಣವವೃತಧಾತ್ರಿಯೊಳ್ ಪ್ರಸಿದ್ಧಂ ನಿಜದಿಂ; ವರ್ಣಂಗಳ್ ಅಕಾರಾದ್ಯಾಪೂರ್ಣತೆಯಂ ಪಡೆವುವು, ಆ ಳಕಾರಂಬರೆಗಂ.

### ಅನ್ವಯಂ.

ಅರ್ಣವವೃತಧಾತ್ರಿಯೊಳ್ ವರ್ಣಂಗಳ ಪಾಠಕ್ರಮಂ ನಿಜದಿಂ ಪ್ರಸಿದ್ಧಂ; ವರ್ಣಂಗಳ್ ಅಕಾರಾದ್ಯಾಪೂರ್ಣತೆಯಂ ಆ ಳಕಾರಂಬರೆಗಂ ಪಡೆವುವು.

### ಟೀಕು.

ಅರ್ಣವ=ಸಮುದ್ರದಿಂದೆ; ವೃತ=ಸುತ್ತಲ್ಪಟ್ಟ; ಧಾತ್ರಿಯೊಳ್=ಭೂಮಿಯಲ್ಲಿ; ವರ್ಣಂಗಳ=ಅಕ್ಷರಂಗಳ; ಪಾಠಕ್ರಮಂ=ಓದುವನುಕ್ರಮಂ; ನಿಜದಿಂ=ಸಹಜದಿಂದೆ; ಪ್ರಸಿದ್ಧಂ=ಪ್ರಸಿದ್ಧಂ; ವರ್ಣಂಗಳ್=ಅಕ್ಷರಂಗಳ್; ಅಕಾರ=ಅಕಾರಂ; ಆದಿ=ಮೊದಲಾಗಿ; ಆಪೂರ್ಣತೆಯಂ=ಆ ಪರಿಪೂರ್ಣತ್ವಮಂ (?); ಆ ಳಕಾರಂಬರೆಗಂ=ಆ ಳಕಾರಂಪರಿಯಂತರಂ; ಪಡೆವುವು=ಹಡೆವುವು.

* ೞ (ಕ್ಷಳಂ) is counted too.

### ವೃತ್ತಿ.

ಅಕ್ಕರಂಗಳನೋದುವನುಕ್ರಮಂ ಕಡಲುಡಿಗೆಯಾದ ಪೊಡವಿಯೊಳ್ಪ್ರಸಿದ್ಧಂ; ಅಕ್ಕರಂಗಳಕಾರಂ ಮೊದಲಾಗಿ ೞಕಾರಪರ್ಯಂತಂ ಪರಿಪೂರ್ಣಮಾಗಿರ್ಪುವು; ಅವಾವುವೆಂದೊಡೆ—

ಅ ಆ, ಇ ಈ, ಉ ಊ, ಋ ೠ, ಌ ೡ, ಏ ಐ, ಓ ಔ; ಕ್ ಖ್, ಗ್ ಘ್, ಙ್; ಚ್ ಛ್, ಜ್ ಝ್, ಞ್; ಟ್ ಠ್, ಡ್ ಢ್, ಣ್; ತ್ ಥ್, ದ್ ಧ್, ನ್; ಪ್ ಫ್, ಬ್ ಭ್, ಮ್; ಯ್, ರ್, ಲ್, ವ್; ಶ್, ಷ್, ಸ್, ಹ್, ೞ್.

### ಸೂತ್ರಂ.

The Sanskṛt ಲ್ (ಕ್ಷಳಂ) must take the form ೞ್ to be in Alliteration (ನಿಯಾಮಂ, ಪ್ರಾಸಂ) with the Canarese ೞ್.

ಕುಳದ ನಿಯಾಮದೊಳೆಂದುಂ
ಕ್ಷಳಕ್ಕೆ ಲಾಕ್ಷರವಿಕಲ್ಪಮಿಲ್ಲ ವಿಕಲ್ಪಂ ।
ಕ್ಷಳನಲ್ಲದಿಲ್ಲ ಸಂಸ್ಕೃತ
ದೊಳಾ ಲಕಾರಕ್ಕೆ ಪೇೞ್ದಿನದಱಿಂ ಕ್ಷಳನಂ ॥ 5 ॥

### ಪದಚ್ಛೇದಂ.

ಕುಳದ ನಿಯಾಮದೊಳ್ ಎಂದುಂ ಕ್ಷಳಕ್ಕೆ ಲಾಕ್ಷರವಿಕಲ್ಪಂ ಇಲ್ಲ; ವಿಕಲ್ಪಂ, ಕ್ಷಳಂ ಅಲ್ಲದೆ, ಇಲ್ಲ; ಸಂಸ್ಕೃತದೊಳ್ ಆ ಲಕಾರಕ್ಕೆ ಪೇೞ್ದಿಂ ಅದಱಿಂ ಕ್ಷಳನಂ.

### ಅನ್ವಯಂ.

ಕುಳದ ನಿಯಾಮದೊಳ್ ಕ್ಷಳಕ್ಕೆ ಲಾಕ್ಷರವಿಕಲ್ಪಂ ಎಂದುಂ ಇಲ್ಲ; ವಿಕಲ್ಪಂ, ಕ್ಷಳಂ ಅಲ್ಲದೆ, ಇಲ್ಲ; ಅದಱಿಂ ಸಂಸ್ಕೃತದೊಳ್ ಆ ಲಕಾರಕ್ಕೆ ಕ್ಷಳನಂ ಪೇೞ್ದಿಂ*.

### ಟೀಕು.

ಕುಳದ=ಕುಳಳಕಾರದ; ನಿಯಾಮದೊಳ್=ಪ್ರಾಸಿನಲ್ಲಿ; ಕ್ಷಳಕ್ಕೆ=ಕ್ಷಳಳಕಾರಕ್ಕೆ; ಲಾಕ್ಷರ ವಿಕಲ್ಪಂ=ಲಕಾರದ ವಿಕಲ್ಪಂ; ಎಂದುಂ=ಆವಾಗಳುಂ; ಇಲ್ಲ=ಉಂಟಾಗದು; ವಿಕಲ್ಪಂ=ಕುಳಪ್ರಾಸಿಂಗೆ ವಿಕಲ್ಪಂ; ಕ್ಷಳನಲ್ಲದೆ=ಕ್ಷಳಳಕಾರಮಲ್ಲದೆ; ಇಲ್ಲ=ಲಕಾರದ ವಿಕಲ್ಪಮಿಲ್ಲ; ಅದಱಿಂ= ಅದು ಕಾರಣದಿಂದೆ; ಸಂಸ್ಕೃತದೊಳ್=ಸಂಸ್ಕೃತದಲ್ಲಿ; ಆ ಲಕಾರಕ್ಕೆ=ಆ ಸಂಸ್ಕೃತದಲ್ಲಿರ್ದ ಲಕಾರಕ್ಕೆ; ಕ್ಷಳನಂ=ಕ್ಷಳನೆಂಬ ೞಕಾರಮಂ; ಪೇೞ್ದಿಂ=ಹೇೞ್ದೆಂ.

### ವಿಚಾರಂ.

ಕುಳಮೆಂದೊಡೆ ಕನ್ನಡ ಶಬ್ದದಲ್ಲಿ ಇರ್ದ (ನಿಜ) ೞಕಾರಂ; ಕ್ಷಳಮೆಂದೊಡೆ, ಸಂಸ್ಕೃತ ಶಬ್ದದಲ್ಲಿ ॥ಲಳಯೋರ್ ಅಭೇದಃ॥ ಎಂದು, ಉಂಟಾಗಿ, ಲಕಾರ ಳಕಾರಂಗಳ್ಗೆ ಭೇದವಿಲ್ಲದ ೞಕಾರವೆಂದಱಿವುದು.

* 16ನೆಯ ಸೂತ್ರಮಂ ನೋಡು.

ವೃತ್ತಿ.

ಕುಳಪ್ರಾಸಮಾಗಿ ಪೇೞ್ದ ಕಬ್ಬಂ ಕ್ಷಳನಂ ಸೆರೆ ಗೆಯ್ಯುದಾಗಿ, ಲಕಾರಮುಂ ವಿಕಲ್ಪಮುಂ ಮಾಡ ಬಾರದು; ಲಕಾರಪ್ರಾಸಮಾಗಿ ಪೇೞ್ದ ಕನ್ನಡ ಕಬದೊಳ್ ಕ್ಷಳನಂ ವಿಕಲ್ಪದಿನಿರಿಸ ಬಾರದು, ಇದುವುಮಾಗದು. ಕ್ಷಳನೆಂಬುದಿಲ್ಲದೆ, ಸಂಸ್ಕೃತಪದದ ಲಕಾರಕ್ಕೆ ವಿಕಲ್ಪಮುಂ ಪೇೞಲ್ಬಾರದಾಗಿ, ಕ್ಷಳನನಿದಱೊಳೆ ಬೆರಸಿ, ಪೇೞ್ದಂ (ಪೆೞ್ದಂ).

ಪ್ರಯೋಗಂ. *Application of the foregoing rule.*

ಕುಳಕ್ಷಳಪ್ರಾಸಕ್ಕೆ—ಕಿೞರೆ ಹಯಂಗಳ್, ಗರ್ಜಿಸೆ
ಜಳದನಿಭಂಗಳ್ ಗಜಂಗಳ್, ಇತ್ಯಾದಿ (ಕಂದಭಾಗಂ).

ಲಕಾರಕ್ಕೆ ಕ್ಷಳನನಿರಿಸ ಬಾರದುದರ್ಕೆ—
ಓಲಗದೊಳೊರ್ಮೆ ನತನರ
ಪಾಲಕಚೂಡಾಮಣಿದ್ಯುತಿಪ್ಲುತಚರಣಂ (ಕಂದಾರ್ಧಂ).

**2. The Vowels.**

ಸೂತ್ರಂ.

There are 14 Sanskṛt-Canarese Vowels; excepting ಏ, ಐ and ಓ, ಔ (which are Diphthongs, ಸಂಧ್ಯಕ್ಷರಂಗಳ್, cf. S. 10), they are Monophthongs (ಸಮಾನಂಗಳ್), and Homogens (ಸವರ್ಣಂಗಳ್).

ತರದಿನಕಾರಂ ಮೊದಲಾ
ಗಿರೆ ಪದಿನಾಲ್ಕುಂ ಸ್ವರಂಗಳಾದಿಯ ಪತ್ತ |
ಕ್ಕರಮುಂ ಸಮಾನಮೆನಿಸುಗು
ಮೆರಡೆರಡವಱೊಳ್ ಸವರ್ಣಮೆಂತೋದಿದೊಡಂ || 6 ||

ಪದಚ್ಛೇದಂ.

ತರದಿಂ ಅಕಾರಂ ಮೊದಲ್ ಆಗಿ ಇರೆ, ಪದಿನಾಲ್ಕುಂ ಸ್ವರಂಗಳ್; ಆದಿಯ ಪತ್ತು ಅಕ್ಕರಮುಂ ಸಮಾನಂ ಎನಿಸುಗುಂ, ಎರಡು ಎರಡು ಅವಱೊಳ್ ಸವರ್ಣಂ, ಎಂತು ಓದಿದೊಡಂ.

ಅನ್ವಯಂ.

ತರದಿಂ ಅಕಾರಂ ಮೊದಲ್ ಆಗಿ ಇರೆ, ಪದಿನಾಲ್ಕುಂ ಸ್ವರಂಗಳ್; ಆದಿಯ ಪತ್ತಕ್ಕರಮುಂ ಸಮಾನಂ ಎನಿಸುಗುಂ, ಅವಱೊಳ್ ಎರಡೆರಡು, ಎಂತು ಓದಿದೊಡಂ, ಸವರ್ಣಂ.

ಟೀಕು.

ತರದಿಂ=ತರುವಾಯಿಂದೆ; ಅಕಾರಂ=ಅತ್ವಂ; ಮೊದಲಾಗಿ=ಆದಿಯಾಗಿ; ಇರೆ=ಇರಲಾಗಿ; ಪದಿನಾಲ್ಕುಂ=ಹದಿನಾಲ್ಕಕ್ಷರಂಗಳುಂ; ಸ್ವರಂಗಳ್=ಸ್ವರಾಕ್ಷರಂಗಳ್; ಎನಿಸುಗುಂ=ಎನಿಸುವವು;

ಆದಿಯ=ಮೊದಲ; ಪತ್ತಕ್ಕರಮುಂ=ಹತ್ತಕ್ಷರಂಗಳುಂ; ಸಮಾನಂ=ಸಮಾನಂಗಳ್; ಎನಿಸುಗುಂ=ಎನಿಸುವವು; ಅವಱೊಳ್=ಆ ಸಮಾನಸಂಜ್ಞೆಯಂ ಪಡೆದ ಹತ್ತಕ್ಷರಂಗಳಲ್ಲಿ; ಎರಡೆರಡು=ಎರಡೆರಡಕ್ಷರಂಗಳ್; ಎಂತೋದಿದೊಡಂ=ಅನುಲೋಮ ವಿಲೋಮಂಗಳಾಗಿ ಹ್ಯಾಗೆ ಓದಿದೊಡೆಯುಂ; ಸವರ್ಣಂ=ಸವರ್ಣಂಗಳ್; ಎನಿಸುಗುಂ=ಎನಿಸುವವು.

ವೃತ್ತಿ.

ಕ್ರಮದಿಂದಕಾರಂ ಮೊದಲಾಗಿ ಔಕಾರಪರ್ಯಂತಮಿರ್ದ ಪದಿನಾಲ್ಕಕ್ಕರಂ ಸ್ವರಸಂಜ್ಞೆಯಂ ಪಡೆಗುಮ್; ಅಲ್ಲಿ ಮೊದಲ ಪತ್ತಕ್ಕರಂ ಸಮಾನಸಂಜ್ಞೆಯಂ ಪಡೆಗುಮ್; ಆ ಪತ್ತಕ್ಕರಂಗಳೊಳೆರಡೆರಡಕ್ಕರಂಗಳ್, ತಮ್ಮೊಳನುಲೋಮದೊಳಿರ್ದೊಡಂ ವಿಲೋಮದೊಳಿರ್ದೊಡಂ, ಸವರ್ಣಸಂಜ್ಞೆಯಂ ಪಡೆಗುಂ.

ಪದಿನಾಲ್ಕು ಸ್ವರಂಗಳ್—ಅ ಆ, ಇ ಈ, ಉ ಊ, ಋ ೠ, ಌ ೡ, ಏ ಐ, ಓ ಔ ಎಂಬೀ ಪದಿನಾಲ್ಕು ಸ್ವರಂಗಳ್.

ಸಮಾನಸಂಜ್ಞಾಕ್ಷರಂಗಳ್—ಅ ಆ, ಇ ಈ, ಉ ಊ, ಋ ೠ, ಌ ೡ ಎಂಬಿವು ಸಮಾನಸಂಜ್ಞೆಗಳ್.

ಅನುಲೋಮಕ್ಕೆ—ಅ ಆ; ಇ ಈ ಎಂಬೀ ಪ್ರಕಾರಮಾಗಿ ಆ ಪತ್ತಕ್ಷರಂಗಳ್. ಅನುಲೋಮದೊಳಿರ್ದೊಡಂ ಸವರ್ಣಸಂಜ್ಞೆಯಂ ಪಡೆಗುಂ.

ವಿಲೋಮಕ್ಕೆ—ಆ ಅ; ಈ ಇ ಎಂಬೀ ಪ್ರಕಾರಮಾಗಿರ್ದೊಡಂ ಸವರ್ಣಸಂಜ್ಞೆಯಂ ಪಡೆಗುಂ.

ಸೂತ್ರಂ.

Further remark on the Homogeny of the said 10 Vowels.

ಕ್ರಮದಿಂ ಹ್ರಸ್ವಕ್ಕಂ ಹ್ರ
ಸ್ವಮೊದವೆ ದೀರ್ಘಕ್ಕೆ ದೀರ್ಘಮೊದವೆ ತಗುಳ್ಗುಂ ।
ಸಮ ಸಂದಾ ಯುಗಳಂಗಳೊ
ಳಮಳಿನಮಾಗೆಲ್ಲಿಯುಂ ಸವರ್ಣವಿಧಾನಂ ॥ 7 ॥

ಪದಚ್ಛೇದಂ.

ಕ್ರಮದಿಂ ಹ್ರಸ್ವಕ್ಕಂ ಹ್ರಸ್ವಂ ಒದವೆ, ದೀರ್ಘಕ್ಕೆ ದೀರ್ಘಂ ಒದವೆ, ತಗುಳ್ಗುಂ ಸಮ ಸಂದ ಆ ಯುಗಳಂಗಳೊಳ್, ಅಮಳಿನಂ ಆಗಿ, ಎಲ್ಲಿಯುಂ ಸವರ್ಣವಿಧಾನಂ.

ಅನ್ವಯಂ.

ಸಮ ಸಂದಾ ಯುಗಳಂಗಳೊಳ್ ಕ್ರಮದಿಂ ಹ್ರಸ್ವಕ್ಕಂ ಹ್ರಸ್ವಂ ಒದವೆ, ದೀರ್ಘಕ್ಕೆ ದೀರ್ಘಂ ಒದವೆ, ಅಮಳಿನಂ ಆಗಿ ಎಲ್ಲಿಯುಂ ಸವರ್ಣವಿಧಾನಂ ತಗುಳ್ಗುಂ.

ಟೀಕು.

ಸಮ ಸಂದ=(ಹಿಂದೆ ಹೇಳಿದ ಆ ಅನುಲೋಮ ವಿಲೋಮಂಗಳ ಸಾಲಿನಲ್ಲಿ) ಸಮಾನವಾಗಿ ಸಂದ; ಆ ಯುಗಳಂಗಳೊಳ್=ಆ ಎರಡೆರಡಕ್ಷರಂಗಳಲ್ಲಿ (ಇನ್ನೂ ಬದಲಿಸಿ); ಕ್ರಮದಿಂ=ತರುವಾಯಿಂದೆ; ಹ್ರಸ್ವಕ್ಕಂ=ಹ್ರಸ್ವಾಕ್ಷರಕ್ಕೆಯುಂ; ಹ್ರಸ್ವಂ=ಹ್ರಸ್ವಾಕ್ಷರಂ; ಒದವೆ=ಪ್ರಾಪ್ತಿಸೆ; ದೀರ್ಘಕ್ಕೆ=ದೀರ್ಘಾಕ್ಷರಕ್ಕೆ; ದೀರ್ಘಂ=ದೀರ್ಘಾಕ್ಷರಂ; ಒದವೆ=ಪ್ರಾಪ್ತಿಸೆ; ಅಮಳಿನವಾಗಿ=ನಿರ್ದೋಷವಾಗಿ; ಎಲ್ಲಿಯುಂ=ಆವೆಡೆಯಲ್ಲಿಯುಂ; ಸವರ್ಣವಿಧಾನಂ=ಸವರ್ಣಸಂಜ್ಞಾವಿಧಾನಂ; ತಗುಳ್ಗುಂ=ಐದುವುದು.

ವೃತ್ತಿ.

ತರುವಾಯಿಂದಾ ಯುಗಳಂಗಳೊಳೆ ಹ್ರಸ್ವಕ್ಕೆ ಹ್ರಸ್ವಂ ಪರಮಾದೊಡಂ, ದೀರ್ಘಕ್ಕೆ ದೀರ್ಘಂ ಪರಮಾದೊಡಂ, ನಿರ್ದೋಷಮಾಗಿ ಸವರ್ಣಸಂಜ್ಞೆಯುಂ ಪಡೆಗುಂ. ಎಂತೆಂದೊಡೆ—

ಹ್ರಸ್ವಕ್ಕೆ—ಅ ಅ; ಇ ಇ; ಉ ಉ; ಋ ಋ; ಌ ಌ.
ದೀರ್ಘಕ್ಕೆ—ಆ ಆ; ಈ ಈ; ಊ ಊ; ೠ ೠ; ೡ ೡ.

ಸೂತ್ರಂ.

ಸವನಿಸಿದೆ ಏ ಒ ಓ ಎಂ
ಬಿವು ಕನ್ನಡದೊಳ್ಸ್ವಭಾವದಿಂದೊಳವು ಸವ |
ರ್ಣವುಮಪ್ಪುವು ವರ್ಣಾಂಕಂ
ಸವರ್ಣಸಂಜ್ಞೆಯೊಳವೊದವುಗುಂ ವ್ಯಾಕೃತಿಯೊಳ್ || 8 ||

The 4 Vowels ಎ ಏ, ಒ ಓ are inherent in Canarese, form two distinct pairs each of homogen character, (and have characteristical marks to denote their being long or short. In Sanskṛt there is neither ಎ nor ಒ).

ಪದಚ್ಛೇದಂ.

ಸವನಿಸಿದ ಎ ಏ, ಒ ಓ ಎಂಬ ಇವು ಕನ್ನಡದೊಳ್ ಸ್ವಭಾವದಿಂದೆ ಒಳವು; ಸವರ್ಣವುಂ ಅಪ್ಪುವು; ವರ್ಣಾಂಕಂ ಸವರ್ಣಸಂಜ್ಞೆಯೊಳಂ ಒದವುಗುಂ ವ್ಯಾಕೃತಿಯೊಳ್.

ಅನ್ವಯಂ.

ಕನ್ನಡದೊಳ್ ಸವನಿಸಿದ ಎ ಏ, ಒ ಓ ಎಂಬಿವು ಸ್ವಭಾವದಿಂದೆ ಒಳವು; ಸವರ್ಣವುಂ ಅಪ್ಪುವು; ವ್ಯಾಕೃತಿಯೊಳ್ ಸವರ್ಣಸಂಜ್ಞೆಯೊಳಂ ವರ್ಣಾಂಕಂ ಒದವುಗುಂ.

ಟೀಕು.

ಕನ್ನಡದೊಳ್=ಕನ್ನಡ ಭಾಷೆಯಲ್ಲಿ; ಸವನಿಸಿದ=ಪ್ರಾಪ್ತಿಸಿದ; ಎ ಏ ಒ ಓ=ಎ ಏ ಒ ಓ ಎಂಬಿವು ಹ್ರಸ್ವ ದೀರ್ಘಂಗಳಾಗಿ; ಎಂಬ ಇವು=ಈ ಯುಗಳಾಕ್ಷರಂಗಳ್; ಸ್ವಭಾವದಿಂದೆ=ಸಹಜದಿಂದೆ;

ಒಳವು=ಉಂಟು; ಸವರ್ಣವುಂ=ಸವರ್ಣಂಗಳುಂ; ಅಪ್ಪುವು=ಆಗುವವು; ವ್ಯಾಕೃತಿಯೊಳ್=ವ್ಯಾಕರಣದಲ್ಲಿ; ಸವರ್ಣಸಂಜ್ಞೆಯೊಳಂ=ಸವರ್ಣವೆಂಬ ಸಂಜ್ಞೆಯಲ್ಲಿಯುಂ; ವರ್ಣಾಂಕಂ=ವರ್ಣವೆಂಬ ಸಂಜ್ಞೆ; ಒದವುಗುಂ=ಪ್ರಾಪ್ತಿಸುವದು.

ವಿಚಾರಂ.

ವರ್ಣಸಂಜ್ಞೆ ಎಂತೆಂದೊಡೆ, ಅವರ್ಣಂ ಇವರ್ಣಂ ಉವರ್ಣಂ ಎಂಬಂತೆ ಇವಂ ತಿಳಿವುದು.

ವೃತ್ತಿ.

ಎ ಏ, ಒ ಓ ಎಂಬೀ ಯುಗಳಾಕ್ಷರಂಗಳ್ಶಂಕಾವಧಾರಣನಿಪಾತಂಗಳಲ್ಲದೆ ನಿಜದಿನೊಳವು; ಸವರ್ಣಸಂಜ್ಞೆಯುಮವರ್ಕೆ ದೊರೆಕೊಳ್ವುದು; ವ್ಯಾಕರಣದೊಳ್ ಸವರ್ಣಸಂಜ್ಞೆಗೆ ವರ್ಣಸಂಜ್ಞೆಯುಂಟು.

ಪ್ರಯೋಗಂ.

ಎಲೆ, ಎಲವಂ; ಏಱು (ಏರಿ), ಏತಂ (s. S. 209).—ಒಕ್ಕಲ್, ಒರೆಗಲ್; ಓಸರಿಗೆ, ಓರಿಗೆ.

ಎತ್ತುಂಗೋಲುಂ ವಿರಹಿಂಗೆ | ಚಿತ್ತಭವಂ || ಕಂದಭಾಗಂ ||.
ಎಡಱಿದರನಟ್ಟಿವೋದುವ
ಪಡೆಯರಗುಟ್ಟಿಗೆ || ಕಂದಭಾಗಂ ||.
ಏಳಿದಂ (S. 26) ಗೆಯ್ಯಲಿವೀಗಳ್.
ಏತಱ ಮಾತೋ ಭೂತಳದೊಳ್.
ಒತ್ತರವೊತ್ತಿದಂತೆ ಬೆಱಗಾಗೆ ಕೃಪಾದಿಗಳೊತ್ತೆ.
ಓಸರಿಸಿದ ಜವನಿಕೆಯೊಡ
ನೋಸರಿಸಿದನಲ್ತೆ ಕಂತು || ಕಂದಭಾಗಂ ||.

ಸೂತ್ರಂ.

ವಿದಿತಸಮಾನಂಗಳ ಪೂ
ರ್ವದಕ್ಕರಂ ಹ್ರಸ್ವಮದಱ ಪರದಕ್ಕರಮುಂ |
ತದು ದೀರ್ಘಮವರ್ಣಂ ಪಿಂ
ಗಿದಾ ಸ್ವರಂ ನಾಮಿಯೆಂದು ಪೇಱಲ್ಪಡೆಗುಂ || 9 ||

As will have been observed, the Vowels are long and short. The Saṇskṛt-Canarese vowels, except ಅ and ಆ, are called "Benders" (ನಾಮಿಗಳ್).*

* Námi means "bending," as, according to Boethlingk and Roth's Dictionary, the Námi vowels bend or change a Dental into a Cerebral. The author does not make use of the word again.

### ಪದಚ್ಛೇದಂ.

ವಿದಿತಸಮಾನಂಗಳ ಪೂರ್ವದ ಅಕ್ಕರಂ ಹ್ರಸ್ವಂ, ಅದಱ ಪರದ ಅಕ್ಕರಂ ಅಂತು ಅದು ದೀರ್ಘಂ; ಅವರ್ಣಂ ಪಿಂಗಿದಾ ಸ್ವರಂ, ನಾಮಿ ಎಂದು, ಪೇೞಲ್ ಪಡೆಗುಂ.

### ಯಥಾನ್ವಯಂ.

### ಟೀಕು.

ವಿದಿತ=ಪ್ರಸಿದ್ಧವಾದ; ಸಮಾನಂಗಳ=ಸಮಾನಸಂಜ್ಞೆಯಂ ಪಡೆದ ಪತ್ತಕ್ಕರಂಗಳ; ಪೂರ್ವದ=ಮೊದಲ; ಅಕ್ಕರಂ=ಅಕ್ಷರಂ; ಹ್ರಸ್ವಂ=ಹ್ರಸ್ವಾಕ್ಷರಂ; ಅದಱ=ಆ ಹ್ರಸ್ವಾಕ್ಷರದ; ಪರದ=ಮುಂದಣ; ಅಕ್ಕರಂ=ಅಕ್ಷರಂ; ಅಂತು=ಹಾಗೆ; ಅದು=ತಾಂ; ದೀರ್ಘಂ=ದೀರ್ಘಾಕ್ಷರಂ; ಅವರ್ಣಂ=ಅ ಆ ಎಂಬ ಸವರ್ಣಂ; ಪಿಂಗಿದ=ತೊಲಗಿದ; ಆ ಸ್ವರಂ=ಆ ಹನ್ನೆರಡು ಸ್ವರಾಕ್ಷರಂಗಳ್; ನಾಮಿಯೆಂದು=ನಾಮಿಗಳೆಂದು; ಪೇೞಲ್ಪಡೆಗುಂ=ಪೇಳಲ್ಪಡೆವುವು.

### ವೃತ್ತಿ.

ಪ್ರಸಿದ್ಧವಾಗಿ ಸಮಾನಸಂಜ್ಞೆಯಂ ಪಡೆದ ಪತ್ತಕ್ಕರಂಗಳ ಮೊದಲಕ್ಕರಂಗಳ್ ಹ್ರಸ್ವಂಗಳ್, ಅವಾವುವೆಂದೊಡೆ—ಅ, ಇ, ಉ, ಋ, ಌ ಎಂಬಿವು; ಎ, ಒ ಎಂಬಿವುಮಂತೆ ಸಲ್ವುವು. ಅವಱ ಮುಂದಣಕ್ಕರಂಗಳ್ ದೀರ್ಘಂ; ಅವಾವುವೆಂದೊಡೆ—ಆ, ಈ, ಊ, ೠ, ೡ ಎಂಬಿವು; ಏ, ಓ ಎಂಬಿವುಮಂತೆ ಸಲ್ವುವು. ಅ ಆ ಎಂಬ ವರ್ಣಂ ಪಿಂಗಿದಾ ಪನ್ನೆರಡು ಸ್ವರಂಗಳ್ ನಾಮಿಸಂಜ್ಞೆಯಂ ಪಡೆವುವು; ಅವಾವುವೆಂದೊಡೆ—ಇ, ಈ; ಉ, ಊ; ಋ, ೠ; ಌ, ೡ; ಏ, ಐ; ಓ, ಔ ಎಂಬಿವು.

### ಉಪೇಂದ್ರವಜ್ರವೃತ್ತಂ.[1]

ಅವರ್ಣವಾದಕ್ಕೆಡೆಯಾಗದೊಳ್ ಪಿಂ
ದವರ್ಣಿಕಾಮರ್ ಗುಣವೃದ್ಧಿಧಾಮರ್ | (—ದಾಮರ್)
ದಿವಾಕರರ್ ವ್ಯಾಕೃತಿನಾಮಿಗಳ್ ವೋಲ್
ದಿವಕ್ಕೆ ಪನ್ನೀರ್ವರೆ ಮುಖ್ಯರಾದರ್ ||

### ಸೂತ್ರಂ.

The 4 Diphthongs (cf. S. 6). Metrical quantity of the Vowels.

ಕ್ರಮದೆ ಗುರುದೀರ್ಘಮೇಕಾ
ರಮುಖ್ಯಸಂಧ್ಯಕ್ಷರಂಗಳವು ನಿಜದಿಂ ಹ್ರ |
ಸ್ವಮದೇಕಮಾತ್ರಕಂ ದೀ
ರ್ಘಮುಭಯಮಾತ್ರಂ ತ್ರಿಮಾತ್ರಕಂ ಪ್ಲುತಮಕ್ಕುಂ || 10 ||

1) This metre is 4 times: ◡—◡ | — — ◡ | ◡—◡ | — — |

### ಪದಚ್ಛೇದಂ.

ಕ್ರಮದೆ ಗುರು ದೀರ್ಘಂ ಏಕಾರಮುಖ್ಯಸಂಧ್ಯಕ್ಷರಂಗಳ್ ಅವು ನಿಜದಿಂ; ಹ್ರಸ್ವಂ ಅದು ಏಕಮಾತ್ರಕಂ; ದೀರ್ಘಂ ಉಭಯಮಾತ್ರಂ; ತ್ರಿಮಾತ್ರಕಂ ಪ್ಲುತಂ ಅಕ್ಕುಂ.

### ಅನ್ವಯಂ.

ಕ್ರಮದೆ ಏಕಾರಮುಖ್ಯಸಂಧ್ಯಕ್ಷರಂಗಳ್ ಅವು ನಿಜದಿಂ ಗುರು ದೀರ್ಘಂ ಅಕ್ಕುಂ; ಏಕಮಾತ್ರಕಂ ಅದು ಹ್ರಸ್ವಂ; ಉಭಯಮಾತ್ರಂ ದೀರ್ಘಂ; ತ್ರಿಮಾತ್ರಕಂ ಪ್ಲುತಂ ಅಕ್ಕುಂ.

### ಟೀಕು.

ಕ್ರಮದೆ=ತರುವಾಯಿಂದೆ; ಏಕಾರ=ಏಕಾರಂ; ಮುಖ್ಯ=ಮೊದಲಾದ; ಸಂಧ್ಯಕ್ಷರಂಗಳ್=ಏ ಐ, ಓ ಔ ಎಂಬ ಸಂಧ್ಯಕ್ಷರಂಗಳ್; ಅವು=ಅವು ತಾಂ; ನಿಜದಿಂ=ಸ್ವಭಾವದಿಂದೆ; ಗುರು=ಗುರುಗಳುಂ; ದೀರ್ಘಂ=ದೀರ್ಘಂಗಳುಂ; ಅಕ್ಕುಂ=ಅಪ್ಪುವು; ಏಕಮಾತ್ರಕಂ=ಒಂದು ಮಾತ್ರೆಯನುಳ್ಳುದು; ಅದು=ಅದು ತಾಂ; ಹ್ರಸ್ವಂ=ಹ್ರಸ್ವಾಕ್ಷರಂ ಅಪ್ಪುದು; ಉಭಯಮಾತ್ರಂ=ಎರಡು ಮಾತ್ರೆಯನುಳ್ಳುದು; ದೀರ್ಘಂ=ದೀರ್ಘಾಕ್ಷರಂ ಅಪ್ಪುದು; ತ್ರಿಮಾತ್ರಕಂ=ಮೂಱು ಮಾತ್ರೆಯನುಳ್ಳುದು; ಪುತಂ=ಪ್ಲುತವಾದಕ್ಷರಂ ಅಪ್ಪುದು.—

### ವಿಚಾರಂ.

ಸಂಧ್ಯಕ್ಷರಂಗಳೆಂದೊಡೆ ಸಂಸ್ಕೃತವ್ಯವಹಾರದಲ್ಲಿ ಸಂಧಿಯಾದಕ್ಷರಂಗಳೆಂದಱಿವುದು; ಅದೆಂತೆಂದೊಡೆ, ಅಕಾರಮುಂ ಇಕಾರಮುಂ ಕೂಡಿ ಸಂಧಿಯಾಗೆ, ಏಕಾರಂ ಪುಟ್ಟುಗುಂ; ಅಕಾರಮುಂ ಏಕಾರಮುಂ ಕೂಡಿ ಸಂಧಿಯಾಗೆ, ಐಕಾರಂ ಪುಟ್ಟುಗುಂ; ಅಕಾರಮುಂ ಉಕಾರಮುಂ ಕೂಡಿ ಸಂಧಿಯಾಗೆ, ಓಕಾರಮುಂ ಪುಟ್ಟುಗುಂ; ಅಕಾರಮುಂ ಓಕಾರಮುಂ ಕೂಡಿ ಸಂಧಿಯಾಗೆ, ಔಕಾರಮುಂ ಪುಟ್ಟುಗುಂ. ಇದರ್ಕುದಾಹರಣೆಗಳ್—

ಅಕಾರಂ ಇಕಾರಂ ಕೂಡಿ ಏಕಾರಮಾದುದರ್ಕೆ—ನಿಜ ಇಷ್ಟ ಸಿದ್ಧಿಗಳ್=ನಿಜೇಷ್ಟಸಿದ್ಧಿಗಳ್.
ಐಕಾರಕ್ಕೆ—ಜ್ಯಾದಿ ಸಮಸ್ತ ಏಕಾಕ್ಷರಂ=ಜ್ಯಾದಿಸಮಸ್ತೈಕಾಕ್ಷರಂ.
ಓಕಾರಕ್ಕೆ—ವಿದಿತ ಉಭಯ ಕರ್ತೃಕಂ=ವಿದಿತೋಭಯಕರ್ತೃಕಂ.
ಔಕಾರಕ್ಕೆ—ವಿದಿತ ಓಕಾರಂ=ವಿದಿತೌಕಾರಂ ಎಂಬಂತೆ.

### ವೃತ್ತಿ.

ತರುವಾಯಿಂ ಗುರುಸಂಜ್ಞೆಯುಂ ದೀರ್ಘಸಂಜ್ಞೆಯುಂ ಗೂಢಸಂಧಿಯುಮಾಗಿ ಸ್ವಭಾವದಿಂದೇಕಾರಂ ಮೊದಲಾದ ಸಂಧ್ಯಕ್ಷರಂಗಳಪ್ಪುವು; ಅವಾವುವೆಂದೊಡೆ—ಏ ಐ, ಓ ಔ.

ವರಸಂಧ್ಯಕ್ಷರದಂತಿರೆ
ಗುರು ದೀರ್ಘಂ ಗೂಢಸಂಧಿಯೆನೆ ಕೊಳ್ ನಾಲ್ಕುಂ । [M. B.—ತೊಳ್ನಾಲ್ಕುಂ]
ಕರಮೆಸೆದಿರ್ಕುಂ ಪದ್ಮೋ
ದರಂಗೆ ಚಕ್ರಾಸಿಶಂಖಶಾರ್ಙಸಮೇತಂ ॥ ಕಂದಂ ॥

ಎರಡು ವ್ಯಂಜನಮನುಚ್ಚರಿಸುವನಿತು ಕಾಲಂ ಮಾತ್ರೆಯೆಂಬುದು, ಅದು ಹ್ರಸ್ವಮೆನಿಪುದು, ಲಘುವೆನಿಪುದು; ಸ್ವರವ್ಯಂಜನದಿನೇಕಮಾತ್ರಮಾದೊಡೆ ಹ್ರಸ್ವಂ; ದ್ವಿಮಾತ್ರಮಾದೊಡೆ ದೀರ್ಘಂ; ತ್ರಿಮಾತ್ರಮಾದೊಡೆ ಪ್ಲುತಂ.

## ಪ್ರಯೋಗಂ.

ಹ್ರಸ್ವದೀರ್ಘಪ್ಲುತಕ್ಕೆ—ಭು ಭೂ ಭೋ ಎಂದು, ಪೂರಯಿಸಿದುದು ಶಂಖಂ; ಕು ಕೂ ಕೋ ಎಂದು, ಕೋೞಿ ಕೂಗಿದುವಾಗಳ್.

## ಸೂತ್ರಂ.

On Anusvâra (ಂ) and Visarga (ಃ).

ಬಿಂದುಮನುಸ್ವಾರಂ ತಾ
ನೆಂದಕ್ಕುಂ ಸೊನ್ನೆ ಮುತ್ತುವೋಲ್ ವೃತ್ತತೆಯಿಂ |
ಸಂದಿರ್ಪುದಂತದಡಕಿ
ಲ್ವೊಂದಿರೆ ಮಣಿಗೊಪ್ಪುವೋಲ್ ವಿಸರ್ಗಮೆನಿಕ್ಕುಂ || 11 ||

## ಪದಚ್ಛೇದಂ.

ಬಿಂದುಂ ಅನುಸ್ವಾರಂ ತಾಂ ಎಂದು, ಅಕ್ಕುಂ ಸೊನ್ನೆ; ಮುತ್ತುವೋಲ್ ವೃತ್ತತೆಯಿಂ ಸಂದಿರ್ಪುದು. ಅಂತು ಅದು ಅಡಕಿಲ್‌ವೊಂದಿ ಇರೆ, ಮಣಿಗೊಪ್ಪುವೋಲ್ ವಿಸರ್ಗಂ ಎನಿಕ್ಕುಂ.

## ಅನ್ವಯಂ.

ಬಿಂದುಂ ಅನುಸ್ವಾರಂ ಎಂದು, ಸೊನ್ನೆ ತಾಂ ಅಕ್ಕುಂ; ವೃತ್ತತೆಯಿಂ ಮುತ್ತುವೋಲ್ ಸಂದಿರ್ಪುದು. ಅಂತು ಅದು ಅಡಕಿಲ್ವೊಂದಿರೆ, ಮಣಿಗೊಪ್ಪುವೋಲ್ ವಿಸರ್ಗಂ ಎನಿಕ್ಕುಂ.

## ಟೀಕು.

ಬಿಂದುಂ=ಬಿಂದುವೆಂದೂ; ಅನುಸ್ವಾರಂ=ಅನುಸ್ವಾರವೆಂದೂ; ಸೊನ್ನೆ=ಸೊನ್ನೆ; ತಾಂ=ತಾಂ; ಅಕ್ಕುಂ=ಅಪ್ಪುದು; ವೃತ್ತತೆಯಿಂ=ಬಟ್ಟಿತ್ತಾಗಿರ್ಪುದಱಿಂದೆ; ಮುತ್ತುವೋಲ್=ಮುತ್ತಿನ ಮಣಿಯ ಹಾಗೆ; ಸಂದಿರ್ಪುದು=ಸಲುವಳಿಯಾಗಿರ್ಪುದು; ಅಂತು=ಹಾಗೆ; ಅದು=ಆ ಸೊನ್ನೆ; ಅಡಕಿಲ್ವೊಂದಿರೆ=ಒಂದಱ ಮೇಲೊಂದಿರೆ; ಮಣಿಗೊಪ್ಪುವೋಲ್=ಮಣಿಗೊಪ್ಪಿನ ಹಾಗೆ; ವಿಸರ್ಗಂ=ವಿಸರ್ಜನೀಯಂ; ಎನಿಕ್ಕುಂ=ಎನಿಸುವದು.

## ವೃತ್ತಿ.

ಬಿಂದುವೆಂದುಮನುಸ್ವಾರಮೆಂದುಂ ಸೊನ್ನೆಗೆ ಪೆಸಱಿಕ್ಕುಂ; ಬಿಂದು ಮುತ್ತಂಪೋಲ್ತು, ಸೊನ್ನೆಯಂತೆ ಬಟ್ಟಿತ್ತಾಗಿರ್ಪುದಱಿಂ ಶೂನ್ಯಶಬ್ದಂ; ಇದಪಭ್ರಂಶಮಾಗಿಯುಂ ಕನ್ನಡದೊಳ್ಸೊನ್ನೆಯೆಂದಾಯ್ತು; ಬಿಂದುವಿನಂತಿರ್ಪುದಱಿಂ ಬಿಂದುವೆಂದಾಯ್ತು; ಬಿಂದುಸ್ವರೂಪಂ||ಂ||. ಮಣಿಗೊಪ್ಪುವಿನಂತಿರೆ, ಎರಡು ಸೊನ್ನೆಯುಮ

ಡಕಿಲಾಗಿ ನಿಲೆ, ವಿಸರ್ಗಮೆನಿಸುಗುಂ; ವಿಸರ್ಜನೀಯಮೆಂದುಂ ವಿಸರ್ಗಕ್ಕೆ ಪೆಸ ಱ್; ವಿಸರ್ಗಸ್ವರೂಪಂ||ಃ||.

ಪ್ರಯೋಗಂ.

ಬಿಂದುವಿಂಗೆ—ಆಂದೋಳಂ (ಅಂದಳಂ), ಅಂದುಗೆ, ಅಂಬಿಕೆ.—ಬೆರ್ಚಿ ಬೆಳ್ಪಳಿಸಿ
ಬಂದಂ ಫಲ್ಗುಣನಲ್ಲಿ; ಸಂದಯಮಣಂ ತಾನಿಲ್ಲಿಲ್ಲ.
ವಿಸರ್ಗಕ್ಕೆ—ಅಃ, ಸಂದಯಮಿಲ್ಲ! ಮೆಚ್ಚಿದೆಂ.

ಸೂತ್ರಂ.

They are half vowels, half consonants, and called Yôgavâhas i. e. letters which are dependent on others (cf. S. 17).

ಸ್ವರಪರದೊಳಿರ್ಪ ತೆಱದಿಂ
ದುರು ಮುಖ್ಯೋಚ್ಚಾರಣಕ್ಕೆ ಬಾರದ ಕತದಿಂ |
ಪರಿಕಿಸೆ ಬಿಂದುವಿಸರ್ಗಂ
ಸ್ವರಾಂಗಮುಂ ವ್ಯಂಜನಾಂಗಮುಂ ತಾಮೆಂಬರ್ || 12 ||

ಪದಚ್ಛೇದಂ.

ಸ್ವರಪರದೊಳ್ ಇರ್ಪ ತೆಱದಿಂದೆ ಉರು ಮುಖ್ಯೋಚ್ಚಾರಣಕ್ಕೆ ಬಾರದ ಕತದಿಂ, ಪರಿಕಿಸೆ, ಬಿಂದುವಿಸರ್ಗಂ ಸ್ವರಾಂಗಮುಂ ವ್ಯಂಜನಾಂಗಮುಂ ತಾಂ ಎಂಬರ್.

ಯಥಾನ್ವಯಂ.

ಟೀಕು.

ಸ್ವರ=ಸ್ವರಾಕ್ಷರಂಗಳ; ಪರದೊಳ್=ಮುಂದುಗಡೆಯಲ್ಲಿ; ಇರ್ಪ ತೆಱದಿಂದೆ=ಇರ್ಪ ರೀತಿಯಿಂದೆ; ಉರು=ವಿಶೇಷವಾಗಿ; ಮುಖ್ಯೋಚ್ಚಾರಣಕ್ಕೆ=ಮುಖ್ಯವಾಗಿ ಉಚ್ಚರಿಪುದಕ್ಕೆ; ಬಾರದ ಕತದಿಂ=ಬಾರದ ಕಾರಣದಿಂದೆ; ಪರಿಕಿಸೆ=ವಿಚಾರಿಸೆ; ಬಿಂದು=ಸೊನ್ನೆ; ವಿಸರ್ಗಂ=ವಿಸರ್ಜನೀಯಂ; ಸ್ವರಾಂಗಮುಂ=ಸ್ವರಾಂಗಮೆಂದುಂ; ವ್ಯಂಜನಾಂಗಮುಂ=ವ್ಯಂಜನಾಂಗಮೆಂದುಂ; ತಾಂ=ವಿದ್ವಾಂಸರ್ಗಳ್; ಎಂಬರ್=ಪೇೞ್ವರ್.

ವಿಚಾರಂ.

ಸ್ವರಂಗಳ ಪರದೊಳಿರ್ಪುದಱಿಂ ಸ್ವರಾಂಗಮೆಂದುಂ,—ಸಂಸ್ಕೃತದೊಳ್ ||ಮೋಽನುಸ್ವಾರಃ||[1] ಸ್ರೋರ್ವಿಸರ್ಗಃ || ಎಂಬ ಸೂತ್ರಂಗಳಿಂದೆ—ಮಕಾರಮನುಸ್ವಾರಮೆಂದುಂ ರೇಫ ಸಕಾರಂಗಳ್ವಿಸರ್ಗಮೆಂದುಂ ಪೇೞ್ವುದಱಿಂ ವ್ಯಂಜನಾಂಗಮೆಂದುಂ, ಪೇೞ್ವರ್. ಅದಱಿಂ ಕೆಲಂಬರ್ ವ್ಯಾಕರಣ ಕಾರರ್ ಸ್ವರಸಂಜ್ಞೆಯಲ್ಲಿ ಪೇೞ್ವರ್; ಕೆಲಂಬರ್, ಜಿಹ್ವಾಮೂಲೀಯೋಪಧ್ಮಾನೀಯಬಿಂದುವಿಸರ್ಗಂಗಳಂ ವ್ಯಂಜನಸಂಜ್ಞೆಯಲ್ಲಿ ಯೋಗವಾಹಂಗಳೆಂದು, ಪೇೞ್ವರ್.

1) ಪಾಣಿನಿಸೂತ್ರಂ VIII, 3, 23.

ವೃತ್ತಿ.

ಸ್ವರಂಗಳ ಪರದೊಳಿರ್ಪ ದೂಸೞಿಂ ಸ್ವರಾಂಗಮುಮಪ್ಪುವು; ಸ್ವತಂತ್ರಮಾಗು ಚ್ಚರಿಸಲ್ಬಾರದುದೞಿಂ ಬಿಂದು ವಿಸರ್ಗಂಗಳ್ ಸ್ವರಾಂಗಮುಂ ವ್ಯಂಜನಾಂಗಮು ಮಪ್ಪುವು.

ಇದು ಸ್ವರಸಂಜ್ಞೆ.

**3. The Consonants.**

ಸೂತ್ರಂ.

The 34 Sanskṛt-Canarese Consonants, being classified (ವರ್ಗಾಕ್ಷರಂಗಳ್) and not classified (ಅವರ್ಗಾಕ್ಷರಂಗಳ್).

ಪ್ರಕಟತರವ್ಯಂಜನಸಂ
ಜ್ಞೆ ಕಕಾರದಿನಾ ಳಕಾರಪರ್ಯಂತಂ ಪಂ |
ಚಕಪಂಚಕಂಗಳಿಂ ಪಂ
ಚಕಮಕ್ಕುಂ ವರ್ಗಮಂತ್ಯವರ್ಣಮವರ್ಗಂ || 13 ||

ಪದಚ್ಛೇದಂ.

ಪ್ರಕಟತರವ್ಯಂಜನಸಂಜ್ಞೆ ಕಕಾರದಿಂ ಆ ಳಕಾರಪರ್ಯಂತಂ; ಪಂಚಕಪಂಚಕಂಗಳಿಂ ಪಂಚಕಂ ಅಕ್ಕುಂ ವರ್ಗಂ; ಅಂತ್ಯವರ್ಣಂ ಅವರ್ಗಂ.

ಅನ್ವಯಂ.

ಕಕಾರದಿಂ ಆ ಳಕಾರಪರ್ಯಂತಂ ಪ್ರಕಟತರವ್ಯಂಜನಸಂಜ್ಞೆ; ಪಂಚಕಪಂಚಕಂಗಳಿಂ ವರ್ಗಂ ಪಂಚಕಂ ಅಕ್ಕುಂ; ಅಂತ್ಯವರ್ಣಂ ಅವರ್ಗಂ.

ಟೀಕು.

ಕಕಾರದಿಂ=ಕಕಾರದಿಂದೆ; ಆ ಳಕಾರಪರ್ಯಂತಂ=ಆ ಳಕಾರಪರ್ಯಂತವಾಗಿ; ಪ್ರಕಟತರ=ಪ್ರಸಿದ್ಧಮಾದ; ವ್ಯಂಜನಸಂಜ್ಞೆ=ವ್ಯಂಜನಾಕ್ಷರಂಗಳೆಂಬ ಸಂಜ್ಞೆ ಅಪ್ಪುದು; ಪಂಚಕಪಂಚಕಂಗಳಿಂ=ಐದೈದಕ್ಷರಂಗಳಿಂದೆ; ವರ್ಗಂ=ವರ್ಗಸಂಜ್ಞೆ; ಪಂಚಕಂ=ಐದುವರ್ಗಂ; ಅಕ್ಕುಂ=ಅಪ್ಪುವು; ಅಂತ್ಯವರ್ಣಂ=ಕಡೆಯಣೊಂಬತ್ತಕ್ಷರಂಗಳೆ; ಅವರ್ಗಂ=ಅವರ್ಗಾಕ್ಷರಂಗಳ್ ಅಪ್ಪುವು.

ವೃತ್ತಿ.

ಕಕಾರಂ ಮೊದಲಾಗಿ ಳಕಾರಪರ್ಯಂತಂ ವರ್ತಿಪ ವರ್ಣಂಗಳ್ ವ್ಯಂಜನಸಂಜ್ಞೆಯುಂ ಪ್ರತ್ಯೇಕಂ ಪಡೆಗುಂ; ಅವಱೊಳ್ ಕಕಾರಂ ಮೊದಲಾಗಿ ಮಕಾರಪರ್ಯಂತಮೈದೈದು ವರ್ಣಂಗಳೊಂದೊಂದು ವರ್ಗಮಾಗಿ, ವರ್ಗಮೈದಕ್ಕುಂ; ಆ ವರ್ಗಾಕ್ಷರಂಗಳಿರ್ಪತ್ತೈದಱ ಕಡೆಯಕ್ಕರಂಗಳವರ್ಗಂಗಳ್.

ಸೂತ್ರಂ.

The Aspirates. In Canarese they are used in numbers (ಸಂಖ್ಯೆ) and imitative sounds (ಅನುಕೃತಿ).

ವರ್ಗದ್ವಿತೀಯವರ್ಣಂ
ವರ್ಗಚತುರ್ಥಾಕ್ಷರಂ ಮಹಾಪ್ರಾಣಮವಂ |
ಮಾರ್ಗವಿದರ್ಸಂಖ್ಯೆಯೊಳಂ
ಭೋರ್ಗರೆವನುಕೃತಿಯೊಳಂ ಪ್ರಯೋಗಿಸುತಿರ್ಪರ್ || 14 ||

ಪದಚ್ಛೇದಂ.

ವರ್ಗದ್ವಿತೀಯವರ್ಣಂ ವರ್ಗಚತುರ್ಥಾಕ್ಷರಂ ಮಹಾಪ್ರಾಣಂ; ಅವಂ ಮಾರ್ಗವಿದರ್ ಸಂಖ್ಯೆಯೊಳಂ ಭೋರ್ಗರೆವ ಅನುಕೃತಿಯೊಳಂ ಪ್ರಯೋಗಿಸುತೆ ಇರ್ಪರ್.

ಯಥಾನ್ವಯಂ.

ಟೀಕು.

ವರ್ಗ=ವರ್ಗಂಗಳ; ದ್ವಿತೀಯವರ್ಣಂ=ಖ್ ಛ್ ಠ್ ಥ್ ಫ್ ಎಂಬೆರಡನೆಯ ಅಕ್ಕರಂಗಳುಂ; ವರ್ಗ=ವರ್ಗಂಗಳ; ಚತುರ್ಥಾಕ್ಷರಂ=ಘ್ ಝ್ ಢ್ ಧ್ ಭ್ ಎಂಬ ನಾಲ್ಕನೆಯ ಅಕ್ಷರಂಗಳುಂ; ಮಹಾಪ್ರಾಣಂ=ಮಹಾಪ್ರಾಣಾಕ್ಷರಂಗಳೆನಿಸುವವು; ಅವಂ=ಆ ಮಹಾಪ್ರಾಣಾಕ್ಷರಂಗಳಂ; ಮಾರ್ಗವಿದರ್=(ಕನ್ನಡದ) ಕವಿಮಾರ್ಗಮಂ ಬಲ್ಲವರ್; ಸಂಖ್ಯೆಯೊಳಂ=ಸಂಖ್ಯಾವಾಚಿಗಳಲ್ಲಿಯುಂ; ಭೋರ್ಗರೆವ=ಧ್ವನಿ ಗೆಯ್ವ; ಅನುಕೃತಿಯೊಳಂ=ಅನುಕರಣಶಬ್ದಂಗಳಲ್ಲಿಯುಂ; ಪ್ರಯೋಗಿಸುತಿರ್ಪರ್=ಪ್ರಯೋಗವಂ ಮಾಡುತಿರ್ಪರ್.

ವಿಚಾರಂ.

ವರ್ಗದೆರಡನೆಯ ನಾಲ್ಕನೆಯ ಅಕ್ಷರಂಗಳ್ಮಹಾಪ್ರಾಣಂಗಳಾದಲ್ಲಿ ವರ್ಗದೊಂದನೆಯ ಮೂಱನೆಯ ಕ್, ಚ್, ಟ್, ತ್, ಪ್; ಗ್, ಜ್, ಡ್, ದ್, ಬ್ ಎಂಬಿವು ಅಲ್ಪಪ್ರಾಣಂಗಳೆಂದಱಿವುದು.

ವೃತ್ತಿ.

ವರ್ಗದೆರಡನೆಯಕ್ಕರಂಗಳುಂ ನಾಲ್ಕನೆಯಕ್ಕರಂಗಳುಂ ಮಹಾಪ್ರಾಣಂಗಳೆನಿಸುಗುಂ; ಇವಂ ಸಂಖ್ಯೆಯೊಳಮನುಕರಣದೊಳಂ ಮಾರ್ಗವಿದರ್ ಪ್ರಯೋಗಿಸುವರ್.

ಪ್ರಯೋಗಂ.

ಸಂಖ್ಯೆಗೆ—ಇಚ್ಛಾಸಿರಂ; ಎಣ್ಛಾಸಿರಂ; ನೂಚ್ಛಾಸಿರಂ; ಪದಿನೆಣ್ಛಾಸಿರಂ; ಲೋಹವಕ್ಕರೆಯ ಜಾತ್ಯಶ್ವಂಗಳಿಚ್ಛಾಸಿರಂ. (see s. S. 68).

ಅನುಕರಣಕ್ಕೆ—ಖಣಿಲ್ಲೆನೆ, ಛುಮೆನೆ (ಧುಂಮೆನೆ), ಪಠಿಲ್ಲೆನೆ, ಧೊಪ್ಪೆನೆ, ಫೊಟ್ಟೆನೆ, ಘುಳಿಲ್ಲೆನೆ, ಝುಳಂಮೆನೆ (ಝುಲ್ಲೆನೆ), ದುಢುಂಮೆನೆ, ಧಳಿಂಮೆನೆ, ಭೋರೆನೆ ಎಂಬಿವಾದಿಯಾಗಱಿವುದು. (cf. S. 300, where ಧಿಗಿಲನೆ, ಭುಗಿಲನೆ, ಭೋರನೆ).

### ಸೂತ್ರಂ.

Besides there are some other words used by Canarese people in which the Aspirates appear. The Nasals.

ಒಳವು ಮಹಾಪ್ರಾಣಂಗ
ಳ್ವಿಳಸತ್ಕರ್ಣಾಟಭಾಷೆಯೊಳ್ ಕೆಲವು ನಿಜೋ |
ಜ್ಜ್ವಳವಾಗಿ ವರ್ಗದಂತ್ಯಂ
ಗಳನಱಿಯನುನಾಸಿಕಾಖ್ಯೆಯಂ ತಳೆದಿರ್ಕುಂ || 15 ||

### ಪದಚ್ಛೇದಂ.

ಒಳವು ಮಹಾಪ್ರಾಣಂಗಳ್ ವಿಳಸತ್ಕರ್ಣಾಟಭಾಷೆಯೊಳ್ ಕೆಲವು ನಿಜೋಜ್ಜ್ವಳಂ ಆಗಿ; ವರ್ಗದ ಅಂತ್ಯಂಗಳಂ, ಅಱಿ, ಅನುನಾಸಿಕಾಖ್ಯೆಯಂ ತಳೆದು ಇರ್ಕುಂ.

### ಅನ್ವಯಂ.

ವಿಳಸತ್ಕರ್ಣಾಟಭಾಷೆಯೊಳ್ ಮಹಾಪ್ರಾಣಂಗಳ್ ಕೆಲವು ನಿಜೋಜ್ಜ್ವಳಂ ಆಗಿ ಒಳವು; ವರ್ಗದ ಅಂತ್ಯಂಗಳಂ, ಅಱಿ, ಅನುನಾಸಿಕಾಖ್ಯೆಯಂ ತಳೆದು ಇರ್ಕುಂ.

### ಟೀಕು.

ವಿಳಸತ್=ಒಪ್ಪಲ್ಪಟ್ಟ; ಕರ್ಣಾಟ=ಕನ್ನಡದ; ಭಾಷೆಯೊಳ್=ಭಾಷೆಯಲ್ಲಿ; ಮಹಾಪ್ರಾಣಂಗಳ್=ಮಹಾಪ್ರಾಣಂಗಳಾದ; ಕೆಲವು=ಕೆಲವು ಶಬ್ದಂಗಳ್; ನಿಜ=ನಿಜದಿಂದೆ; ಉಜ್ಜ್ವಳಂ=ಪ್ರಕಾಶಿಪುವು; ಆಗಿ=ಆಗಿ; ಒಳವು=ಉಂಟು; ವರ್ಗದ=ವರ್ಗಂಗಳ; ಅಂತ್ಯಂಗಳಂ=ಙ್, ಞ್, ಣ್, ನ್, ಮ್ ಎಂಬ ಅಂತ್ಯಾಕ್ಷರಂಗಳಂ; ಅಱಿ=ತಿಳಿ; ಅನುನಾಸಿಕಾಖ್ಯೆಯಂ=ಅನುನಾಸಿಕವೆಂಬ ಪೆಸಱಿಂ; ತಳೆದು=ಧರಿಸಿ; ಇರ್ಕುಂ=ಇರ್ಪುವು.

### ವಿಚಾರಂ.

ಅನುನಾಸಿಕವೆಂದೊಡೆ ಮುಖನಾಸಿಕದೊಡನೆ ಕೂಡಿ ಉಚ್ಚರಿಪುದು.

### ವೃತ್ತಿ.

ಒಪ್ಪುವ ಕನ್ನಡದೊಳೆ ಸ್ವಭಾವದಿಂ ಕೆಲವು ಮಹಾಪ್ರಾಣಂಗಳೊಳವು; ಅವಾವುವೆಂದೊಡೆ—

ವರ್ಗದ್ವಿತೀಯಾಕ್ಷರಂಗಳ್ಗೆ—ವಖ್ಖಾಣಂ, ದೆಖ್ಖಾಣಂ, ಪಖ್ಖಾಳಂ, ಅಖ್ಖಂಡಂ, ಖೊಪ್ಪರಂ, ಖಾಣಂ, ಖಾರಿಗೆ.—ಛಲ್ಲಂ ಮಾಡಿದಂ, ಛಪ್ಪಿಸಿದಂ, ಎಕ್ಕಛಾಯಂ.—ಠಾವು, ಠಾಣಂ, ಠಕ್ಕಿಸಿದಂ.—ಥಟ್ಟು, ಸತ್ಥಣಿ, ಮತ್ಥವಟ್ಟಿಗೆ, (ಥಾಪನೆ, ಸುತ್ಥಣಿಯುಂ), ಕಥಾಯಂ.—ಫಳೆಯಕಾಱಂ, ಫಳಾವುಗಂ, ಫಳಿ, ಅಫಳಿಯಂ.—

ವರ್ಗಚತುರ್ಥಾಕ್ಷರಂಗಳ್ಗೆ—ಘುೞಿಯುಂ (ಘುಳಿಯುಂ), ಘಾೞಿಗೆ, ಘೋೞಿಗೆ, ಘಾಸೆ, ಘಾಸರಂ.—ಝುಳಂ, ಝುಳಕಂ, ಝುಲ್ಲಱಿ, ಝುೞಿಸಿತು, ಝುಲ್ಲಿ, ಝುಂಕೆ.—

ಢೊಂಕಣಿ, ಢೆಂಕಣಿ, ಅಢಾಳಂ, ವೆಢೆಯಂ, ಢೆಂಕೆ, ಢೊಂಕರಂ.—ಧೞಂ (ಧಳಂ), ಧಾಳೆ, ಧೂಳಿ, ಧಾರಿ, ಧವಳಂ, ಧನಿ.—ಭಂಗಾರಂ, ಭಂಡಾರಂ, ಭರಿಕೈ, ಭಲ್ಲೆಯಂ, ಭಾವಂ.—ಕಂಭಕ್ಕಂ ಭಾಸೆಗಂ ವಿಕಲ್ಪಂ.

ವರ್ಗಂಗಳೈದನೆಯ ಅಕ್ಕರಂಗಳನುನಾಸಿಕಾಖ್ಯೆಯಂ ಪಡೆಗುಂ; ಙ್, ಞ್, ಣ್, ನ್, ಮ್ ಎಂಬಿವು; ಇವರ್ಕೆ ಪ್ರಯೋಗಂ—

ಬಿಙ್ಕಂಬೆತ್ತೆಸೆವಞ್ಚೆಯ
ಸಙ್ಕುಳಮನ್ ತೊಣ್ಡುಗೆಡೆವ ಶುಕಸಾರಿಕೆಯಂ | (—ಠಕೆಯಂ)
ಸೊಙ್ಕೆ ಬಲವನ್ದು ತೀಡುವ
ತೆಙ್ಕಣ ಗಾಳಿಯುಮದೆಮ್ ಮನಂಗೊಳಿಸಿದುದೋ ||ಕಂದಂ||

ಸೂತ್ರಂ.

ಯ, ವ, ಲ are Nasals and Non-nasals. The ಕ್ಷಳಂ again (see S. 5).

ಅನುನಾಸಿಕಮುಂ ಯವಲಮು
ನನುನಾಸಿಕಮುಂ ದಲೆಂಬರಾ ಸಂಸ್ಕೃತಶ |
ಬ್ದನಿಯುಕ್ತಲಕಾರದ ನೆಲೆ
ಗೆ ನಿಂದು ಸರಿಯಾಗಿ ಸಲ್ವುದಂ ಕ್ಷಳನೆಂಬರ್ || 16 ||

ಪದಚ್ಛೇದಂ.

ಅನುನಾಸಿಕಮುಂ ಯ ವ ಲಂ ಅನನುನಾಸಿಕಮುಂ ದಲ್ ಎಂಬರ್; ಆ ಸಂಸ್ಕೃತಶಬ್ದನಿಯುಕ್ತ ಲಕಾರದ ನೆಲೆಗೆ ನಿಂದು ಸರಿಯಾಗಿ ಸಲ್ವುದಂ ಕ್ಷಳಂ ಎಂಬರ್.

ಅನ್ವಯಂ.

ಯವಲಂ ಅನುನಾಸಿಕಮುಂ ಅನನುನಾಸಿಕಮುಂ ದಲ್ ಎಂಬರ್; ಆ ಸಂಸ್ಕೃತಶಬ್ದನಿಯುಕ್ತಲಕಾರದ ನೆಲೆಗೆ ಸರಿಯಾಗಿ ನಿಂದು ಸಲ್ವುದಂ ಕ್ಷಳಂ ಎಂಬರ್.

ಟೀಕು.

ಯವಲಂ=ಯಕಾರ ವಕಾರ ಲಕಾರಂಗಳ್; ಅನುನಾಸಿಕಮುಂ=ಅನುನಾಸಿಕಂಗಳೆಂದುಂ; ಅನನುನಾಸಿಕಮುಂ=ನಿರನುನಾಸಿಕಂಗಳೆಂದುಂ; ದಲ್=ನಿಶ್ಚಯವಾಗಿ; ಎಂಬರ್=ಪೇಳ್ವರ್; ಆ ಸಂಸ್ಕೃತ=ಆ ಸಂಸ್ಕೃತದ; ಶಬ್ದ=ಶಬ್ದದಲ್ಲಿ; ನಿಯುಕ್ತ=ಕೂಡಲ್ಪಟ್ಟ; ಲಕಾರದ=ಲತ್ವದ; ನೆಲೆಗೆ=ಸ್ಥಾನಕ್ಕೆ; ಸರಿಯಾಗಿ=ಸಮಾನವಾಗಿ; ನಿಂದು=ನೆಲೆಗೊಂಡು; ಸಲ್ವುದಂ=ಸಲುವಳಿಯಾಗಿರ್ಪ ಳಕಾರಮಂ; ಕ್ಷಳಂ=ಕ್ಷಳನೆಂದು; ಎಂಬರ್=ಪೇಳ್ವರ್.

ವೃತ್ತಿ.

ಯ ವ ಲಂಗಳನುನಾಸಿಕಂಗಳುಂ ನಿರನುನಾಸಿಕಂಗಳುಮಪ್ಪುವು; ಸಂಸ್ಕೃತ

ಶಬ್ದದಲ್ಲಿ ಯುಕ್ತಮಾದ ಲಕಾರದ ಸ್ಥಾನಕ್ಕೆ ನಿಂದು ಸರಿಯಾಗಿ ಸಲ್ಗು ಳಕಾರಮುಂ ಕ್ಷಳನೆಂಬರ್.

ಪ್ರಯೋಗಂ.

ಅನುನಾಸಿಕ ಯಕಾರಕ್ಕೆ—ಮೇಯಿಸಿದಂ, ನೋಯಿಸಿದಂ, ಮಯ್ಣಂ, ನಯ್ಣಂ, ಮಾಯಂ.

ಅನುನಾಸಿಕ ವಕಾರಕ್ಕೆ—ಸೇವಂ, ಸೋವೆ, ಸಾವೆ, ಜಾವಂ, ಮಾವಂ, ಮಾವಂತಂ, ಕೋವಣಂ, ಕಾವಣಂ, ಸೇವಗೆ (ಸೇವಿಗೆ), ಸೋವಿ.

ಅನುನಾಸಿಕ ಲಕಾರಕ್ಕೆ—ಕೊಲ್ಲಣಿಗೆ, ಅಲ್ಲಣಿಗೆ ಎಂದು ಮೇಳಂ, ಹಲ್ಲಣಂ, ಇಲ್ಲಣಂ.

ನಿರನುನಾಸಿಕ ಯಕಾರಕ್ಕೆ—ಬಯಕೆ, ಬಿಯದಂ, ಬಿಯಳಂ (ಬಯಳಂ), ದಯಕಾಱಂ, ದಾಯಿಗಂ, ದಾಯಂ, ವಾಯಂ, ಬಯಲ್.

ನಿರನುನಾಸಿಕ ವಕಾರಕ್ಕೆ—ಕವಳಂ, ಹವಳಂ, ಕಿವಳಂ, ತವಕಂ, ಅವಕಂ.

ನಿರನುನಾಸಿಕ ಲಕಾರಕ್ಕೆ—ಹಾಲಿಗೆ, ಹಲಸಿಗಂ, ಹಲಗೆ, ನೆಲಕಲನೆಂದು ಲೋಭಿ.

ಲಕಾರಕ್ಕೆ ಕ್ಷಳಂ—ಜಲಂ=ಜಳಂ; ತಿಲಂ=ತಿಳಂ; ಫಲಂ=ಫಳಂ; ಬಲಂ=ಬಳಂ; ಖಲಂ=ಖಳಂ; ಕಮಲಂ=ಕಮಳಂ.

ಸೂತ್ರಂ.

ಸಮ ಸಂದಿರ್ದ ೱ್ಕಮುಮ
ೲಮುಮೊಂದಿದ ಬಿಂದುವುಂ ವಿಸರ್ಗಮುಮೆಂದ |
ಕ್ಕುಮಿವೆಯ್ದೆ ಯೋಗವಾಹಂ
ಕ್ರಮದಿಂ ಕಪಯುಗಳಮಿವಱೊಳನುಬಂಧಂಗಳ್ || 17 ||

Besides ಂ and ಃ (Ss. 11; 12), there are two other Yôgavâhas viz. ೱ and ೲ[1], the first occurring before ಕ, the second before ಪ. (cf. S. 32).

ಪದಚ್ಛೇದಂ.

ಸಮ ಸಂದು ಇರ್ದ ೱ್ಕಮುಂ ೲಮುಂ ಒಂದಿದ ಬಿಂದುವುಂ ವಿಸರ್ಗಮುಂ ಎಂದು, ಅಕ್ಕುಂ ಇವು ಎಯ್ದೆ ಯೋಗವಾಹಂ; ಕ್ರಮದಿಂ ಕಪಯುಗಳಂ ಇವಱೊಳ್ ಅನುಬಂಧಂಗಳ್.

ಯಥಾನ್ವಯಂ.

ಟೀಕು.

ಸಮಸಂದು=ಸಮಾನವಾಗಿ ಸಂದು; ಇರ್ದ=ಇರ್ದ; ೱ್ಕಮುಂ=ೱಕ್ಕಿಂಬ ಜಿಹ್ವಾಮೂಲೀ

1) These 2 Sibilants correspond to the Vajrâkṛti and Gajakumbhâkṛti in the Devanâgari. S. 32 includes ೱ and ೲ among the Sanskṛt-Canarese letters.

ಯಮುಂ; ೲಮುಂ=ೲಂಬ ಉಪಧ್ಮಾನೀಯಮುಂ; ಒಂದಿದ=ಕೂಡಿದ; ಬಿಂದುವುಂ=ಸೊನ್ನೆಯುಂ; ವಿಸರ್ಗಮುಂ=ವಿಸರ್ಜನೀಯಮುಂ; ಎಂದು=ಎಂದು; ಇವು=ಈ ನಾಲ್ಕಕ್ಷರಂಗಳ್; ಎಯ್ದೆ (ಐದೆ)=ಚನ್ನಾಗಿ; ಯೋಗವಾಹಂ=ಯೋಗವಾಹಾಕ್ಷರಂಗಳ್; ಅಕ್ಕುಂ=ಅಪ್ಪುವು; ಕ್ರಮದಿಂ=ತರುವಾಯಿಂದೆ; ಕಪಯುಗಳಂ=ಕಕಾರ ಪಕಾರಂಗಳೆಂಬೆರಡುಂ; ಇವಱೊಳ್=ಈ ಜಿಹ್ವಾಮೂಲೀಯೋಪಧ್ಮಾನೀಯಂಗಳಲ್ಲಿ; ಅನುಬಂಧಂಗಳ್=ಸಂಬಂಧಂಗಳಾಗಿರ್ಪವು.

ವೃತ್ತಿ.

ಕಕಾರಮುಚ್ಚಾರಣಾರ್ಥಮಾಗುೞಿದ ಪಸುಂಬೆಯ ಲಚ್ಚಣದಂತಿರ್ದ ವರ್ಣಂ ಜಿಹ್ವಾಮೂಲೀಯಮೆಂಬುದು; (ಕಕಾರಸಂಗಡದ) ಅದಱ ಸ್ವರೂಪಂ || ೱಕ ||.

ಪಕಾರಮುಚ್ಚಾರಣಾರ್ಥಮಾಗುೞಿದ ಕುಮಾರೀಸ್ತನಯುಗಳಾಕೃತಿಯ ವರ್ಣಮುಪಧ್ಮಾನೀಯಂ; (ಪಕಾರಸಂಗಡದ) ಅದಱ ಸ್ವರೂಪಂ || ೲ ||.

ಕೈವಾರಮಂ ಬೀಸಿದಂತೆ ಬಟ್ಟಿತ್ತಾಗಿ ತೋರ್ಪುದು ಸೊನ್ನೆ; ಅದಱ ರೂಪಂ||೦||.

ಮೇಲೆಯುಂ ಕೆಳಗೆಯುಂ ಆ ತೆಱದಿನಿರೆ, ವಿಸರ್ಗಮದಱ ಸ್ವರೂಪಂ || ಃ ||.

ಈ ನಾಲ್ಕು ಯೋಗವಾಹಂಗಳ್.

### 4. The Canarese Consonants ಱ, ೞ, ಳ (ಕುಳಂ), ಲ.

ಸೂತ್ರಂ.

On the three Canarese consonants ಱ (Ṛa)[1], ೞ (Ḻa) and ಳ (Ḷa)[2]. They are cognates of ರ, ಡ and ಲ. ಡ is often changed into ೞ in Canarese words (cf. S. 232; see. s. S. 66; S. 183), and sometimes in Tadbhavas (ನಾಡಿಕಾ = ನಾೞಿಗೆ).

ಅತಿಪೀಡನದಿಂ ರೇಫಾ
ಶ್ರಿತಮಾದ ಱಕಾರಮುಂ ಸಮಂತು ಡಕಾರಾ |
ಶ್ರಿತಮಾದ ೞ[3]ನುಮಂಗೀ
ಕೃತಪದಲತ್ವಕೆ ಸನೇಮ ಸಲ್ಲದ ಕುಳನುಂ || 18 ||
ಇವು ವರ್ಣಾವೃತ್ತಿಗೆ[4] ಸ
ಲ್ವುವು; ಸಂದುಂ ಪ್ರಾಸದೆಡೆಗೆ ಸಲ್ಲವು; ಯಮಕ |
ವ್ಯವಹೃತಿಗಾಗವು; ದೇಶೀ
ಯವೆನಿಪುವಾ ಹ್ರಸ್ವಮೆನಿಸಿದಾ ಎ ಒ ಸಹಿತಂ || 19 ||

ಪದಚ್ಛೇದಂ.

ಅತಿಪೀಡನದಿಂ ರೇಫಾಶ್ರಿತಂ ಆದ ಱಕಾರಮುಂ, ಸಮಂತು ಡಕಾರಾಶ್ರಿತಂ ಆದ ೞನುಂ, ಅಂಗೀಕೃತಪದಲತ್ವಕೆ ಸನೇಮ ಸಲ್ಲದ ಕುಳನುಂ—ಇವು ವರ್ಣಾವೃತ್ತಿಗೆ ಸಲ್ವುವು; ಸಂದುಂ ಪ್ರಾ

1)=ಮಲಯಾಳಂ || റ || 2)=ಮಲಯಾಳಂ || ഴ || 3) ಈ ಅಕ್ಷರಂ ಉಚಿತೋಚ್ಚಾರಣಕ್ಕಾಗಿ ೞ ಎಂಬುದಱ ಪಿಂದೆ ಇಟ್ಟಿರ್ಪುದು. 4) Repetition of cognate letters.

ಸದ ಎಡೆಗೆ ಸಲ್ಲವು; ಯಮಕವ್ಯವಹೃತಿಗೆ[1] ಆಗವು; ದೇಶೀಯಂ ಎನಿಪುವು, ಆ ಹ್ರಸ್ವಂ ಎನಿಸಿದ ಆ ಎ ಒ ಸಹಿತಂ.

### ಯಥಾನ್ವಯಂ.

### ಟೀಕು.

ಅತಿಪೀಡನದಿಂ=ರೇಫೆ ಪುಟ್ಟುವ ಸ್ಥಾನವಂ ಬೆಟ್ಟಿತ್ತಾಗಿ ಉಚ್ಚರಿಪುದಱಿಂದೆ; ರೇಫಾಶ್ರಿತಂ=ರೇಫೆಯನಾಶ್ರೈಸಿ ಪುಟ್ಟಿದುದು; ಆದ=ಆದ; ಱಕಾರಮುಂ=ಱಕಾರಮುಂ; ಸಮಂತು=ಹಾಗೆ; ಡಕಾರಾಶ್ರಿತಂ=ಡಕಾರವನಾಶ್ರೈಸಿ ಪುಟ್ಟಿದುದು; ಆದ=ಆದ; ಱೞನುಂ=ಱೞನೆಂಬ ೞಕಾರವುಂ; ಅಂಗೀಕೃತಪದಲತ್ವಕೆ=ಅಂಗೀಕರಿಸಲ್ಪಟ್ಟ ಪದಂಗಳ ಲಕಾರಕ್ಕೆ; ಸನೇಮ=ಪ್ರಾಸು; ಸಲ್ಲದ=ಸಲುವಳಿಯಾಗದ; ಕುಳನುಂ=ಕುಳವೆಂಬ ಳಕಾರಮುಂ; ಇವು=ಈ ಅಕ್ಷರಂಗಳ್; ವರ್ಣಾವೃತ್ತಿಗೆ=ವರ್ಣಂಗಳಾವೃತ್ತಿಗೆ; ಸಲ್ವುವು=ಸಲುವಳಿಯಪ್ಪವು; ಸಂದುಂ=ವರ್ಣಾವೃತ್ತಿಗೆ ಸಂದುಂ; ಪ್ರಾಸದ=ನಿಯಾಮದ (ನಿಯಮದ); ಎಡೆಗೆ=ಸ್ಥಾನಕ್ಕೆ; ಸಲ್ಲವು=ಸಲುವಳಿಯಾಗವು; ಯಮಕವ್ಯವಹೃತಿಗೆ=ಯಮಕವ್ಯವಹಾರಕ್ಕೆ; ಆಗವು=ಸಲುವಳಿಯಾಗವು; ಆ ಹ್ರಸ್ವಮೆನಿಸಿದ=ಆ ಸ್ವರಸಂಜ್ಞೆಯಲ್ಲಿ ಹ್ರಸ್ವಂಗಳೆನಿಸಿದ; ಆ ಎ ಒ ಸಹಿತಂ=ಆ ಎ ಒ ಎಂಬಿವು ಸಹಿತವಾಗಿ; ದೇಶೀಯಂ=ದೇಶೀಯಾಕ್ಷರಂಗಳ್; ಎನಿಪುವು=ಎನಿಸುವವು.

### ವೃತ್ತಿ.

ರೇಫೆ ಪುಟ್ಟುವ ತಾಣಮಂ ಬೆಟ್ಟಿತ್ತಾಗುಚ್ಚರಿಸೆ, ಱಕಾರಂ ಪುಟ್ಟುಗುಂ; ಡಕಾರಂ ಪುಟ್ಟುವ ತಾಣಮಂ ಬೆಟ್ಟಿತ್ತಾಗುಚ್ಚರಿಸೆ, ಱೞಂ ಪುಟ್ಟುಗುಂ; ಲಕಾರಂ ಪುಟ್ಟುವ ತಾಣಮಂ ಬೆಟ್ಟಿತ್ತಾಗುಚ್ಚರಿಸೆ, ಕುಳಳಕಾರಂ ಪುಟ್ಟುಗುಂ. ರೇಫೆ ಮೂರ್ಧನ್ಯಂ, ಱಕಾರಮದಱೊಳ್ (ಎಂದೊಡೆ ಮೂರ್ಧನ್ಯಂಗಳೊಳ್ ಅತಿ ಪಿಂದೆಳೆದುಚ್ಚರಿಸುವ) ಏಕಸ್ಥಾನಿ (—ಸ್ಥಾಯಿ); ಡಕಾರಂ ಮೂರ್ಧನ್ಯಂ, ಱೞನದಱೊಳೇಕಸ್ಥಾನಿ; ಲಕಾರಂ ದಂತ್ಯಂ, ಕುಳನದಱೊಳೇಕಸ್ಥಾನಿ. ಮೊರೆ, ಮೊಱೆ; ಮರೆ, ಮಱೆ;—ಕೋಡಿ, ಕೋೞಿ; ಕಡಲ್, ಕೞಲ್;—ಮೊಲೆ, ಮೊಳೆ; ಕಲೆ, ಕಳೆ—ಇಂತೇಕಸ್ಥಾನಿಗಳಾದ ಕಾರಣದಿಂದಿವು ವರ್ಣಾವೃತ್ತಿಗೆ ಸಲ್ವುವು; ನಿಯಾಮಕ್ಕಂ ಯಮಕವ್ಯವಹೃತಿಗಮಾಗವು. ಱಕಾರಮುಂ ಱೞನುಂ ಕುಳನುಂ ಹ್ರಸ್ವಮಾದ ಎ ಒ ಎಂಬಿವುಂ ಸಂಸ್ಕೃತದೊಳಿಲ್ಲ; ಅವು ಕೂಡಿ ದೇಶೀಯಂಗಳಾಗಿ ಕನ್ನಡದೊಳೊಳವು.

### ಪ್ರಯೋಗಂ.

ರೇಫೆ ಱಕಾರಂಗಳ ವರ್ಣಾವೃತ್ತಿಗೆ—

ಸುರರಿಱಿದೊಱಗಿದ ಬಿರುದರ
ಕರುಳಂ ಕೊಱೆಕೊಱೆದು ಮರುಳಿರುಳ್ತಿಂಬೆಡೆಯೊಳ್ || ಕಂದಾರ್ಧಂ ||

1) ಯಮಕಂ is Paronomasy, the recurrence of syllables (words) of consonance.

ಡಕಾರ ಱೞಂಗಳ ವರ್ಣಾವೃತ್ತಿಗೆ—
ಖೞಿಲೆ[1] ನುಡಿದಱಲೆ ಬಗ್ಗಿಸಿ
ಘೞಿಲೆನೆ[2] ನಡೆಯೆಂದು ಜಡಿದು ಸಾರಥಿಯಂ[3] || ಕಂದಭಾಗಂ ||
ಲಕಾರ ಕುಳಂಗಳ ವರ್ಣಾವೃತ್ತಿಗೆ—ದೆಸೆಗಳನಳರ್ದುಸುರಲ್ಕಳರ್ದು
ಮಿಳಿರ್ದು ತಳರ್ದತ್ತಾಗಳ್ (—ಳರ್ದುತ್ತಾಗಳ್)[4].
ರೇಫೆ ಱಕಾರಂಗಳ ನಿಯಮಮಾಗದುದರ್ಕೆ—
ಧುರದೊಳ್ಪಱಿಮಱಿಯಾಡುವ
ತೆಱದಿಂದುಱದಿಱಿದನೆಂಬ ನಿಯಮಂ ದೂಷ್ಯಂ || ಕಂದಾರ್ಧಂ ||
ಡಕಾರ ಱೞಂಗಳ್ಗೆ ಪ್ರಾಸಮಾಗದುದರ್ಕೆ—
ಕೋಡದಿಱಿದಿಂದ್ರರಾದರ್ ನಾೞಿಗೆಯೊಳ್ಳೀರರೆಂಬ ನಿಯಮಂ
ದೂಷ್ಯಂ || ಕಂದಾರ್ಧಂ ||
ಲಕಾರ ಕುಳಂಗಳ ಪ್ರಾಸಮಾಗದುದರ್ಕಂ—
ನೆಲದೊಳ್ ಪಗೆ ಪುಗೆ ಘಣಿಯ ಪೊ
ಲೊಳಪೊಕ್ಕಱಿಸಿದನದೆಂಬ ನಿಯಮಂ ದೂಷ್ಯಂ || ಕಂದಾರ್ಧಂ ||
ಯಮಕಂಗಳಾಗದುದರ್ಕೆ—
ಕರೆಯಂ (ಕರಿಯಂ) ನೆಱಮಂ[5] ವಂಶಂ
ಕಱಿಯಂ ಪೊತ್ತಪ್ಪುದೆಂದು[6] ಸಂಗರಮುಖದೊಳ್ || ಕಂದಾರ್ಧಂ ||

ಇಲ್ಲಿ ಶಬ್ದಾವೃತ್ತಿ ಕೆಟ್ಟಿಪ್ಪುದಾಗಿಯುಂ, ಕಱಿಯಂ ಪೊತ್ತಪ್ಪುದೆಂಬುದಂ (—ದುಂ) ಕರೆಯಂ ಪೊತ್ತಪ್ಪುದೆಂದೊಡರ್ಥಘಟನೆಯಿಲ್ಲಾಗಿಯುಂ[7], ಯಮಕಲಕ್ಷಣಮಿಲ್ಲ.

ಡಕಾರ ಱೞಂಗಳ್ಗಂ ಲಕಾರ ಕುಳಂಗಳ್ಗಂ ಈ ತೆಱದಿಂ ಯಮಕಲಕ್ಷಣಮಿಲ್ಲ.

ಡಕಾರಕ್ಕಾದೇಶಮಾದ ೞಕ್ಕೆ ಪ್ರಯೋಗಂ—ಕಾಡುಕಿಚ್ಚು=ಕಾೞ್ಕಿಚ್ಚು; ಕೋಡುಕುಟ್ಟು=ಕೋೞ್ಕುಟ್ಟು; ನೀಡುಕರಿಸಿದಂ=ನೀೞ್ಕರಿಸಿದಂ (see sub S. 24; S. 304); ಬೀಡುಕೊಂಡಂ=ಬೀೞ್ಕೊಂಡಂ; ನಾಡಕಡೆ=ನಾೞ್ಕಡೆ; ಸೆಡುಪಟ್ಟಂ=ಸೆೞ್ಪಟ್ಟಂ; ನೀರಡಿಕೆ=ನೀರೞ್ಕೆ (ನೀರೞಿಕೆ); ಎರಡುಮೂಱು=ಎೞ್ಮೂಱು; ಮಾಡುವಂ=ಮಾೞ್ಪಂ; ನೋಡುವಂ=ನೋೞ್ಪಂ; ಬೇಡುವಂ=ಬೇೞ್ಪಂ; ಬೆಗಡುವಂ=ಬೆಗೞ್ಪಂ; ಪೞ್ಕಿ ತೞ್ಕೈಸಿದನೆಂಬಲ್ಲಿ (ತೞ್ಕಿ—ಎಂತ ಪಾಠಾಂತರಂ) ತಡಕೈಯ್ಯಂ ಮಾಡಿದನೆಂಬರ್ಥಂ; ನಾಡಿಕಾ=ನಾೞಿಗೆ, ನಾೞಿಗೆಯೆಂದು ಘೞಿಗೆ; ಎಸಡಿಗೆ=ಎಸೞ್ಗೆ[8], ಪೂವಿನೆಸಳೊಳ್ ಕುಳಂ; ಕಿವುಡು ಕೇಳ್ಗನೆಂಬಲ್ಲಿ ಕಿವುೞ್ಕೇಳ್ಗಂ[9].

1) M. A. ಕಱಿಲೆ. 2) M. A. ಘುೞಿಲನೆ. 3) M. A. ಸಾರದೆಯಂ. 4) M. A. only ಮಿಳಿರ್ದುತ್ತಾಗಳ್; M. B. ತಳರ್ದದತ್ತಾಗಳ್. 5) M. A. ನೆರವಂ; M. B. ನೆರ. 6) M. A. ಪೊಲ್ತಪ್ಪುದೆಂದು. 7) M. A. ಇಲ್ಲಾಗಿ. 8) M. B. ಎಸಡಿ=ಎಸೞಿ. 9) M. B. ಕಿವುಡುಗೇಳ್ವನೆಂಬಲ್ಲಿ ಕಿವುೞ್ಗೇಳ್ವಂ.

## ಸೂತ್ರಂ.

Sanskrt ಡ changed also into ಳ in some Tadbhava-nouns (cf. S. 284).

ದಾಡಿಮಮಾ ಕೂಷ್ಮಾಂಡಂ
ಗೌಡಂ ಗುಡಮಡಸಿ ಪೊಡೆವ ಝುಗಡೆ ವಿಡಂಗಂ |
ಕೂಡೆ ಕುಳನೇಡಕಮುಮಱಿ
ರೂಢಿಯ ಕುಳನೆಂದು ೞದಪಭ್ರಂಶತೆಯೊಳ್ || 20 ||

## ಪದಚ್ಛೇದಂ.

ದಾಡಿಮಂ, ಆ ಕೂಷ್ಮಾಂಡಂ, ಗೌಡಂ, ಗುಡಂ, ಅಡಸಿ ಪೊಡೆವ ಝುಗಡೆ, ವಿಡಂಗಂ ಕೂಡೆ ಕುಳಂ; ಏಡಕಮುಂ, ಅಱಿ, ರೂಢಿಯ ಕುಳಂ ಎಂದು, ೞದ ಅಪಭ್ರಂಶತೆಯೊಳ್!

## ಅನ್ವಯಂ.

ೞದ (ಎಂದೊಡೆ ಡಕಾರಂ ೞಕಾರಮಾಗ ತಕ್ಕದೆಡೆಯೊಳ್) ಅಪಭ್ರಂಶತೆಯೊಳ್ ದಾಡಿಮಂ, ಆ ಕೂಷ್ಮಾಂಡಂ, ಗೌಡಂ, ಗುಡಂ, ಅಡಸಿ ಪೊಡೆವ ಝುಗಡೆ, ವಿಡಂಗಂ ಕೂಡೆ ಕುಳಂ; ಏಡಕಮುಂ ರೂಢಿಯ ಕುಳಂ ಎಂದು, ಅಱಿ!

## ಟೀಕು.

ೞದ=ೞವೆಂಬ ೞಕಾರದ; ಅಪಭ್ರಂಶತೆಯೊಳ್=ತದ್ಭವದಲ್ಲಿ; ದಾಡಿಮಂ=ದಾಡಿಮವೆಂಬ ಶಬ್ದಂ; ಆ ಕೂಷ್ಮಾಂಡಂ=ಆ ಕೂಷ್ಮಾಂಡಮೆಂಬ ಶಬ್ದಂ; ಗೌಡಂ=ಗೌಡಮೆಂಬ ಶಬ್ದಂ; ಗುಡಂ=ಗುಡಮೆಂಬ ಶಬ್ದಂ; ಅಡಸಿ=ಸಂಗಡಿಸಿ; ಪೊಡೆವ=ಹೊಡೆವ; ಝುಗಡೆ=ಝುಗಡೆಯೆಂಬ ಶಬ್ದಂ; ವಿಡಂಗಂ=ವಿಡಂಗಮೆಂಬ ಶಬ್ದಂ; ಕೂಡೆ=ಒಡನೆ; ಕುಳಂ=ಕುಳಮೆಂಬ ಳಕಾರಂ; ಏಡಕಮುಂ=ಏಡಕಮೆಂಬ ಶಬ್ದಮುಂ; ರೂಢಿಯ=ಪ್ರಸಿದ್ಧಿಯ; ಕುಳನೆಂದು=ಕುಳಮೆಂಬ ಳಕಾರವೆಂದು; ಅಱಿ=ತಿಳಿ!

## ವೃತ್ತಿ.

ದಾಳಿಂಬಂ, ಕುಂಬಳಂ, ಗೌಳಂ, ಗುಳಂ, ಝುಗಳೆ, ವಿಳಂಗಂ ಇವು ಕೂಡೆ ಡಕಾರಕ್ಕೆ ಪುಟ್ಟಿ ೞದಪಭ್ರಂಶತೆಯಂ ಪಡೆದುಂ ರೂಢಿಯ ಕುಳಂಗಳ್; ಏಳಗಮೆಂಬುದು ಏಡಕಕ್ಕೆ ಪುಟ್ಟಿಯುಂ ಕುಳಂ.

## ಸೂತ್ರಂ.

Sanskrt ಟ, ತ, ಠ, ಳ(ಕ್ಷಳಂ) changed into ೞ (cf. Ss. 257; 280) in Tadbhavas.

ಕೃತಿಮಾರ್ಗದೊಳುಂಟು ಟಕಾ
ರತಕಾರಠಕಾರರೇಫದೆಡೆಗಂ ಬಹುಳ |
ಸ್ಥಿತಿಯಿಂ ಕ್ಷಳಕಮಪಭ್ರಂ
ಶತೆಯೊಳ್ಸುಕವೀಂದ್ರರಿಂದೆ ೞದಾದೇಶಂ || 21 ||

## ಪದಚ್ಛೇದಂ.

ಕೃತಿಮಾರ್ಗದೊಳ್ ಉಂಟು ಟಕಾರತಕಾರಠಕಾರರೇಫದ ಎಡೆಗಂ ಬಹುಳ ಸ್ಥಿತಿಯಿಂ ಕ್ಷಳಕಂ ಅಪಭ್ರಂಶತೆಯೊಳ್ ಸುಕವೀಂದ್ರರಿಂದೆ ಱಱದ ಆದೇಶಂ.

## ಅನ್ವಯಂ.

ಕೃತಿಮಾರ್ಗದೊಳ್ ಸುಕವೀಂದ್ರರಿಂದೆ ಅಪಭ್ರಂಶತೆಯೊಳ್ ಟಕಾರತಕಾರಠಕಾರರೇಫದ ಎಡೆಗಂ ಕ್ಷಳಕಂ ಬಹುಳ ಸ್ಥಿತಿಯಿಂ ಱಱದ ಆದೇಶಂ ಉಂಟು.

## ಟೀಕು.

ಕೃತಿಮಾರ್ಗದೊಳ್=ಕಾವ್ಯಮಾರ್ಗದಲ್ಲಿ; ಸುಕವೀಂದ್ರರಿಂದೆ=ಸತ್ಕವೀಂದ್ರರಿಂದೆ; ಅಪಭ್ರಂಶತೆಯೊಳ್=ಅಪಭ್ರಂಶದಲ್ಲಿ; ಟಕಾರತಕಾರಠಕಾರರೇಫದ=ಟಕಾರದ ತಕಾರದ ಠಕಾರದ ರೇಫೆಯ; ಎಡೆಗಂ=ಸ್ಥಾನಕ್ಕೆಯುಂ; ಕ್ಷಳಕಂ=ಕ್ಷಳಕಾರಕ್ಕೆಯುಂ; ಬಹುಳ ಸ್ಥಿತಿಯಿಂ=ಬಹುಳಸ್ಥಿತಿಯಿಂದೆ; ಱಱದ=ಱಱಮೆಂಬ ಱಕಾರದ; ಆದೇಶಂ=ಆದೇಶಂ; ಉಂಟು=ಉಂಟಾಗಿರ್ಪುದು.

## ವಿಚಾರಂ.

ಆದೇಶಮೆಂದೊಡೆ ಮೊದಲಿರ್ದುದಂ ತೊಲಗಿಸಿ ಬರ್ಪುದೆಂದಱಿವುದು.

## ವೃತ್ತಿ.

ಕಾವ್ಯಮಾರ್ಗದೊಳ್ ಟಕಾರ ತಕಾರ ಠಕಾರ ರೇಫ ಕ್ಷಳಂಗಳ್ಗೆ ಱಱಾದೇಶಂ ಅಪಭ್ರಂಶತೆಯೊಳುಂಟು.

## ಪ್ರಯೋಗಂ.

ಟಕಾರಕ್ಕೆ—ಘಟಿಕೆ=ಗಱಿಗೆ; ಘೋಟಿಕೆ=ಗೋಱಿಗೆ; ಧಾಟಿ=ದಾಱಿ; ಲಾಟಂ=ಲಾಱಂ, ಲಾಟಭಾಷೆಗಂ=ಲಾಱಬಾಸೆಗಂ; ಘೋಟಾರೂಢಂ=ಗೋಱಾಯಿಲಂ; ಕುಕ್ಕುಟಂ=ಕೋೞಿ.

ತಕಾರಕ್ಕೆ—ಪ್ರತಿಹಸ್ತಂ=ಪಱಿಹತ್ತಂ; ಪ್ರತಿಪಾದುಕೆ=ಪಱಿವಾವುಗೆ.

ಠಕಾರಕ್ಕೆ—ಮಠಿಕೆ=ಮಱಿಗೆ; ಪೇಠಿಕೆ=ಪೇಱಿಗೆ.

ರೇಫಕ್ಕೆ—ಕ್ರೂರಂ=ಕೂಱ್; ಝಲ್ಲರಿ=ಝಲ್ಲಱಿ.

ಕ್ಷಳಕ್ಕೆ—ತಾಳಂ (ಪ್ರತಾಳಂ)=ತಾಱ್; ಪುಳಿನಂ=ಪುಱಿಲ್; ಕಳಮಂ=ಕಱಮೆ; ಅರ್ಗಳಂ=ಅಗುಱಿ; ಮನ್ಯಾಳಿ=ಮನ್ನಱಿ; ಅಳಿಕಾಬದ್ಧಂ=ಅಱಿಗೆವದ್ದಂ.

### ಸೂತ್ರಂ.

Sanskṛt ಟ changed also into ಳ (ಕುಳಂ) in some Tadbhavas (cf. S. 272).

ಸ್ಫಟಿಕಂ ಪೇಟಿಕೆ ವೀಟಿಕೆ
ಘಟಿಕೆ ವರಾಟಂ ಪೊದೞ್ದ ರಘಟೆ ಕುಳಂ ತಾಂ |
ಸ್ಫುಟಸಹಿತಂ; ಸ್ಫೋಟಕಲಂ
ಪಟಶಬ್ದಯುಗಂ ೞಿಕ್ಕೆ ನೆಱೆ ಸಂದೇಹಂ || 22 ||

### ಪದಚ್ಛೇದಂ.

ಸ್ಫಟಿಕಂ, ಪೇಟಿಕೆ, ವೀಟಿಕೆ, ಘಟಿಕೆ, ವರಾಟಂ, ಪೊದೞ್ದ ರಘಟಿ ಕುಳಂ ತಾಂ ಸ್ಫುಟಸಹಿತಂ; ಸ್ಫೋಟಕಲಂಪಟಶಬ್ದಯುಗಂ ೞಿಕ್ಕೆ ನೆಱೆ ಸಂದೇಹಂ.

### ಅನ್ವಯಂ.

ಸ್ಫಟಿಕಂ, ಪೇಟಿಕೆ, ವೀಟಿಕೆ, ಘಟಿಕೆ, ವರಾಟಂ, ಪೊದೞ್ದ ರಘಟಿ ಸ್ಫುಟಸಹಿತಂ ತಾಂ ಕುಳಂ; ಸ್ಫೋಟಕಲಂಪಟಶಬ್ದಯುಗಂ ೞಿಕ್ಕೆ ನೆಱೆ ಸಂದೇಹಂ.

### ಟೀಕು.

ಸ್ಫಟಿಕಂ=ಸ್ಫಟಿಕವೆಂಬ ಶಬ್ದಂ; ಪೇಟಿಕೆ=ಪೇಟಿಕೆಯೆಂಬ ಶಬ್ದಂ; ವೀಟಿಕೆ=ವೀಟಿಕೆಯೆಂಬ ಶಬ್ದಂ; ಘಟಿಕೆ=ಘಟಿಕೆಯೆಂಬ ಶಬ್ದಂ; ವರಾಟಂ=ವರಾಟವೆಂಬ ಶಬ್ದಂ; ಪೊದೞ್ದ=ಪ್ರಸಿದ್ಧವಾದ; ರಘಟಿ=ರಘಟಿಯೆಂಬ ಶಬ್ದಂ; ಸ್ಫುಟಸಹಿತಂ=ಸ್ಫುಟಮೆಂಬ ಶಬ್ದ ಸಹಿತಮಾಗಿ; ತಾಂ=ಈ ಶಬ್ದಂಗಳ್ ತಾಂ; ಕುಳಂ=ಳಕಾರಮಪ್ಪುವು; ಸ್ಫೋಟಕಲಂಪಟಶಬ್ದಯುಗಂ=ಸ್ಫೋಟಕವೆಂಬ ಲಂಪಟವೆಂಬ ಶಬ್ದಂಗಳೆರಡುಂ; ೞಿಕ್ಕೆ=ೞವೆಂಬ ೞಕಾರಕ್ಕೆ; ನೆಱೆ=ಚನ್ನಾಗಿ; ಸಂದೇಹಂ=ಸಂದೇಹಮಪ್ಪುವು, ಕುಳವೇ ಅಪ್ಪುದೆಂಬುದರ್ಥಂ.

### ವೃತ್ತಿ.

ಪಳಿಕಂ, ಪೇಳಿಗೆ, ವೀಳಿಗೆ, ಗುಳಿಗೆ, ವರಾಳಂ, ರಗಳೆ, ಪುಳಂ ಇವು ಅಪಭ್ರಂಶದೊಳ್ ಟಕಾರಕ್ಕೆ ಪುಟಿಯುಂ ಕುಳಂಗಳಾದವು; ಸ್ಫೋಟಕಶಬ್ದಕ್ಕಾದ ಹೋಳಿಗೆಯೆಂಬುದುಂ ಲಂಪಟಶಬ್ದಕ್ಕಾದ ಲಂಬಳವೆಂಬುದುಂ ೞಿಕ್ಕೆ ಸಂದೇಹಂ, ಕುಳಂಗಳೆಯಪ್ಪುವು.

### ಸೂತ್ರಂ.

A list of words with the letter ೞ.

ಏಕದ್ವಿತ್ರಿಚತುಃಪಂ
ಚಾಕಲಿತಾರ್ಥಂಗಳಾಗಿ ೞನೊಳವು ನಿಸ |
ಗರ್ಗಾಕೃತಿಯಿಂದವನಾದಿಮ
ಹಾಕವಿಕೃತಿದೃಷ್ಟಮುಂ ನಿರಾಕುಳಮುಸಿರ್ವೆಂ || 23 ||

## ಪದಚ್ಛೇದಂ.

ಏಕದ್ವಿತ್ರಿಚತುಃಪಂಚಾಕಲಿತಾರ್ಥಂಗಳ್ ಆಗಿ ೞಿೞಿಂ ಒಳವು ನಿಸರ್ಗಾಕೃತಿಯಿಂದೆ; ಅವಂ ಆದಿಮಹಾಕವಿಕೃತಿದೃಷ್ಟಮಂ ನಿರಾಕುಳಂ ಉಸಿರ್ವೆಂ.

## ಯಥಾನ್ವಯಂ.

## ಟೀಕು.

ಏಕ=ಒಂದರಿಲ್ಲಿ; ದ್ವಿ=ಎರಡರಿಲ್ಲಿ; ತ್ರಿ=ಮೂಱಿರಿಲ್ಲಿ; ಚತುಃ=ನಾಲ್ಕರಿಲ್ಲಿ; ಪಂಚ=ಐದರಿಲ್ಲಿ; ಆಕಲಿತ=ಕೂಡಲ್ಪಟ್ಟ; ಅರ್ಥಂಗಳ್=ಅರ್ಥವುಳ್ಳವು; ಆಗಿ=ಆಗಿ; ೞಿೞಿಂ=ೞಿೞಿಶಬ್ದಂಗಳ್; ಒಳವು=ಉಂಟು; ನಿಸರ್ಗಾಕೃತಿಯಿಂದೆ=ನಿಶ್ಚಯಾಕಾರದಿಂದೆ; ಅವಂ=ಅ ೞಿೞಿಶಬ್ದಂಗಳಂ; ಆದಿ=ಪೂರ್ವದ; ಮಹಾಕವಿ=ಮಹಾಕವಿಗಳ; ಕೃತಿದೃಷ್ಟಮಂ=ಕಾವ್ಯದೃಷ್ಟಮಂ; ನಿರಾಕುಳಂ=ವ್ಯಾಕುಳಮಿಲ್ಲದ ಹಾಗೆ; ಉಸಿರ್ವೆಂ=ಪೇಳ್ವೆಂ.

## ವೃತ್ತಿ.

ಒಂದರ್ಥಮಂ ಎರಡರ್ಥಮಂ ಮೂಱರ್ಥಮಂ ನಾಲ್ಕರ್ಥಮಂ ಐದರ್ಥಮಂ ಪೇೞ್ವ ಸಹಜ ೞಿೞಿಂಗಳಂ ಪ್ರಾಮಾಣಪುರುಷರ ಕಾವ್ಯಮಾರ್ಗದಿಂ ಕಂಡು, ನೆಱೆ ಪೇೞ್ದಪೆಂ. ಅವಾವೆಂದೊಡೆ.—

ಒಂದರ್ಥಕ್ಕೆ—

1. ಉೞಿಗೆಂದು, ಬೇಟಂ.
2. ಉೞಿಗಿದನೆಂದು, ಒಲ್ದಂ. (cf. 142).
3. ಈೞ್ದನೆಂದು, ಸೆಳೆದಂ. (Wanting in the list of verbs, ch. VI). } Whether with short initials? cf. S. 240.
4. ಆೞ್ದನೆಂದು, ಮುಳುಗಿದಂ. (cf. 915).
5. ಬೞಿಲ್ದನೆಂದು, ಜಗುೞ್ದಂ. (cf. 215).
6. ಜಗುೞ್ದನೆಂದು, ಜಾಱಿದಂ. (cf. 909).
7. ಅಗುೞ್ದನೆಂದು, ನೀರ್ನೆಲೆದಪ್ಪಿದಂ. (cf. 916).
8. ತೆಗೞ್ದನೆಂದು, ಪೞಿದಂ. (cf. 908).
9. ಅಸಕೞಿದನೆಂದು, ಕೈ ಮೀಱಿದಂ. (cf. 897).
10. ತೞ್ಗಿನೆಂದು, ಕುಸಿದಂ. (Wanting).
11. ಕಿೞ್ಗಿದನೆಂದು, ಗುಜ್ಜಂ. (Wanting).
12. ದಂಡುೞಿಗನೆಂದು, ದಂಡದೊಳ್ ಪಡೆದವಂ [—ಪಡೆವಂ].
13. ಆೞಿಾೞಿಗಮೆಂದು, ಒಂದು ಸಾಮಾನ್ಯ ಮಾಲಾಬಂಧಂ (ಮಾೞಿಾ—).
14. ಅವಗೞಿಯಮೆಂದು, ಉರವಣೆಕಾರ್ತನಂ.
15. ಬೞಿಯನೆಂದು, ವಿಧೇಯಂ (No. 34). (cf. 895).
16. ಹಾೞ್ಮೆನೆಯ ಹಾೞಿನೆಂದು (ಹೋೞಿನೆಂದು), ತುಡುಗುಣಿನಾಯಿ.
17. ಪೊಂಪುೞಿಯೆಂದು, ಪೆರ್ಚುಗೆ.
18. ಪುಚ್ಚೞಿಯೆಂದು, ಕೇಡು.
19. ಕಚ್ಚೞಿಯೆಂದು, ಒತ್ತಿ ಚಪ್ಪಟೆಯಾದುದು.
20. ಮಣ್ಮೞಿಯೆಂದು, ರೂಪೞಿದ ಸಾವು.
21. ದೞ್ದೞಿಯೆಂದು, ಸಂಕಲೆ.

22. ತೊೞ್ತೞಿಯೆಂದು, ಸೊಪ್ಪಾದುದು [ತೊೞ್ತೞಿ].
23. ಪಾೞಿಯೆಂದು, ಕ್ರಮಂ.
24. ಕೂೞನೆಂದು, ಎಗ್ಗಂ.
25. ಘೞಿಯಮೆಂದು, ಸಮುಕಟ್ಟು.
26. ಕೆೞಿವನೆಂದು, ಮುದುಕಂ [M. A. and B. ಕೆೞವಂ].
27. ಪೞಗಮೆಂದು, ಒಣಗಿದೆಲೆ.
28. ಕೞಕುೞಮೆಂದು, ಸ್ಥಾನವ್ಯಾಕುಲತೆ.
29. ಉೞಿಗನೆಂದು, ಶಕುನದ ಪಕ್ಕಿ.
30. ದೞದುೞಮೆಂದು, ಬಲ್ಸೂೞ್; (ದೞವು ೞಮೆಂದುಮುಂಟು).
31. ತಲ್ಲೞಮೆಂದು, ಭಯಂ.
32. ಗುೞಮೆಂದು [ಗೞಮೆಂದು], ಆನೆ ಕುದುರೆಗಳ ಪಕ್ಕೞಿಕೆ (M. A. ಪಕ್ಕರಕ್ಕೆ).
33. ಗೞಪನೆಂದು, ಸೊರಹುವಂ. (cf. 456). [M. B. ಸ್ವರಹಂ. M. A. ಸ್ವರಹುವಂ].
34. ಬೞಿಯಂ, ಬೞಿಕಂ, ಬೞಕ್ಕಂ, ಬೞಿಕೆ, ಬೞಿಕ್ಕೆ ಎಂಬಿವು ಪಶ್ಚಾದರ್ಥಂಗಳ್. (S. 315).
35. ಅೞ್ತಿಯೆಂದು, ಪ್ರೀತಿ; ಅದನ್ನಳ್ತಿಯೆಂದು [M. A. ಅರ್ತಿಯೆಂದು] ಪೇೞ್ವುದಬದ್ಧಂ.
36. ಅೞ್ಕರ್ತನೆಂದು, ಪ್ರೀತಿವಟ್ಟಂ. (cf. 879).
37. ಜಿಕ್ರೋೞವೆಯೆಂದು, ಜಲಯಂತ್ರಂ.
38a. ತೊೞಲ್ವುದಾಗಿ (ತೊೞಲ್ಲುದಾಗಿ ಎಂತಲೂ, ತೊೞಿವುದಾಗಿ ಎಂತಲೂ, M. A. ತೊೞವುದಾಗಿ ಎಂತಲೂ, ಪಾಠಾಂತರಂ), ತೊೞಕಲ್ (ತೊೞಕಲ್).
38b. ಉೞಿಕು (cf. 892) [ಉೞಕು], ಉೞಿವು (ಉೞವು), ಕೞಿವು (cf. 894) ಎಂಬಿವು ಭಾವವಾಚಿಗಳ್.
39. ಮೊೞಗು ಎಂದು, ವಾದ್ಯಂ. (cf. 143).
40. ಒೞ್ಕೆಂದು, ನದಿಪ್ರವಾಹಂ. (cf. 68).
41. ಪೆೞಕೆಂದು, ಜಗಳಂ.
42. ಪೊೞಕೆಂದು (ಪೊೞಪೆಂದುಂ ಪೊೞಿಪೆಂದುಂ ಪಾಠಾಂತರಂ), ಸಾಮಾನ್ಯಾಕೃತಿ.
43. ಪೞಪೆಂದು, ನರೆಗಿಕ್ಕುವ ಕರ್ಪ್ಪೂರ. [M. A. ಪೞವೆಂದು].
44. ಪೞುವೆಂದು, ಅಡವಿ.
45. ಪೞ್ಕಿತೞ್ಕಿಸಿದಂ ತಡಕಯ್ಯಂ ಮಾಡಿದನೆಂಬುದರ್ಥಂ (s. S. 19; ಪೞ್ಕಿ No. 147).
46. ಏೞೆಂದು, ಸಂಖ್ಯಾವಾಚಿ. (cf. 921).
47. ಮೞಲ್ದುದು (ಕೞಲ್ದುದು ಎಂತ ಪಾಠಾಂತರಂ), ಮೞಮೞಿಸಿತ್ತು ಎಂಬೆರಡುಂ ಕಣ್ಕದಡಿದ ಭಾವಂ. (cf. 622?). [M. A. ಕೞಲ್ದುದು, ಮೞಕೞಿಸಿತು].
48. ಪುೞ್ಗಿಯೆಂದು, ಉರ್ದು ತೊವರಿ ಹೆಸರು ಮೊದಲಾದುವನಿಕ್ಕಿ ಅಟ್ಟ ಕೂೞ್.
49. ಹೞ್ಗಿಯೆಂದು, ದೂವೆಯೊಳ್ ತಳಲಂ ಪೂೞ್ದಿ ಕ್ರಿಯೆ.
50. ತೞಲೆಂದು, ಮುತ್ತ ಕಾಯ್.
51. ತುೞಿಕಲೆಂದು, ಸೊಪ್ಪಾದುದು. [M. A. ತೞಿಕಲ್; B. ತೞಕಲ್].
52. ಅದವೞಿಲೆಂದು, ಮೞುಕಂ. [M. B. ಅದವೞಲ್; A. ಆದವೞಲ್].
53. ಸೂೞೆಂದು, ಬಾೞ್.
54. ಸೂೞಾಯ್ತನೆಂದು, ಸೂೞ್ಗಿರೆವಂ.
55. ಪಾೞೆಂದು, ಶೂನ್ಯಸ್ಥಾನಂ. (No. 16).
56. ಚಾೞೆಂದು, ರಾಹು.
57. ಪೋೞೆಂದು, ಸೀೞ್ದ ಭಾಗಂ [—ಸ್ಥಾನಂ]. (cf. 918).
58. (ಬಾೞೆಂದು, ಚಾಪಂ? cf. 917).
59. ಈ ಸೂೞೆಂದು, ವರ್ತಮಾನ ವರುಷಂ.
60. ತುಪ್ಪುೞೆಂದು, ಪಕ್ಕಿಯ ರೋಮಂ.
61. ತಿಪ್ಪುೞಿ ಎಂದು, ಪಕ್ಕಿಯ ಗರೆ.
62. ಬೆೞಲೆಂದು, ಒಂದು ಮರಂ.
63. ಪೊೞಲೆಂದು, ಮರದ ಪೊಟ್ಟೆ [ಪೋಟೆ].

64. ಬಿೞಿಲೆಂದು, ಮರದ ಜಡೆ.
65. ಬಾಸುೞೆಂದು, ಪೊಯ್ದ ಬೞಿ [M. A. ಬಳಿ].
66. ಉಂಬೞೆಯೆಂದು, ಕೊಡಗೆ.
67. ಸಾೞಿಗೆಯೆಂದು [M. A. ಜಾೞಿಗೆ], ಉಡುಗೆ.
68. ಪೊೞ್ತಡೆಯೆಂದು (cf. No. 163), ಉದಯ ಕಾಲಂ (S. 321). [M. A. and B. ಪೊೞ್ತೞೆ].
69. ಕೞಲೆಯೆಂದು, ಮುಳ್ಳುವೆರಸಿದ ಗುಜ್ಜ ಗೊಂಬು [M. A. ಗುಜುಱು–].
70. ಬಾೞ್ತೆಯೆಂದು, ಪ್ರಯೋಜನಂ. (cf. 917).
71. ಬೋೞೆಯೆಂದು, ಒಂದಂಬಿನ ಭೇದಂ.
72. ಬಿೞ್ಕೆಯೆಂದು, ಒಂದು ಮರಂ.
73. ಅೞ್ಕಮೆಯೆಂದು, ಅಱಿಮೆ [M. B. ಅರಮೆ].
74. ಉೞ್ಕೆಂದು, ಉೞ್ವೆ [ಉಳ್ವೆ] ಭಾವಂ. (cf. 905).
75. ಎೞವಿದನೆಂದು, ನೀವಿದಂ. (cf. 656). (ಎೞಿವಿದಂ).
76. ಮೞೆಯೆಂದು, ವೃಷ್ಟಿ.
77. ಕೞಿಲೆಯೆಂದು, ಬಿದಿರ ಕುಡಿ.
78. ಪೊೞಲೆಂದು, ಪುರಂ.
79. ಅೞ್ಕೆಯೆಂದು, ರೋದನಂ. (cf. 906).
80. ಸುೞಿಯೆಂದು, ಜಲಾವರ್ತಂ. (cf. 899).
81. ಕುೞಿಯೆಂದು, ಗುೞ್ತೆಡೆ. (cf. 890). [M. A. ಅಗುೞ್ದೆಡೆ].
82. ಬೆಂಬೞಿಯೆಂದು, ಪಿಂದೆ ಬರ್ಪುದು.
83. ಬೞಿವೞಿಯೆಂದು, ಕೊಟ್ಟ ವಸ್ತುವಿನ ಬೞಿಯೊಳ್ ಕುಡುವುದು [ಬೞವೞಿ].
84. ಪೞ್ತಿಯೆಂದು, ಕಾರ್ಪಾಸಂ.
85. ಅಗೞ್ತೆಯೆಂದು, ಖನನಂ. (cf. 907).
86. ಪೊಗೞ್ತೆಯೆಂದು, ಕೀರ್ತನಂ. (cf. 910).
87. ಕಿೞ್ತನೆಂದು, ನಿರ್ಮೂಲಿಸಿದಂ (cf. 904). [ಕೀೞ್ತಂ].
88. ಪೞವಿಗೆಯೆಂದು, ಕೇತನಂ. [ಪೞಯಿಗೆ].
89. ಮೞ್ತಿಯೆಂದು, ಒಂದು ಮರಂ.
90. ಗೆೞಸೆಂದು, ಗೆಡ್ಡೆ.
91. ಕುೞಮೆಂದು, ನೇಗಿಲ್ವಾಯ್ಯ ಕರ್ಬುನಂ [ಗುೞಂ].
92. ಪುೞುವೆಂದು, ಕೀಟಕಂ. [ಪುೞಂ].
93. ಪೞದೆಂದು (ಪೞವೆಂದು ಪಾಠಾಂತರಂ), ಜೀರ್ಣಂ. [ಪೞಂ].
94. ಮುೞ್ತಿಗಮೆಂದು, ಒಂದು ಮರಂ [ಮೂೞ್ತಿಗಂ].
95. ಕೞ್ತೆಯೆಂದು, ಗರ್ದಭಂ [ಖರಂ]. (see s. S. 36).
96. ಕೞ್ತಲೆಯೆಂದು ಮರುವು. (s. S. 36). [M. A. and B. ಮರ್ವು].
97. ಕಿಮುೞ್ಚಿದನೆಂದು, ಚಿಕ್ಕಣಮಾಗಿ [ಚಿಕ್ಕಣೆಯಾಗಿ] ಮಾಡಿದಂ. (cf. 218).
98. ಕಿಮುೞ್ದೞಿದನೆಂದು, ಸಣ್ಣಮಾಗಿ ತುೞಿದಂ. (Wanting). (ಕಿಮುೞ್ದರದಂ).
99. ಪೇೞ್ದನೆಂದು, ನಿರೂಪಿಸಿದಂ. (Wanting).
100. ಬಾೞುಕಮೆಂದು, ಸೀೞ್ದೆಣಗಿ ಬಾೞ್ದ ಶಾಖಂ [–ಬಾೞ್ದದು].
101. ಮೊೞಕಾಲೆಂದು, ಒಳ್ದೊಡೆಯ ಸಂದು [M. B. ಒೞ್–].
102. ಕೊಂಕುೞೆಂದು, ಕಕ್ಷಮೂಲಂ. [M. A. ಕೌಂಕುೞ್].
103. ಮೊೞನೆಂದು, ಅರತ್ನಿ.
104. ಪೆೞವನೆಂದು, ಕಾಲಿಲ್ಲದವಂ.
105. ಪೊಕ್ಕುೞೆಂದು, ನಾಭಿ.
106. ತೇೞೆಂದು, ವೃಶ್ಚಿಕಂ.
107. ಬೋೞತರಮೆಂದು, ಮುಂಡಿ.

108. ಖೞಿ್ಲ್ಲನೆ (S. 19) [ಖೞಿಲೆನೆ], ಛೞಿ್ಲ್ಲನೆ, ಘೞಿ್ಲ್ಲನೆ (S. 19), ಘುೞಿಮ್ಮನೆ [ಘುೞಿಮ್ಮನೆ], ಧೞಿಮ್ಮನೆ, ಫೞಿ್ಲ್ಲನೆ–ಇವು ಮೊದಲಾದ ಮಹಾಪ್ರಾಣಾನುಕರಣಂಗಳ್ ನಿತ್ಯ ೞಿೞಿಂಗಳ್. (cf. S. 14).

109. ಪೞಪೞನೆ, ಪೞ್ಪೞನೆಯೆಂದು, ವಿರಲಾರ್ಥಂ.

110. ಗೞಗೞನೆಯೆಂದು (s. S. 193), ಬೇಗಂ.

111. ಕೞ್ಕನೆಯೆಂದು, ಆಕಸ್ಮಿಕಂ.

112. ನೆೞಿ್ಲ್ಲನೆ (ನೆೞಿಲೆನೆ), ನೆೞ್ಕನೆಯೆ ಮುೞಿದುದು–ಇವುಂ ಅನುಕರಣಂಗಳ್.

113. ತೞತೞಗುಡಿ, ತೞ್ತೞಗುಡಿಯೆಂಬಿವು ಸುರಿವ ರಸದ್ರವ್ಯಾನುಕರಣಂಗಳ್.

114. ತೞತೞನೆ ನೇಸಮೂರ್ಡಿದುದು (s. S. 193),

115. ಕೞಕೞಿಸಿದನರ್ಕಂ,

116. ಗೋೞಿಟ್ಟಂ (cf. 330), ಗೀೞಿಟ್ಟಂ ಗೞಗೞನೆ,

117. ಗುೞುಗುೞುವೆನುತಂ ಪರಿವವೊನಲ್ ಸೊಗಯಿಸುಗುಂ–ಇವು ಮೊದಲಾದುವಲ್ಪಪ್ರಾಣಾನುಕರಣಂಗಳ್; ೞಿೞನುಂ ಕುಳನುಮಪ್ಪುವು. (see s. S. 54).

ಎರಡರ್ಥಕ್ಕೆ—

118. ಹಿೞಿದುದೆಂದು, ರಸಮಂ ಹಿಂಡುವಲ್ಲಿ ೞಿೞಂ (cf. 901); ಬಿರಿದುದೆಂಬಲ್ಲಿ ಕುಳಂ.

119. ತೞಿಯೆಂದು, ಸ್ಥೂಲದಾರುವಿನೊಳ್ ೞಿೞಂ; ಸತ್ರಾರ್ಥದೊಳ್ ಕುಳಂ. (cf. 933). ತೞಿಯ ಕೂೞಿದಿರೊಳ್ (ಕೊಳಿದರೊಳ್) ಪಣ್ತಾರವೆ (ಪಣ್ತರವೆ). [Wanting].

120. ನಾೞವಾಸಗೆಯೆಂದು, ಕಳ್ಳವಾಸಗೆ (ಕಳ್ಳಿವಾಸಗೆ; ನಾಳಂ ಸಂಸ್ಕೃತದೊಳ್ ಕ್ಷಳಂ.

121. ತೞೆಯೆಂದು, ಆತಪತ್ರದೊಳ್ ೞಿೞಂ; ತಳೆಯೆಂಬ ಕ್ರಿಯೆಯೊಳಂ ಪಶುವಿನ ತಳೆಯೊಳಂ ಕುಳಂ. (cf. 926).

122. ಕೊೞಲೆಂದು, ವೇಣುವಾದ್ಯದೊಳ್ ೞಿೞಂ; ಕೊಳಲೆಂಬ ಕ್ರಿಯೆಯೊಳ್ ಕುಳಂ. (Wanting, if not meant 947).

123. ಕೇೞಿಯೆಂದು, ಪಂಕ್ತಿಯೊಳ್ ೞಿೞಂ; ಕ್ರೀಡೆಯೊಳ್ ಕ್ಷಳಂ.

124. ಬಾೞೆಂದು, ಜೀವನಾರ್ಥದೊಳ್ ೞಿೞಂ; ನಾವಿದವಾಳ್, ಕೂರ್ವಾಳ್, ಹರಗುವ ಬಾಳ್ [ಹರಗುವಾಳ್] ಎಂಬಲ್ಲಿ ಕುಳಂ. (cf. No. 58).

125. ಎೞ್ದನೆಂದು, ನೆಗೆದನುಂ ನಿದ್ರೆ ತಿಳಿದನುಮಕ್ಕುಂ. (cf. 921); (see s. S. 36).

126. ಬೞ್ದನೆಂದು, ಜೀವಿಸಿದನುಂ ಒಕ್ಕಲಾದನುಮಕ್ಕುಂ [ಬಾೞ್ದಿಂ]. (cf. No. 124); (see s. S. 36.)

127. ಅೞ್ದನೆಂದು (cf. S. 240), ನೀರೊಳ್ ಮುಳುಗಿದನುಂ (cf. 915) ಕೆಟ್ಟನುಮಕ್ಕುಂ. (cf. 893); (see s. S. 36). [ಆೞ್ದಿಂ].

128. ತೞಲ್ದನೆಂದು, ಬಡವಾದನುಂ ಮನಮಿಕ್ಕನುಮಕ್ಕುಂ. (Whether 629?)

129. ಎೞಲ್ದನೆಂದು, ಜೋಲ್ದನುಂ ಬೞಲ್ದನುಮಕ್ಕುಂ. (cf. 620).

130. ತೊೞಲ್ದನೆಂದು, ಭ್ರಮೆಗೊಂಡನುಂ ಉಂಗರವಟ್ಟೆಗೆವಂದನುಮಕ್ಕುಂ. (cf. 618); (see s. S. 36).

131. ತುೞದನೆಂದು (ತುೞಿದಂ), ಬಡವಾದನುಂ ಅಗಲ್ದನುಮಕ್ಕುಂ. (cf. No. 153).

132. ಇೞಿದನೆಂದು, ಮೈಗುಂದಿದನುಂ ಕೆಳಗಣ್ಗೆವಂದನುಮಕ್ಕುಂ. (cf. 891).

133. ಸುೞಿದನೆಂದು, ಸಂಚಲಿಸಿದನುಂ [ಚಲಿಸಿದನುಂ] ಬೞಿಗೆವಂದನುಮಕ್ಕುಂ [M. A. ಬಟ್ಟೆಗೆ—]. (cf. 899).

134. ಅೞಿಪನೆಂದು, ಅೞಿಪುವನುಂ ಅೞಿಪಿದವನುಮಕ್ಕುಂ. (cf. 459).

135. ತುೞಿಲಸಂದನೆಂದು (ತುೞಿಲ್ಸಂದನೆಂದು), ವೀರನುಂ ಪಂಚಮನುಮಕ್ಕುಂ.

136. ತುೞಿಲೆಂದು, ಪೊಡವಡಿಕೆಯುಂ ವೀರಮುಮಕ್ಕುಂ.

137. ಬೞ್ದುಂಕಿದನೆಂದು, ಜೀವಿಸಿದನುಂ ಬಿಡಲ್ಪಟ್ಟನುಮಕ್ಕುಂ; ಪುಲಿಯ ಬಾಯ್ಯಿಂ ಬೞ್ದುಂಕಿದನೆಂಬಂತೆ. (cf. 41).

138. ದೞಿಮೆಂದು, ಚತುರಂಗಬಲಮುಂ ಸಾಮಾನ್ಯಬಲಮುಮಕ್ಕುಂ.

139. ಪೞಿಹಮೆಂದು, ಬೇಂಟೆಯ ತೆರೆಯುಂ [ಬೇಟೆಯುಂ] ವಾದ್ಯವಿಶೇಷಮುಮಕ್ಕುಂ.

140. ಅಗ್ಗೞಿಕೆಯೆಂದು, ಲಾಳವಿಂಡಿಗೆಯುಂ [ಲಾೞಿಮುಂಡಿಗೆಯುಂ] ಆವುಜದ ಮುಟ್ಟುಮಕ್ಕುಂ.

141. ಕೊತ್ತೞಿಯೆಂದು, ಕಾಗೆಯ ಮೊತ್ತಮುಂ ಬೆಸದವರ [ಬೆಸೆದವರ] ನೆರವಿಯುಮಕ್ಕುಂ.

142. ಮೂೞಿಯೆಂದು, ಕಿವಿಯಿಲ್ಲದವಳುಂ ಕರಗದ ಜೂಳಿಯುಮ್ [ಜೂೞಿಯುಂ] ಅಕ್ಕುಂ.

143. ಆೞಿಯೆಂದು, ವಂಚನೆಯುಂ ಏಕಗ್ರಾಹಿತ್ವಮುಮಕ್ಕುಂ; ಸಂಸ್ಕೃತದೊಳ್ ಸಖಿಯುಂ ಸಾಲುಂ ಬರ್ಪೆಡೆ ಅದು ಕ್ಷಳಂ.

144. ಅೞಿಯೆಂದು, ಬಳ್ಳದೞಿಯೊಳಂ ವಿಧಿಕ್ರಿಯೆಯೊಳಂ ೞಿೞಿಂ; ತುಂಬಿಯ ಪೇೞ್ವಲ್ಲಿ ಕ್ಷಳಂ. (cf. 893).

145. ಎೞಿಯೆಂದು, ನೂಲೆೞಿಯೊಳಂ ಬರಸೆೞಿಪುದೞಿೊಳಂ ೞಿೞಿಂ; ಭೂಮ್ಯರ್ಥದೊಳ್ ಕುಳಂ. (cf. 903).

146. ಗೞಿಯೆಂದು, ಕಡೆಗೋಲುಂ ಕೊಲ್ಲಟಿಗರಾಡುವುದುಮಕ್ಕುಂ.

147. ಪೞ್ಕಿಯೆಂದು, ಶಯನಮುಂ ಶಯನಸ್ಥಾನಮುಮಕ್ಕುಂ.

148. ತೊೞ್ತೆಂದು, ದಾಸನುಂ ದಾಸಿಯುಮಕ್ಕುಂ.

149. ಪೊೞಿಯೆಂದು, ಬಟ್ಟೆಯುಂ ಪೊೞಿಯುಮ್ [ತೊರೆಯುಂ] ಅಕ್ಕುಂ. (cf. 931).

150. ಕೞಿಲೆಂದು, ಮಜ್ಜಿಗೆಯುಂ ಮಂದುಗೆಯುಮಕ್ಕುಂ.

151. ನೆೞಿಲೆಂದು, ಆತಪತ್ರಾದಿಛಾಯೆಯುಂ [ಜಳದರ್ಪಣ] ಪ್ರತಿಬಿಂಬಮುಮಕ್ಕುಂ.

152. ಇಕ್ಕುೞಿಂದು, ವ್ಯಾಧಿವಿಕಾರಮುಂ ಸಂದಂಶಮುಮ್[ತಾಂಡಸಮುಂ]ಅಕ್ಕುಂ.

153. ತುೞಿದನೆಂದು, ಕಾಲೊಳ್ ಮರ್ದಿಸಿದನುಂ ಘಾಸಿ ಮಾಡಿದನುಮಕ್ಕುಂ. (cf. 900).

154. ಬೀೞಿಂದು, ಮಾಡದ ಕೆಯ್ಯುಂ ಪತನಕ್ರಿಯೆಯುಮಕ್ಕುಂ. (cf. 920).

155. ಮಲ್ಲೞಿಯೆಂದು, ಶರೀರವ್ಯಾಕುಲತೆಯುಂ ಸುತ್ತಿ ಬರ್ಪುದುಮಕ್ಕುಂ.

ಮೂಱರ್ಥಕ್ಕೆ—

156a. ನೆಗೞಿಂದು, ಪ್ರಸಿದ್ಧಿಯುಂ ಚರಿತ್ರಮುಂ ಜಲಗ್ರಹಮುಮಕ್ಕುಂ. (cf. 911); (see S. 41).

156b. ಎೞ್ದನೆಂದು, ನೆಗೆದನುಂ ನಿದ್ರೆ ತಿಳಿದನುಂ (No. 125) ದೊರೆಕೊಂಡನುಮಕ್ಕುಂ. (cf. 962).

156c. ಕೞಿಲೆಂದು, ಪಿಂತೆ (No. 150) ಪೇೞ್ದುದಲ್ಲದೆ ತನುತ್ವಮುಮಕ್ಕುಂ. (cf. 615).

157a. ನೆೞಿಲೆಂದು, ಪಿಂತೆ (No. 151) ಪೇೞ್ದುದಲ್ಲದೆ ಒಂದು ಮರಮುಮಕ್ಕುಂ.

157b. ಎೞ್ಚಿತ್ತನೆಂದು, ನಿದ್ರೆ ತಿಳಿದನುಂ ಕತ್ತನೋಸರಿಸಿದನುಂ ಮೞವೆ (ಮರವೆ) ಪಿಂಗಿದನುಮಕ್ಕುಂ. (cf. 874).

158. ತಾೞೆಂದು, ಒಂದು ಮರನುಮ್ ಅಗುೞಿಯುಂ ಸೂರಣದ ದಂಟುಮಕ್ಕುಂ. (cf. 939).

159. ಕೞಿದನೆಂದು, ಸತ್ತನುಂ ದೂರಂಬೋದನುಂ ಕಯ್ಮೀೞಿದನುಮಕ್ಕುಂ. (cf. 894).

160. ಮೊೞಗೆಂದು (cf. No. 39), ಮುಗಿಲ ದನಿಯುಂ ಒಂದು ಮರದ ಪೆಸಱುಂ ವಾದನವಿಧಿಯುಮಕ್ಕುಂ. (cf. 143).

161. ಬೞ್ದಿದೆಂದು [ಬೀೞ್ದಿದು], ಪಳಸಿದುದುಂ ಸತ್ತುದುಂ ಕಯ್ಜೋಲ್ದುದುಮಕ್ಕುಂ. (cf. 920).

162. ಕೊೞೆತುದೆಂದು, ಜೀರ್ಣಿಸಿದುದುಂ ಮಲಮೇಱಿದುದುಂ [M. A.— ಮೞಿದುದುಂ; B.—ಮಿಾಱಿದುದುಂ] (ಮಲಮೞಿದುದುಂ) ಮನಮಿಕ್ಕನುಮಕ್ಕುಂ. (cf. 902).

163. ಪೊೞ್ತೆಂದು (cf. No. 68), ಸಾಮಾನ್ಯಕಾಲಮುಂ ಪ್ರಸವಕಾಲಮುಂ ನೇಸಱುಮಕ್ಕುಂ.

164. ಎೞ್ತೆಂದು, ಗೂಱಿಯುಂ [ಗೂಳಿಯುಂ] ಅನಡುಹುಂ [ಅನಡ್ವಮುಂ] ಹೊರಸಿನ ನೆಯ್ಗೆಯ ಊಕೆಯ (ಉಂಕೆಯ) ನುಲಿಯುಮಕ್ಕುಂ.

165. ಸುೞಿಯೆಂದು, ಕೆಲಸಗಳ್ಳನುಂ [–ಗಳನುಂ] ಸಸಿಯ ಸುೞಿಯುಂ ಸುೞಿವ ಭಾವಮುಮಕ್ಕುಂ. (cf. 899). [ಸೂಳಿಯೆಂದೀಶ್ವರನಾ ಪೇೞ್ದಿಲ್ಲಿ ಕ್ಷಳಂ.

166. ಅೞಿದನೆಂದು, ಸತ್ತನುಂ ಕೆಟ್ಟನುಂ [ಸತ್ತವನುಂ ಕೆಟ್ಟವನುಂ] ಕೆಡಿಸಿದವನುಮಕ್ಕುಂ (cf. No. 134). (cf. 893).

167. ಬೋೞಮೆಂದು, ಮಿೞ್ತುವುಂ [ಮೊಳ್ತುವುಂ] ಮುಂಡಮುಂ ಮುಂಡಮೆಂದೊಂದೌಷಧಿಯುಮಕ್ಕುಂ.

ನಾಲ್ಕರ್ಥಕ್ಕೆ—

168. ಪೞಿಯೆಂದು, ವಸ್ತ್ರವಿಶೇಷಮುಂ ದೂಷಣಮುಂ ನಾಯ್ಯ ಸೋವುವುದುಂ ಲೋಹದ ಘಟ್ಟಿಯುಮಕ್ಕುಂ. (cf. 898).

169. ಉೞಿದುದೆಂದು, ಬಿಟ್ಟುದುಂ [M. A. ಬಿೞ್ದಿದುಂ] ಜೀವಿಸಿದುದುಂ ಲಾಭಮಾದುದುಮಕ್ಕುಂ, ಇವಱೊಳ್ ಱೞಂ; ಅಡಂಗಿದುದಱೊಳಂ ಬಡಿಗೆಯ (ಮತ್ತು) ಕಳ್ಳನ (ಮತ್ತು) ಬೇಂಟೆಯ ಉಳಿಯೊಳಂ ಕುಳಂ; ಸ್ಥಾನವ್ಯಕ್ತಿಯಂ ಪೇೞ್ವೆಡೆ ಉೞಿ; ಪೆೞಿವುೞಿಯೆಂಬವ್ಯಯಂ ಱೞಂ. (cf. 892).

170. ಕೀೞೆಂದು, ದೊಱೆಯಿಲ್ಲದ [M. A. ದೊರೆ–] ಭಂಗಾರಮುಂ ತುರಗಮುಖದ ಲೋಹಮುಂ ಕ್ಷೀಣಕುಲನುಂ ಕೆಳಗುಮಕ್ಕುಂ.

171. ಸುೞಿಯೆಂದು, ಕೆಲಸಗಳ್ಳಂ ಮೊದಲಾದುದಲ್ಲದೆ (No. 165) ಜಲಾವರ್ತಮುಮಕ್ಕುಂ.

ಐದರ್ಥಕ್ಕೆ—

172. ಬೞಿಯೆಂದು, ಬಟ್ಟೆಯುಂ ವಂಶಮುಂ ಕಱೆವನುಂ [M. A. and B. ಕರೆವನುಂ] ಲೇಪಿಸುವುದುಂ ಪಿಂಗಲಿಯ ಬೞಿಗೊರಲುಮ್ [ಅಱಿಗೊರಲುಂ] ಅಕ್ಕುಂ, (cf. 895); ಮತ್ತೆಂಬ ಪೂರಕದ ಬೞಿ (ಎಂಬ) ಅವ್ಯಯಂ ಱೞಂ, (cf. No. 34).

ಇವು ಪ್ರಯೋಗದೃಷ್ಟಂಗಳಿವಱೊಳ್ ಸಂಶಯಮಿಲ್ಲ.

## ಸೂತ್ರಂ.

In Alliteration double consonants with ರ (ṟ) harmonize with ಱ when forming a part of a double consonant.

ಪಿರಿಯರ್ಸಲಿಪರ್ದಡ್ಡ
ಕ್ಕರದ ಱಿಱಿಕ್ಕೈದೆ ರೇಫೆವೆರಸಿದ ದಡ್ಡ |
ಕ್ಕರಮುಂ ಱಿಱಿನಾಗದನು
ಚ್ಚರಿಸಲ್ಕಾಗಿರ್ದ ತೆಱದಿನಂತದು ಶುದ್ಧಂ || 24 ||

## ಪದಚ್ಛೇದಂ.

ಪಿರಿಯರ್ ಸಲಿಪರ್ ದಡ್ಡಕ್ಕರದ ಱಿಱಿಕ್ಕೆ ಐದೆ ರೇಫೆವೆರಸಿದ ದಡ್ಡಕ್ಕರಮಂ, ಱಿಱಿಂ ಆಗಿ; ಅದಂ ಉಚ್ಚರಿಸಲ್ಕೆ ಆಗಿರ್ದ ತೆಱದಿಂ ಅಂತು ಅದು ಶುದ್ಧಂ.

## ಅನ್ವಯಂ.

ಪಿರಿಯರ್ ದಡ್ಡಕ್ಕರದ ಱಿಱಿಕ್ಕೆ ಐದೆ ರೇಫೆವೆರಸಿದ ದಡ್ಡಕ್ಕರಮಂ ಸಲಿಪರ್, ಱಿಱಿನಾಗಿ; ಅದಂ ಉಚ್ಚರಿಸಲ್ಕೆ ಆಗಿರ್ದ ತೆಱದಿಂ ಅಂತು ಅದು ಶುದ್ಧಂ.

## ಟೀಕು.

ಪಿರಿಯರ್=ಶ್ರೇಷ್ಠರಾದ ವಿದ್ವಾಂಸರ್; ದಡ್ಡಕ್ಕರದ=ಒತ್ತಿನಕ್ಷರದ; ಱಿಱಿಕ್ಕೆ=ಱಿಱಿಪ್ರಾಸಿಗೆ; ಎಯ್ದೆ (ಐದೆ)=ಚನ್ನಾಗಿ; ರೇಫೆವೆರಸಿದ ದಡ್ಡಕ್ಕರಮಂ=ರೇಫೆಯೊಡನೆ ಕೂಡಿದ ದ್ವಿತ್ವಾಕ್ಷರಮಂ; ಸಲಿಪರ್=ಪ್ರಾಸಿಂಗೆ ಸಲಿಸುವರ್; ಱಿಱಿನಾಗಿ=ಱಿಱಿಪ್ರಾಸವಾಗಿ; ಅದಂ=ಆ ರೇಫೆವೆರಸಿದ ದ್ವಿತ್ವಾಕ್ಷರಮಂ; ಉಚ್ಚರಿಸಲ್ಕೆ=ಓದುವುದರ್ಕೆ; ಆಗಿರ್ದ ತೆಱದಿಂ=ಸಲುವಳಿಯಾಗಿರ್ದ ರೀತಿಯಿಂದೆ; ಅಂತು=ಹಾಗೆ; ಅದು=ಅದು ತಾಂ; ಶುದ್ಧಂ=ಶುದ್ಧವಪ್ಪುದು.

## ವೃತ್ತಿ.

ದಡ್ಡಕ್ಕರದ ಱಿಱಿಕ್ಕೆ ಪ್ರತಿಯಾಗಿ ರೇಫೆವೆರಸಿದ ದಡ್ಡಕ್ಕರಮುಂ ಪ್ರಾಸಕ್ಕೆ ಪಿರಿಯರ್ ಪೇೞ್ದ ಪ್ರಯೋಗವೊಳವು; ಆ ತೆಱದಿನುಚ್ಚರಿಸಲ್ಕಾಗಿರ್ದ ಮಾಱ್ಕೆಯಿಂ (ಎಂದೊಡೆ ಬರೆದಿರ್ಪ) ನಿಸರ್ಗದಿನದು ಶುದ್ಧಂ.

## ಪ್ರಯೋಗಂ.

ಒಱ್ದುದು ಬಳ್ಳವಾಡಿ ನೆಱೆ ನಂ
ಬಿರ್ದ್ದುದಾರುಹತಂ ಜಿನೇಂದ್ರನಂ
ತಿರ್ದ್ದ ಮಹಾನುಭಾವ[1] ||
ಚುಱ್ಚಿದ ವೋಲ್ ಬಿಸಿಯೊಳುರೆ [M. A. ಬಿಸಿಲೊಳ್‌ಕೆ]

1) This is also the reading of M. A.; M. B. ಬಲ್ಲವಾಡಿ—ಹತ್ತಂ.—(ಬಳವಾಡಿ, ಬಲ್ಲವಾಡಿ ಎಂತ ಪಾಠಾಂತರಂಗಳ್). The metre and also the meaning of these 3 lines are not clear.

ಮುೞ್ಚಿದ ತಳಿರಂತೆ ನೊಂದು, ಗುಣನಂದಿ[1] || ಕಂದಭಾಗಂ ||
ಒರ್ಕ್ಕುಡಿತೆನೀರ್ಗೆ ಪೞಿ ಪ[2]
ೞ್ತೆರ್ಕ್ಕೆಯ ಪಂಣೆಲೆಯ ಮುೞಿಗೆ ದೇಸಿಗರಂ ದೇ |
ವರ್ಕ್ಕಳ್ಗೊಡೆಯರ ಮಾೞ್ಪಿ
ನಿರ್ೞ್ಕಿರಿಸದೆ ನಿಮ್ಮ ದೊರೆಗೆಬೊಳೆಯರೊಳರೆ || ಕಂದಂ || M. B. ನೀೞ್ಕಿ—.

## ಸೂತ್ರಂ.

Words in which ಳ is preferred to ೞ.

ಝುಳಕಂ ಝುಳಿಪಿಸಿದಂ ಜೊಂ
ಗುಳಿ ಬೊಂಬುಳಿಯಾಳಮಾಳಮಂತೆ ಶಮಾಳಂ |
ವಳಿಗೆ ನೆಗೞ್ದೊಂದುಳಿ ಜಂ
ಗುಳಿ ಪುತ್ತಳಿ ಗೋಳಿ ಪೇಳಿ ಱೞಸಂದೇಹಂ || 25 ||

## ಪದಚ್ಛೇದಂ.

ಝುಳಕಂ ಝುಳಿಪಿಸಿದಂ ಜೊಂಗುಳಿ ಬೊಂಬುಳಿ ಆಳಮಾಳಂ, ಅಂತೆ ಶಮಾಳಂ ವಳಿಗೆ ನೆಗೞ್ದ ಒಂದುಳಿ ಜಂಗುಳಿ ಪುತ್ತಳಿ ಗೋಳಿ ಪೇಳಿ ಱೞಸಂದೇಹಂ.

## ಯಥಾನ್ವಯಂ.

## ಟೀಕು.

ಝುಳಕಂ=ಝುಳಕಮೆಂಬ ಶಬ್ದಂ; ಝುಳಿಪಿಸಿದಂ=ಝುಳಿಪಿಸಿದನೆಂಬ ಶಬ್ದಂ; ಜೊಂಗುಳಿ=ಜೊಂಗುಳಿಯೆಂಬ ಶಬ್ದಂ; ಬೊಂಬುಳಿ=ಬೊಂಬುಳಿಯೆಂಬ ಶಬ್ದಂ; ಆಳಮಾಳಂ=ಆಳಮಾಳಮೆಂಬ ಶಬ್ದಂ; ಅಂತೆ=ಹಾಗೆ; ಶಮಾಳಂ=ಶಮಾಳಮೆಂಬ ಶಬ್ದಂ; ವಳಿಗೆ=ವಳಿಗೆಯೆಂಬ ಶಬ್ದಂ; ನೆಗೞ್ದ=ಪ್ರಸಿದ್ಧಿವಡೆದ; ಒಂದುಳಿ=ಒಂದುಳಿಯೆಂಬ ಶಬ್ದಂ; ಜಂಗುಳಿ=ಜಂಗುಳಿಯೆಂಬ ಶಬ್ದಂ; ಪುತ್ತಳಿ=ಪುತ್ತಳಿಯೆಂಬ ಶಬ್ದಂ; ಗೋಳಿ=ಗೋಳಿಯೆಂಬ ಶಬ್ದಂ; ಪೇಳಿ=ಪೇಳಿಯೆಂಬ ಶಬ್ದಂ; ಱೞಸಂದೇಹಂ=ಱೞಿಕ್ಕೆ ಸಂದೇಹಂ, ಕುಳವೆ ಅಪ್ಪುವೆಂಬುದರ್ಥಂ.

## ವೃತ್ತಿ.

ಈ ಪೇೞ್ದ ಶಬ್ದಂಗಳ್ ಱೞಿಕ್ಕೆ ಸಂದೇಹಂಗಳಿವಂ ಪ್ರಯೋಗಮುಂ ಕಂಡು ಪೇೞ್ವುದು.

---

1) The metre of this is, as it appears: —∪∪ | —∪∪ | ∪∪∪∪ | —∪∪ | ∪∪— | ∪—∪ | ∪∪— | ∪ || M. A. ನೊಂದಂ; B. ನೊಂದಾ. 2) ಪರಿಪ—ಎಂತ ಪಾಠಾಂತರಂ. See s. S. 261. M. A. and B. ಪರಿಪ—.

ಸೂತ್ರಂ.

Canarese words in which ೞ is required.

ಇೞಿದಳಿಯನೇೞಿದಂ ಸೂ
ಕುೞಿಯೊೞ್ಕುೞಿ ಕಳಱು ಪೆಳಱು ಮಱುಕುೞಿಯೞಿಯಂ ।
ಕುೞಿಯಂ ಮಾೞಿಗೆ ಜಾೞಿಗೆ
ತೞಿಗೆಯೊೞೞ್ಬಳಸು ಬಳಸಿಗಂ ಮೊೞೆ ತಾಳಂ ॥ 26 ॥

ಇೞಿದೆಂದುಕ್ಷಿಣಂ.

ಆೞಿಸಿದಂ ಪೇೞಿಸಿದಂ
ಕೇೞಂ ಜೂದಾೞಿಯೞಿಲೆ ಕಳವಳಮಾ ಮೆ ।
ಯ್ಮೇೞಂ ಮಾೞಂ ತಾೞಿಗೆ
ಯೀೞಿಗೆಯಿಱುಕುೞಿಯಿವಾದಿಯಾಗಱಿ ಕುೞನಂ ॥ 27 ॥

ಪದಚ್ಛೇದಂ.

ಇೞಿದಳಿಯಂ, ಏೞಿದಂ, ಸೂಕುೞಿ, ಒಕುೞಿ, ಕಳಱು, ಪೆಳಱು, ಮಱುಕುೞಿ, ಅೞಿಯಂ, ಕುೞಿಯಂ, ಮಾೞಿಗೆ, ಜಾೞಿಗೆ, ತೞಿಗೆಯೊೞಿರ್, ಬಳಸು, ಬಳಸಿಗಂ, ಮೊೞೆ, ತಾಳಂ, ಆೞಿಸಿದಂ, ಪೇೞಿಸಿದಂ (but see ಪೇೞ್ದಿಂ sub. S. 23), ಕೇೞಂ, ಜೂದಾೞಿ, ಅೞಿಲೆ, ಕಳವಳಂ, ಆ ಮೆಯ್ಮೇೞಂ, ಮಾೞಂ, ತಾೞಿಗೆ, ಈೞಿಗೆ, ಇಱುಕುೞಿ, ಇವು ಆದಿ ಆಗಿ ಅಱಿ ಕುೞನಂ!

ಅನ್ವಯಂ.

ಇವಾದಿಯಾಗಿ ಕುೞನಂ ಅಱಿ! ಉೞಿದದು ಯಥಾನ್ವಯಂ.

ಟೀಕು.

ಇೞಿದಳಿಯಂ=ಇೞಿದಳಿಯನೆಂದು; ಏೞಿದಂ=ಏೞಿದನೆಂದು; ಸೂಕುೞಿ=ಸೂಕುೞಿಯೆಂದು; ಒಕುೞಿ=ಒಕುೞಿಯೆಂದು; ಕಳಱು=ಕಳಱೆಂದು; ಪೆಳಱು=ಪೆಳಱೆಂದು; ಮಱುಕುೞಿ=ಮಱುಕುೞಿಯೆಂದು; ಅೞಿಯಂ=ಅೞಿಯನೆಂದು; ಕುೞಿಯಂ=ಕುೞಿಯನೆಂದು; ಮಾೞಿಗೆ=ಮಾೞಿಗೆಯೆಂದು; ಜಾೞಿಗೆ=ಜಾೞಿಗೆಯೆಂದು; ತೞಿಗೆಯೊೞಿರ್=ತೞಿಗೆಯೊೞಿರೆಂದು; ಬಳಸು=ಬಳಸೆಂದು; ಬಳಸಿಗಂ=ಬಳಸಿಗನೆಂದು; ಮೊೞೆ=ಮೊೞೆಯೆಂದು; ತಾಳಂ=ತಾಳಮೆಂದು; ಆೞಿಸಿದಂ=ಆೞಿಸಿದನೆಂದು; ಪೇೞಿಸಿದಂ=ಪೇೞಿಸಿದನೆಂದು; ಕೇೞಂ=ಕೇೞನೆಂದು; ಜೂದಾೞಿ=ಜೂದಾೞಿಯೆಂದು; ಅೞಿಲೆ=ಅೞಿಲೆಯೆಂದು; ಕಳವಳಂ=ಕಳವಳಮೆಂದು; ಆ ಮೆಯ್ಮೇೞಂ=ಆ ಮೆಯ್ಮೇೞಮೆಂದು; ಮಾೞಂ=ಮಾೞಮೆಂದು; ತಾೞಿಗೆ=ತಾೞಿಗೆಯೆಂದು; ಈೞಿಗೆ=ಈೞಿಗೆಯೆಂದು; ಇಱುಕುೞಿ=ಇಱುಕುೞಿಯೆಂದು; ಇವಾದಿಯಾಗಿ=ಇವು ಮೊದಲಾಗಿ; ಕುೞನಂ=ಕುೞಕಾರವಂ; ಅಱಿ=ತಿೞಿ.

ವೃತ್ತಿ.

ಈ ಪೇೞ್ದ ಶಬ್ದಂಗಳ್ ಕುೞಂಗಳ್.

ಸೂತ್ರಂ.

Canarese words in which ಲ is preferred to ಳ.

ಬೆರಲೆರಲೊರಲ್ಕೊರಲ್ಸರ
ಲರಲ್ಪರಲ್ಮರಲುಮಂತೆ ನರಲುಂ ಮುಂಗೈ |
ಯ್ಸರಲುಂ ಲಾಂತಮಿವಂ ಗ್ರಾ
ಮ್ಯರಱಿಯದುಚ್ಚರಿಸುವರ್ ಕುಳಾಂತಭ್ರಮೆಯಿಂ || 28 ||

ಪದಚ್ಛೇದಂ.

ಬೆರಲ್ ಎರಲ್ ಒರಲ್ ಕೊರಲ್ ಸರಲ್ ಅರಲ್ ಪರಲ್ ಮರಲುಂ, ಅಂತೆ ನರಲುಂ ಮುಂಗೈಯ್ಸರಲುಂ ಲಾಂತಂ; ಇವಂ ಗ್ರಾಮ್ಯರ್, ಅಱಿಯದೆ, ಉಚ್ಚರಿಸುವರ್ ಕುಳಾಂತಭ್ರಮೆಯಿಂ.

ಅನ್ವಯಂ.

ಇವಂ ಗ್ರಾಮ್ಯರ್, ಅಱಿಯದೆ, ಕುಳಾಂತಭ್ರಮೆಯಿಂ ಉಚ್ಚರಿಸುವರ್.

ಟೀಕು.

ಬೆರಲ್=ಬೆರಲೆಂಬ ಶಬ್ದಂ; ಎರಲ್=ಎರಲೆಂಬ ಶಬ್ದಂ; ಒರಲ್=ಒರಲೆಂಬ ಶಬ್ದಂ; ಕೊರಲ್=ಕೊರಲೆಂಬ ಶಬ್ದಂ; ಸರಲ್=ಸರಲೆಂಬ ಶಬ್ದಂ; ಅರಲ್=ಅರಲೆಂಬ ಶಬ್ದಂ; ಪರಲ್=ಪರಲೆಂಬ ಶಬ್ದಂ; ಮರಲುಂ=ಮರಲೆಂಬ ಶಬ್ದಮುಂ; ಅಂತೆ=ಹಾಂಗೆ; ನರಲುಂ=ನರಲೆಂಬ ಶಬ್ದಮುಂ; ಮುಂಗೈಯ್ಸರಲುಂ=ಮುಂಗೈಯ್ಸರಲೆಂಬ ಶಬ್ದಮುಂ; ಲಾಂತಂ=ಲಕಾರಾಂತಂ; ಇವಂ=ಈ ಲಕಾರಾಂತಶಬ್ದಂಗಳಂ; ಗ್ರಾಮ್ಯರ್=ಮೂಢರ್; ಅಱಿಯದೆ=ತಿಳಿಯದೆ; ಕುಳಾಂತಭ್ರಮೆಯಿಂ=ಕುಳಾಂತಭ್ರಮೆಯಿಂದೆ; ಉಚ್ಚರಿಸುವರ್=ಓದುವರ್.

ವೃತ್ತಿ.

ಬೆರಲ್ ಮೊದಲಾದ ಈ ಶಬ್ದಂಗಳ್ ನಿತ್ಯಮಾಗಿ ಲಾಂತಂಗಳ್;[1] ಇವಂ ಬೆರಳು ಕೊರಳೆಂಬಂತೆ ಕುಳನಾಗುಚ್ಚರಿಸ ಬಾರದು.

ಸೂತ್ರಂ.

Transposition and interchange of ಲ and ರ (cf. S. 282), and change of ರ (ಲ) into ಱ in some Canarese words.

ಮರಲರಲೆರಲೆಂಬಿವಱಂ
ತರಾಳರೇಫಕ್ಕೆ ಲತ್ವಮುಂ ದೊರೆಕೊಳ್ಗುಂ |
ಪಿರಿದುಂ ಮಲರಲರೆಲರೆಂ
ದೊರೆವುದು ಕೃತಿಯೊಳ್ವಿಕಲ್ಪವಿಧಿಯಿಂದಮಿವಂ || 29 ||

ಪದಚ್ಛೇದಂ.

ಮರಲ್ ಅರಲ್ ಎರಲ್ ಎಂಬಿವಱ ಅಂತರಾಳರೇಫಕ್ಕೆ ಲತ್ವಮುಂ ದೊರೆಕೊಳ್ಗುಂ; ಪಿರಿದುಂ, ಮಲರ್ ಅಲರ್ ಎಲರ್ ಎಂದು, ಒರೆವುದು ಕೃತಿಯೊಳ್ ವಿಕಲ್ಪವಿಧಿಯಿಂದಂ ಇವಂ.

1) Confer also the Tamiḻ விரல், finger; குரல், throat; பரல், stone, kernel, etc.

### ಅನ್ವಯಂ.

ಮರಲ್ ಅರಲ್ ಎರಲ್ ಎಂಬಿವಱ ಅಂತರಾಳರೇಫಕ್ಕೆ ಲತ್ವಮುಂ ದೊರೆಕೊಳ್ಗುಂ; ಪಿರಿದುಂ ಕೃತಿಯೊಳ್ ಇವಂ, ಮಲರ್ ಅಲರ್ ಎಲರ್ ಎಂದು, ವಿಕಲ್ಪವಿಧಿಯಿಂದಂ ಒರೆವುದು.

### ಟೀಕು.

ಮರಲ್=ಮರಲೆಂದು; ಅರಲ್=ಅರಲೆಂದು; ಎರಲ್=ಎರಲೆಂದು; ಎಂಬಿವಱ=ಎಂಬೀ ಮೂಱು ಶಬ್ದಂಗಳ; ಅಂತರಾಳ=ನಡುವಣ; ರೇಫಕ್ಕೆ=ರೇಫೆಗೆ; ಲತ್ವಮುಂ=ಲಕಾರವುಂ; ದೊರೆಕೊಳ್ಗುಂ=ಪ್ರಾಪ್ತಿಸುವದು, ಉಂ ಎಂಬ ಸಮುಚ್ಚಯದಿಂದೆ ಅಂತ್ಯದ ಲತ್ವಕ್ಕೆ ರೇಫೆಯುಂ ದೊರೆಕೊಳ್ವದು; ಪಿರಿದುಂ=ಬಹುಳವಾಗಿಯುಂ; ಕೃತಿಯೊಳ್=ಕಾವ್ಯದಲ್ಲಿ; ಇವಂ=ಈ ಮೂಱು ಶಬ್ದಂಗಳಂ; ಮಲರ್=ಮಲರೆಂದು; ಅಲರ್=ಅಲರೆಂದು; ಎಲರ್=ಎಲರೆಂದು; ವಿಕಲ್ಪವಿಧಿಯಿಂದಂ=ವಿಕಲ್ಪವಿಧಾನದಿಂದಂ; ಒರೆವುದು=ಪೇಳ್ವದು.

### ವಿಚಾರಂ.

ವಿಕಲ್ಪವೆಂದೊಡೆ ಎರಡು ತೆಱನುಂಟೆಂಬರ್ಥಂ, ಪಿರಿದುವೆಂಬ ಬಹುಳಗ್ರಹಣದಿಂ ಮರಲೆಂಬುದಱ ರೇಫೆಗೆ ಣತ್ವಮುಮಾಗಿ, ಮಣಲೆಂದುಮುಂಟು.

### ವೃತ್ತಿ.

ಮರಲ್ ಅರಲ್ ಎರಲ್ ಎಂಬಿವಱ ಮಧ್ಯರೇಫೆಗೆ ಲತ್ವಮುಂ ಸಮುಚ್ಚಯವಶದಿಂದಂತ್ಯಲತ್ವಕ್ಕೆ ರೇಫಮುಮಾಗಿ, ಮಲರ್ ಅಲರ್ ಎಲರ್ ಎಂದು, ವಿಕಲ್ಪದಿನಕ್ಕುಂ; ಪಿರಿದೆಂಬುದಱಿಂ ಮರಲೆಂಬುದಱ ರೇಫೆಗೆ ಣತ್ವಮುಮಾಗಿ, ಮಣಲೆಂದುಮುಂಟು.

ಇದು ಱ ೞ ಕುಳ ಲಂಗಳ ಸಮಾಪ್ತಿ.

### 5. Words construed by the letters, and peculiarities of some letters.

### ಸೂತ್ರಂ.

The 8 places where (the sounds of) the letters originate, are enumerated.

ಕೊರಲುಂ ಜಿಹ್ವಾಮೂಲಮು
ಮುರಮುಂ ತಾಲುಗೆಯುಮೋಷ್ಠಮುಂ ನಾಸಿಕೆಯುಂ |
ಶಿರಮುಂ ದಂತಮುಮೆಂದ
ಕ್ಕರಮುದಯಿಪ ತಾಣಮಾದುವೀ ಪೇೞ್ದೆಂಟುಂ || 30 ||

### ಪದಚ್ಛೇದಂ.

ಕೊರಲುಂ ಜಿಹ್ವಾಮೂಲಮುಂ ಉರಮುಂ ತಾಲುಗೆಯುಂ ಓಷ್ಠಮುಂ ನಾಸಿಕೆಯುಂ ಶಿರಮುಂ ದಂತಮುಂ ಎಂದು, ಅಕ್ಕರಂ ಉದಯಿಪ ತಾಣಂ ಆದುವು ಈ ಪೇೞ್ದೆಂಟುಂ.

### ಅನ್ವಯಂ.

ಈ ಪೇೞ್ದೆಂಟುಂ ಅಕ್ಕರಂ ಉದಯಿಪ ತಾಣಂ ಆದುವು ಎಂಬುದನ್ವಯಂ.

### ಟೀಕು.

ಕೊರಲುಂ=ಕಂಠಮುಂ; ಜಿಹ್ವಾಮೂಲಮುಂ=ನಾಲಿಗೆಯ ಬುಡನುಂ; ಉರಮುಂ=ಎರ್ದೆಯುಂ; ತಾಲುಗೆಯುಂ=ಗಲ್ಲಮುಂ; ಓಷ್ಠಮುಂ=ತುಟಿಯುಂ; ನಾಸಿಕೆಯುಂ=ನಾಸಿಕೆಯುಂ; ಶಿರಮುಂ=ಮಸ್ತಕಮುಂ; ದಂತಮುಂ=ಪಲ್ಗಳುಂ; ಎಂದು=ಹೀಗೆಂದು; ಈ ಪೇೞ್ದೆಂಟುಂ=ಈ ಪೇಳ್ದೆಂಟು ತಾಣಂಗಳುಂ; ಅಕ್ಕರಂ=ಅಕ್ಷರಂಗಳ್; ಉದಯಿಪ ತಾಣಂ=ಹುಟ್ಟುವ ಸ್ಥಾನಂಗಳ್; ಆದುವು=ಸಲುವಳಿ ಆದುವು.

### ವೃತ್ತಿ.

ಈ ಪೇೞ್ದೆಂಟಱೊಳ್ ಅಕ್ಕರಂಗಳ್ ಪುಟ್ಟುಗುಂ; ಅವಱೊಳೇಕಸ್ಥಾನಿಗಳನ ಱಿದು, ವರ್ಣಾವೃತ್ತಿಯಂ ಮಾೞ್ಪುದು.

### ಸೂತ್ರಂ.

All letters divided into 5 kinds viz. vowels, classified letters, unclassified letters, dependent letters, letters peculiar to Canarese (ದೇಶೀಯಂಗಳ್).

ಕವಿಗಳ್ಸ್ವರದಿಂ ವರ್ಗದಿ
ನವರ್ಗದಿಂ ಯೋಗವಾಹದಿಂ ದೇಶಿಯೊಳು |
ದ್ಭವಮಪ್ಪ ವರ್ಣದಿಂ ಪಂ
ಚವಿಧಂ ತಾನೆಂದು ತಿಳಿಪುವರ್ಶುದ್ಧಗೆಯಂ || 31 ||

### ಪದಚ್ಛೇದಂ.

ಕವಿಗಳ್ ಸ್ವರದಿಂ ವರ್ಗದಿಂ ಅವರ್ಗದಿಂ ಯೋಗವಾಹದಿಂ ದೇಶಿಯೊಳ್ ಉದ್ಭವಂ ಅಪ್ಪ ವರ್ಣದಿಂ ಪಂಚವಿಧಂ ತಾಂ ಎಂದು ತಿಳಿಪುವರ್ ಶುದ್ಧಗೆಯಂ.

### ಅನ್ವಯಂ.

ಕವಿಗಳ್ ತಾಂ, ಸ್ವರದಿಂ ವರ್ಗದಿಂ ಅವರ್ಗದಿಂ ಯೋಗವಾಹದಿಂ ದೇಶಿಯೊಳ್ ಉದ್ಭವಂ ಅಪ್ಪ ವರ್ಣದಿಂ ಪಂಚವಿಧಂ ಎಂದು, ಶುದ್ಧಗೆಯಂ ತಿಳಿಪುವರ್.

### ಟೀಕು.

ಕವಿಗಳ್=ವಿದ್ವಾಂಸರ್; ತಾಂ=ತಾವು; ಸ್ವರದಿಂ=(ಅ, ಆ ಇತ್ಯಾದಿ) ಸ್ವರಾಕ್ಷರಂಗಳಿಂದೆ; ವರ್ಗದಿಂ=(ಕ, ಖ ಇತ್ಯಾದಿ) ವರ್ಗಾಕ್ಷರಂಗಳಿಂದೆ; ಅವರ್ಗದಿಂ=(ಯ, ರ ಇತ್ಯಾದಿ) ಅವರ್ಗಾಕ್ಷರಂಗಳಿಂದೆ; ಯೋಗವಾಹದಿಂ=(ಂ, ಃ ಇತ್ಯಾದಿ) ಯೋಗವಾಹಾಕ್ಷರಂಗಳಿಂದೆ; ದೇಶಿಯೊಳ್=ಕನ್ನಡದ ದೇಶೀಯಲ್ಲಿ; ಉದ್ಭವಮಪ್ಪ ವರ್ಣದಿಂ=ಹುಟ್ಟಿದ (ಎ, ಒ ಇತ್ಯಾದಿ) ಅಕ್ಷರಂಗಳಿಂದೆ; ಪಂಚವಿಧಂ=ಐದು ಪ್ರಕಾರವೆಂದು; ಶುದ್ಧಗೆಯಂ=ಶುದ್ಧಾಕ್ಷರಂಗಳಂ; ತಿಳಿಪುವರ್=ತಿಳಿಸುವರ್.

ವೃತ್ತಿ.

ಸ್ವರದಿಂ ವರ್ಗದಿಂ ಅವರ್ಗದಿಂ ಯೋಗವಾಹದಿಂ ದೇಶೀಯಂಗಳಿಂ, ಇಂತು, ಶುದ್ಧಾಕ್ಷರಂಗಳ್ ಕನ್ನಡದೊಳ್ ಪಂಚವಿಧಮೆಂದು, ಕವಿಗಳ್ಬಾಲಶಿಕ್ಷೆಯಂ ಮಾಳ್ಪರ್.

ಸೂತ್ರಂ.

There are 14 vowels, 25 classified letters, 9 unclassified ones, and 4 dependent letters (cf. S. 17) in the Sanskrt-Canarese Alphabet, i. e. altogether 52.

ತರದಿಂದಂ ಪದಿನಾಲ್ಕುಂ
ಸ್ವರಮಿರ್ಪತ್ತೈದು ವರ್ಣಮವು ವರ್ಗಂ ತ |
ತ್ಸ್ವರದೊಂಬತ್ತುಮವರ್ಗಂ
ಪರಿಭಾವಿಸೆ ಯೋಗವಾಹಮವು ನಾಲ್ಕೆ ವಲಂ || 32 ||

ಪದಚ್ಛೇದಂ.

ತರದಿಂದಂ ಪದಿನಾಲ್ಕುಂ ಸ್ವರಂ; ಇರ್ಪತ್ತೈದು ವರ್ಣಂ, ಅವು ವರ್ಗಂ; ತತ್ಸ್ವರದ ಒಂಬತ್ತುಂ ಅವರ್ಗಂ; ಪರಿಭಾವಿಸೆ, ಯೋಗವಾಹಂ ಅವು ನಾಲ್ಕೆ, ವಲಂ!

ಯಥಾನ್ವಯಂ.

ಟೀಕು.

ತರದಿಂದಂ=ಕ್ರಮದಿಂದಂ; ಪದಿನಾಲ್ಕುಂ=ಹದಿನಾಲ್ಕಕ್ಷರಂಗಳುಂ; ಸ್ವರಂ=ಸ್ವರಾಕ್ಷರಂಗಳ್; ಇರ್ಪತ್ತೈದು ವರ್ಣಂ=ಇಪ್ಪತ್ತೈದಕ್ಷರಂಗಳ್; ಅವು=ಅವು; ವರ್ಗಂ=ವರ್ಗಾಕ್ಷರಂಗಳ್; ತತ್ಸ್ವರದ=ಆ ವರ್ಗಾಕ್ಷರಂಗಳ ಮುಂದಣ; ಒಂಬತ್ತು=ಒಂಬತ್ತಕ್ಷರಂಗಳ್; ಅವರ್ಗಂ=ಅವರ್ಗಾಕ್ಷರಂಗಳ್; ಪರಿಭಾವಿಸೆ=ವಿಚಾರಿಸೆ; ಯೋಗವಾಹಂ=ಯೋಗವಾಹಾಕ್ಷರಂಗಳ್; ಅವು=ಅವು; ನಾಲ್ಕೆ=ನಾಲ್ಕಕ್ಷರಂಗಳೆ; ವಲಂ=ನಿಶ್ಚಯಂ.

ವೃತ್ತಿ.

ಕ್ರಮದಿಂ ಸ್ವರಂ ಪದಿನಾಲ್ಕಕ್ಕರಂಗಳ್, ವರ್ಗಮಿರ್ಪತ್ತೈದಕ್ಕರಂಗಳ್, ಅವರ್ಗಮೊಂಬತ್ತಕ್ಕರಂಗಳ್, ಯೋಗವಾಹಂ ನಾಲ್ಕಕ್ಕರಂಗಳ್; ಅಂತು ಸಂಸ್ಕೃತದೊಳ್ ಶುದ್ಧಗೆಯ್ವೆವತ್ತೆರಡುಂ.

ಸೂತ್ರಂ.

But pure Canarese has only 47 letters.

ಶಿಳಿ ದೇಶೀಯಮುಮೈದುಂ
ಕಳೆ ನೀಂ ಋಹ್ವರ್ಣ ಶ ಷ ವಿಸರ್ಗ ᳲ ᳳ |
ಕ್ಷಳನುಂ ನಾಲ್ವತ್ತೇೞು
ಯ್ಮಳೆ ಶುದ್ಧಗೆಯಚ್ಚಗಂನಡಕ್ಕೀ ಕ್ರಮದಿಂ || 33 ||

### ಪದಚ್ಛೇದಂ.

ತಿಳಿ ದೇಶೀಯಮುಂ ಐದಂ! ಕಳೆ ನೀಂ ಋಌವರ್ಣ, ಶ, ಷ, ವಿಸರ್ಗ, ೱಕ, ೲಪ, ಕ್ಷಳನಂ! ನಾಲ್ವತ್ತೇೞಱಾಯ್ತು, ಅಳೆ, ಶುದ್ಧಗೆ ಅಚ್ಚಗನ್ನಡಕ್ಕೆ ಈ ಕ್ರಮದಿಂ.

### ಅನ್ವಯಂ.

ದೇಶೀಯಮುಂ ಐದಂ ನೀಂ ತಿಳಿ! ಋಌವರ್ಣ, ಶ, ಷ, ವಿಸರ್ಗ, ೱಕ, ೲಪ, ಕ್ಷಳನಂ ಕಳೆ! ಈ ಕ್ರಮದಿಂ ಅಚ್ಚಗನ್ನಡಕ್ಕೆ ಶುದ್ಧಗೆ ನಾಲ್ವತ್ತೇೞಱಾಯ್ತು; ಅಳೆ!

### ಟೀಕು.

ದೇಶೀಯಮುಂ=ದೇಶೀಯಾಕ್ಷರಂಗಳುಂ; ಐದಂ=(ಱ, ೞ, ಳ, ಎ, ಒ ಎಂಬಿವು) ಐದಂ; ನೀಂ=ನೀಂ; ತಿಳಿ=ಅಱಿ; ಋಌವರ್ಣ, ಶ, ಷ, ವಿಸರ್ಗ, ೱಕ, ೲಪ, ಕ್ಷಳನಂ=ಋವರ್ಣ, ಌವರ್ಣ, ಶಕಾರ, ಷಕಾರ, ವಿಸರ್ಗ, ಜಿಹ್ವಾಮೂಲೀಯ ಉಪಧ್ಮಾನೀಯ, ಕ್ಷಳಂಗಳೆಂಬಕ್ಕರಂಗಳಂ; ಕಳೆ=ಕರ್ಣಾಟಭಾಷೆಯೊಳಿಲ್ಲೆಂದು, ಬಿಡು; ಈ ಕ್ರಮದಿಂ=ಈ ರೀತಿಯಿಂದೆ; ಅಚ್ಚಗನ್ನಡಕ್ಕೆ=ಸಂಸ್ಕೃತಂ ಬೆರೆಯದ ಬಱಿಯ ಕನ್ನಡಕ್ಕೆ; ಶುದ್ಧಗೆ=ಶುದ್ಧಾಕ್ಷರಂಗಳ್; ನಾಲ್ವತ್ತೇೞಱಾಯ್ತು=ನಾಲ್ವತ್ತೇಳಕ್ಷರಂಗಳಾದವೆಂದು; ಅಳೆ=ಪ್ರಮಾಣಿಸು.

### ವೃತ್ತಿ.

ಕನ್ನಡದೊಳ್ದೇಶೀಯವೈದು ತೆಱಂ; ಪಿಂತಣ್ಮೂವತ್ತೆರಡಕ್ಕರಂಗಳ್ಕೂಡೆ ಐವತ್ತೇೞಕ್ಕರಂಗಳ್; ಅವಱೊಳಗೆ ಋ ೠ, ಌ ೡ, ಶ, ಷ, ವಿಸರ್ಗ, ೱಕ, ೲಪ, ಕ್ಷಳಂಗಳೆಂಬ ಪತ್ತಂ ಕಳೆಯಲಚ್ಚಗನ್ನಡದೊಳ್ಶುದ್ಧಗೆ ನಾಲ್ವತ್ತೇೞು ವಿಧಂ; ನಿಸರ್ಗಮಾಗಿ ವಿಸರ್ಗಮಿಲ್ಲ.

### ಸೂತ್ರಂ.

The manner how, in the form of letters, significant speech (ಶಬ್ದಂ), i. e. words, originates (cf. preface 9).

ತನು ವಾದ್ಯಂ ನಾಲಿಗೆ ವಾ
ದನದಂಡಂ ಕರ್ತೃವಾತ್ಮನವನ ಮನೋವೃ |
ತ್ತಿನಿಮಿತ್ತಮಾಗಿ ಶಬ್ದಂ
ಜನಿಯಿಸುಗುಂ ಧವಳವರ್ಣಮಕ್ಷರರೂಪಂ || 34 ||

### ಪದಚ್ಛೇದಂ.

ತನು ವಾದ್ಯಂ, ನಾಲಿಗೆ ವಾದನದಂಡಂ, ಕರ್ತೃವು ಆತ್ಮಂ; ಅವನ ಮನೋವೃತ್ತಿನಿಮಿತ್ತಂ ಆಗಿ ಶಬ್ದಂ ಜನಿಯಿಸುಗುಂ ಧವಳವರ್ಣಂ ಅಕ್ಷರರೂಪಂ.

### ಅನ್ವಯಂ.

ಧವಳವರ್ಣಂ ಅಕ್ಷರರೂಪಂ ಶಬ್ದಂ ಜನಿಯಿಸುಗುಂ ಎಂಬುದನ್ವಯಂ.

## ಟೀಕು.

ತನು=ಶರೀರಂ; ವಾದ್ಯಂ=ವಾದ್ಯವು; ನಾಲಿಗೆ=ಜಿಹ್ವೆಯು; ವಾದನದಂಡಂ=ವಾದ್ಯವಂ ನುಡಿಸುವ ಕುಡುಹು; ಆತ್ಮಂ=ಜೀವಾತ್ಮಂ; ಕರ್ತೃ=ವಾದ್ಯವಂ ನುಡಿಸುವ ಕರ್ತೃ; ಅವನ=ಆ ಜೀವಾತ್ಮನ; ಮನೋ, (ಮನಸ್)=ಮನಸಿನ; ವೃತ್ತಿ=ವರ್ತನೆಗೆ; ನಿಮಿತ್ತಂ=ಕಾರಣಂ; ಆಗಿ= ಆಗಿ; ಧವಳ ವರ್ಣಂ=ಶ್ವೇತ ವರ್ಣವಾದ; ಅಕ್ಷರರೂಪಂ=ಅಕ್ಷರಾತ್ಮಕವಾದ; ಶಬ್ದಂ=ಧ್ವನಿ; ಜನಿಯಿಸುಗುಂ=ಹುಟ್ಟುವದು.

## ವೃತ್ತಿ.

ಶರೀರಮೆ ವಾದ್ಯಂ, ನಾಲಿಗೆ ಬಾಜಿಸುವ ಕುಡುಹು, ವಾದಕನಾತ್ಮಂ; ಆತನ ಮನೋವೃತ್ತಿಯಿಂದೆ ಧವಳವರ್ಣಮಂತಪ್ಪಕ್ಷರರೂಪಮಪ್ಪ ಶಬ್ದಂ ಪುಟ್ಟುಗುಂ.

## ಸೂತ್ರಂ.

ಪದದರ್ಥಮಂ ವಿಭಾಗಿಸು
ವುದಱಿಂದೆ ವಿಭಕ್ತಿಯಂತದಂ ಪ್ರತ್ಯಯಮೆಂ |
ಬುದು ತತ್ಪ್ರತ್ಯಯದಿಂ ಪೂ
ರ್ವದೊಳಿರ್ಕುಂ ಪ್ರಕೃತಿಯೆರಡುಮಮರ್ದೊದವೆ ಪದಂ || 35 ||

(A word as) a Theme (ಪ್ರಕೃತಿ) is either a nominal theme (ಲಿಂಗಂ, S. 72) or a verbal one (ಧಾತು). When it is augmented by affixes (ಪ್ರತ್ಯಯಂ, ವಿಭಕ್ತಿ, cf. S. 216), which are either nominal (ನಾಮವಿಭಕ್ತಿ) or verbal ones (ಆಖ್ಯಾತವಿಭಕ್ತಿ), it becomes an inflected word (ಪದಂ). Also an Adverb (or Particle, ಅವ್ಯಯಂ, cf. S. 300 seq.) may become an inflected word (see Ss. 81; 82).

## ಪದಚ್ಛೇದಂ.

ಪದದರ್ಥಮಂ ವಿಭಾಗಿಸುವುದಱಿಂದೆ ವಿಭಕ್ತಿ, ಅಂತು ಅದಂ ಪ್ರತ್ಯಯಂ ಎಂಬುದು; ತತ್ಪ್ರತ್ಯಯದಿಂ ಪೂರ್ವದೊಳ್ ಇರ್ಕುಂ ಪ್ರಕೃತಿ; ಎರಡುಂ ಅಮರ್ದು ಒದವೆ, ಪದಂ.

## ಅನ್ವಯಂ.

ತತ್ಪ್ರತ್ಯಯದಿಂ ಪೂರ್ವದೊಳ್ಪ್ರಕೃತಿ ಇರ್ಕುಂ. (ಶಿಷ್ಟಂ) ಯಥಾನ್ವಯಂ.

## ಟೀಕು.

ಪದದ=ಪದಂಗಳ; ಅರ್ಥಮಂ=ಪುರುಳಂ; ವಿಭಾಗಿಸುವುದಱಿಂದೆ=ವಿಭಾಗಿಸಿ ಕೊಡುವದಱಿಂದೆ; ವಿಭಕ್ತಿ=ವಿಭಕ್ತಿ ಎನಿಪುದು; ಅಂತು=ಹಾಂಗೆ; ಅದಂ=ಆ ವಿಭಕ್ತಿಯಂ; ಪ್ರತ್ಯಯಂ=ಪ್ರತ್ಯಯಮೆಂದು; ಎಂಬುದು=ಪೇಳ್ವುದು; ತತ್ಪ್ರತ್ಯಯದಿಂ=ಆ ವಿಭಕ್ತಿಯಿಂದೆ; ಪೂರ್ವದೊಳ್=ಮೊದಲಲ್ಲಿ; ಪ್ರಕೃತಿ=ಪ್ರಕೃತಿ; ಇರ್ಕುಂ=ಇರ್ಪುದು; ಎರಡುಂ=ಪ್ರಕೃತಿ ಪ್ರತ್ಯಯಮೆಂಬೆರಡುಂ; ಅಮರ್ದು=ಪೊರ್ದುಗೆಯಾಗಿ; ಒದವೆ=ಪ್ರಾಪ್ತಿಸೆ; ಪದಂ=ಪದವೆನಿಸುವದು.

## ವೃತ್ತಿ.

ಪದದೊಳಿರ್ದರ್ಥಮಂ ತಂತಂಮನುಗುಣಮಾಗಿ ವಿಭಾಗಿಸಿ ಕುಡುವದಱಿಂ ವಿಭಕ್ತಿಯೆನಿಸುಗುಂ, ಆ ವಿಭಕ್ತಿಯಂ ಪ್ರತ್ಯಯಮೆನಲಕ್ಕುಂ; ಅವಾವೆಂದೊಡೆ— ಮ್, ಅಮ್ ಮೊದಲಾದ ನಾಮಾಖ್ಯಾತವಿಭಕ್ತಿಗಳ್. ಅವಱಿಂ ಪಿಂದಿರ್ಪ ಲಿಂಗಮುಂ ಧಾತುಮುಂ ಪ್ರಕೃತಿಯೆನಲಕ್ಕುಂ; ಪ್ರಕೃತಿಪ್ರತ್ಯಯಂಗಳೆರಡುಂ ಕೂಡೆ, ಪದಮಕ್ಕುಂ. ಮರ ದೇವ ಎಂದು, ನಾಮಲಿಂಗಮನಿರಿಸಿ, ಮ್ ಎಂಬ (ನಾಮ) ವಿಭಕ್ತಿಯಂ ಕೂಡೆ, ಮರಂ ದೇವಂ ಎಂದು, ನಾಮಪದಮಕ್ಕುಂ. ನೋಡು ಬೇಡು ಎಂಬ ಧಾತುಮನಿರಿಸಿ, ಅಮ್ ಎಂಬಾಖ್ಯಾತವಿಭಕ್ತಿಯಂ ಕೂಡೆ, ನೋಡಿದಂ ಬೇಡಿದಂ ಎಂದು, ಆಖ್ಯಾತಪದಮಕ್ಕುಂ. ಅವ್ಯಯಮುಂ ಸಮಾಸದೊಳಗಣ ನಾಮಭಾಗಮುಂ ವಿಭಕ್ತಿಯಂ ಕೊಟ್ಟುಱಿವುದಱಿಂ ಪದವೆಂದಱಿವುದು.[1)]

## ಸೂತ್ರಂ.

There are Canarese words with obligatory and optional Anusvâra, with true and fleeting double consonants (ಶಿಥಿಲದ್ವಿತ್ವಂಗಳ್) and with double consonants which may be treated either as true or as fleeting (cf. the note at the end of the S.).

ಕೆಲವು ನಿಜ ಬಿಂದುಗಳ್ ಕೆಲ
ಕೆಲವು ವಿಕಲ್ಪಾರ್ಥಬಿಂದುಗಳ್ದ್ವಿತ್ವಂಗಳ್ |
ಕೆಲವಾ ಶಿಥಿಲದ್ವಿತ್ವಂ
ಕೆಲಮುಭಯಮುಮಾಗಿ ಕೆಲವು ಪದನಱಿವುದವಂ || 36 ||

## ಪದಚ್ಛೇದಂ.

ಕೆಲವು ನಿಜ ಬಿಂದುಗಳ್, ಕೆಲಕೆಲವು ವಿಕಲ್ಪಾರ್ಥಬಿಂದುಗಳ್, ದ್ವಿತ್ವಂಗಳ್ ಕೆಲವು, ಆ ಶಿಥಿಲದ್ವಿತ್ವಂ ಕೆಲಂ, ಉಭಯಮುಂ ಆಗಿ ಕೆಲವು ಪದಂ, ಅಱಿವುದು ಅವಂ.

## ಅನ್ವಯಂ.

ಕೆಲವು ನಿಜ ಬಿಂದುಗಳ್, ಕೆಲಕೆಲವು ವಿಕಲ್ಪಾರ್ಥಬಿಂದುಗಳ್, ಕೆಲವು ದ್ವಿತ್ವಂಗಳ್, ಕೆಲಂ ಆ ಶಿಥಿಲದ್ವಿತ್ವಂ, ಕೆಲವು ಪದಂ ಉಭಯಮುಂ ಆಗಿ, ಅವಂ ಅಱಿವುದು.

## ಟೀಕು.

ಕೆಲವು=ಕೆಲವು ಶಬ್ದಂಗಳ್; ನಿಜ ಬಿಂದುಗಳ್=ನಿತ್ಯಬಿಂದುಗಳೆನಿಸುವವು; ಕೆಲಕೆಲವು=ಹಲವು ಕೆಲವು ಶಬ್ದಂಗಳ್; ವಿಕಲ್ಪಾರ್ಥಬಿಂದುಗಳ್=ವಿಕಲ್ಪದಿಂ ಸಬಿಂದುಕಮಬಿಂದುಕವಾಗಿರ್ಪುವು; ಕೆಲವು=ಕೆಲವು ಶಬ್ದಂಗಳ್; ದ್ವಿತ್ವಂಗಳ್=ಒತ್ತಕ್ಕರಂಗಳಾಗಿರ್ಪುವು; ಕೆಲಂ=ಕೆಲವು ಶಬ್ದಂಗ

1) The Sûtra gives us two meaings of ಪದಂ: "word"=ಶಬ್ದಂ in "ಪದದರ್ಥಮಂ", and "inflected word".

ಳ್; ಆ=ಆ ಪ್ರಸಿದ್ಧಮಾದ; ಶಿಥಿಲದ್ವಿತ್ವಂ=ಶಿಥಿಲವಾದ ದ್ವಿತ್ವಂಗಳಾಗಿರ್ಪುವು; ಕೆಲವು ಪದಂ=ಕೆಲವು ಪದಂಗಳ್; ಉಭಯಮುಂ=ದ್ವಿತ್ವ—ಶಿಥಿಲದ್ವಿತ್ವಮೆಂಬುಭಯಮುಂ; ಆಗಿ=ಆಗಿರ್ಪುವು; ಅವಂ=ಆ ಪದಂಗಳಂ; ಅಱಿವುದು=ತಿಳಿವುದು.

## ವೃತ್ತಿ.

ಕೆಲವು ಪದಂಗಳ್ ಸ್ವಭಾವದಿಂ ನಿತ್ಯಬಿಂದುಗಳ್, ಕೆಲವು ಪದಂಗಳ್ ವಿಕಲ್ಪದಿಂ ಸಬಿಂದುಕಮಬಿಂದುಕಮಾಗಿರ್ಪುವು; ಕೆಲವು ಪದಂಗಳ್ನಿಯತದಿಂ ದ್ವಿತ್ವಂಗಳ್, ಕೆಲವು ಪದಂಗಳ್ ಶಿಥಿಲದ್ವಿತ್ವಂಗಳ್, ಕೆಲವು ಪದಂಗಳ್ಶಿಥಿಲಮುಂ ದ್ವಿತ್ವಮುಮಾಗಿರ್ಪುವು.

## ಪ್ರಯೋಗಂ.

ನಿತ್ಯಬಿಂದುಗೆ—ಬೆಡಂಗು, ಕಡಂಗು, ಅಡಂಗು, ತೊಡಂಬೆ, ತೊಡಂಕು, ಕೊಡಂತಿ, ಪಡಂಗು, ಸಿಡುಂಬು, ಸೆಱಂಗು (—ಕು), ಎಱಂಕೆ (ಏಱಂಕೆ), ತುಱುಂಬು, ಕುಱುಂಬಿ, ಒಱಂತೆ, ಕೊಱಂತೆ, ಪೞುಂಕಿದಂ, (ಪಱುಂಕಿದಂ), ಕುಂಕಿದಂ, ತೂಂಕಿದಂ, ಔಂಕಿದಂ, ಕೌಂಕುೞ್ (ಕೌಂಕುಳ್), ಪೆಂಕುಳಿ, ತೆಂಕು, ಕುಸುಂಬೆ, ಹಸುಂಬೆ, ಮುಸುಂಬೆ, ಹಸುಂಬಂ, ಕುಱುಂಬಂ (ಕುಱುಂಬು), ದಾಂಟು, ದೂಂಟು, ಗೆಂಟು, ಗೊಂಟು, ಗೆಂಟುಗೆ, ಬೇಂಟಿ (ಬೆಂಟೆ), ಸುಂಟಿಗೆ, ಮೆಂಟಿ, ಮಿಾಂಟು, ಮಿಾಂಟಿದಂ, ಈಂಟು, ಕೂಂಟು, ಕುಂಟಣಿ, ಸೊರಂಟು, ತೆರಂಟು, ಸೀಂಟು, ತೋಂಟಂ, ತೋಂಟಿಗಂ, ಪೊಸಂತಿಲ್, ಗಳಂತಿಗೆ, ಪಳಂಚಿದಂ, ಸಾಂದು, ಸೇಂದು, ಮಿಂದಂ, ನಾಂದು, ಕಡುಂಬು, ಕಡಂದುಱು, ಬಣಂಬೆ, ಬಣಂಜಿಗಂ, ಬೆಂದುಱು, ಬೇದಂಡೆ (ಬೆದಂಡೆ), ಬದುಂಕಿದಂ (ಬಲುಂಕಿದಂ), ಪಲುಂಬಿದಂ, ನಿಲುಂಬಿದಂ, ಅಸುಂಬಿದಂ, ಕರಂಡಗೆ, ತಂದಲ್; ಇವು ಮೊದಲಾದುವು.

ವಿಕಲ್ಪಬಿಂದುಗೆ—ಕದಂಪು, ಕದಪು; ಕೊಡಂಕೆ, ಕೊಡಕೆ; ಇಱುಂಪೆ, ಇಱುಪೆ; ನೊರಂಜು, ನೊರಜು; ಜಿನುಂಗು, ಜಿನುಗು; ಬೆಳಂತಿಗೆ, ಬೆಳತಿಗೆ; ಕರಿಂಕು, ಕರಿಕು; ತೊಳಂಕು, ತೊಳಕು; ಕಣಂಜು, ಕಣಜು; ಅಱಂಬೆ, ಅಱವೆ; ಕೞುಂಕೆ, ಕೞುಕೆ; ಕುಱುಂಕಿದಂ, ಕುಱುಕಿದಂ; ಇಱುಂಕಿದಂ, ಇಱುಕಿದಂ; ಕರ್ದುಂಕಿದಂ, ಕರ್ದುಕಿದಂ; ದುಡುಂಮಿಱಿದಂ, ದುಡುಮಿಱಿದಂ; ತುಳುಂಕಿದಂ, ತುಳುಕಿದಂ; ಪೊಳಂಕಿದಂ, ಪೊಳಕಿದಂ; ಮುಸುಂಕಿದಂ, ಮುಸುಕಿದಂ; ಇವು ಮೊದಲಾದುವು.

ಇನ್ನು ನಿಯತದ್ವಿತ್ವಕ್ಕೆ—ಪಪ್ಪುಕಂ, ಕಪ್ಪಡಿ, ಬಿಪ್ಪಂಡಂ, ಉಪ್ಪಂಡಂ, ತಿಪ್ಪುಗಳ್, ಸೊಪ್ಪುಗಳ್, ಕೊಪ್ಪಲ್, ಕೊಪ್ಪಂ, ಕೊಪ್ಪು, ಚಪ್ಪರಂ, ಒಪ್ಪಂ, ನೆಪ್ಪು (ನೆಪ್ಪಂ), ಕಪ್ಪಳಿ, ತಪ್ಪಡಿ, ಱೊಪ್ಪಂ, ತೆಪ್ಪಂ, ಟೆಪ್ಪರಂ (ಟಿಪ್ಪರಂ), ದುಪ್ಪಡಿ, ಉಪ್ಪಡಂ (ಉವು

ಪ್ಪಡಂ, ಹಿಪ್ಪಲಿ, ಸಿಪ್ಪು, ಸಕ್ಕರೆ, ಕಕ್ಕಸಂ, ಪೊಕ್ಕಳಂ, ಬಕ್ಕಸಿ, ರಕ್ಕಸಿ, ತಕ್ಕರಂ, ಕೊಕ್ಕರಸು, ಉಕ್ಕೆವಂ, ಬಕ್ಕರಸೆ, ಒಕ್ಕುಡಿತೆ (also ಒಕ್ರ್ಕುಡಿತೆ, see s. S. 24; M. A.), ಪೊಗ್ಗರಂ, ಪೊಗ್ಗು, ಬಗ್ಗಂ, ಬಗ್ಗಣಿ, ಲಗ್ಗೆಗಂ (ಲಗ್ಗಿಗಂ), ಅಗ್ಗಳಂ, ವೆಗ್ಗಳಂ, ಸುಗ್ಗಂ, ಸುಗ್ಗಿ, ಉಗ್ಗಂ, ಉಗ್ಗಿ, ತೊಟಿಲ್ದಂ, ಬಟಿಲ್ದಂ, ಕಟಿಲ್ದಂ, ಬಟ್ದಂ, ಬೀಟ್ದಂ, ಆಟ್ದಂ, ಏಟ್ದಂ, ಸುರುಳ್ದಂ [ಸುರುಟ್ದಂ], ಆಳ್ತೆ, ಕಟ್ತೆ, ಕಟ್ತಲೆ, ತೊಟ್ತು ಇವು ಮೊದಲಾದುವು.

ಇನ್ನು ಶಿಥಿಲದ್ವಿತ್ವಕ್ಕೆ[1]—ಮಗುಟ್ದಂ (912), ಅಗುಟ್ದಂ (907), ಜಗುಟ್ದಂ (909), ಪೊಗಟ್ದಂ (910), ತುಮುಳ್ದಂ (?), ನುಸುಳ್ದಂ (951), ಮಸುಳ್ದಂ (949), ಮುಗುಳ್ದಂ (954), ತೆಗಟ್ದಂ (908), ನೆಗಟ್ದಂ (911), ತಿಮಿರ್ದಂ (545).

ಇನ್ನು ದ್ವಿತ್ವಮುಂ ಶಿಥಿಲಮುಂ ಆದುವರ್ಕೆ—ತಗುಳ್ದಂ, ಪೊರಳ್ದಂ ಎಂಬಂತೆ.

### ಸೂತ್ರಂ.

Words having a Short vowel of the penultimate with Repha (the thus formed syllable being always long? cf. note to ಎಂದೊಡಂ s. S. 40 and S. 45).

ಉರ್ದುಂ ಬಿರ್ದುಂ ತರ್ದುಂ
ಮರ್ದುಂ ಗುರ್ದುಂ ಸಮಂತು ತಿರ್ದುಂ ಪರ್ದುಂ |
ಗರ್ದುಟಿಯುಮುರ್ದಿದುದೆನೆಯುಂ
ಗರ್ದೆಯುಮಾ ಗುರ್ದೆಯುಂ ಸರೇಫಪದಂಗಳ್ || 37 ||

### ಪದಚ್ಛೇದಂ.

ಉರ್ದುಂ, ಬಿರ್ದುಂ, ತರ್ದುಂ, ಮರ್ದುಂ, ಗುರ್ದುಂ; ಸಮಂತು ತಿರ್ದುಂ, ಪರ್ದುಂ, ಗರ್ದುಟಿಯಿಂ, ಉರ್ದಿದುದು ಎನೆಯುಂ, ಗರ್ದೆಯುಂ, ಆ ಗುರ್ದೆಯುಂ ಸರೇಫಪದಂಗಳ್.

### ಯಥಾನ್ವಯಂ.

### ಟೀಕು.

ಉರ್ದುಂ=ಉರ್ದೆಂದುಂ; ಬಿರ್ದುಂ=ಬಿರ್ದೆಂದುಂ; ತರ್ದುಂ=ತರ್ದೆಂದುಂ; ಮರ್ದುಂ=ಮರ್ದೆಂದುಂ; ಗುರ್ದುಂ=ಗುರ್ದೆಂದುಂ; ಸಮಂತು=ಹಾಂಗೆ; ತಿರ್ದುಂ=ತಿರ್ದೆಂದುಂ; ಪರ್ದುಂ=ಪರ್ದೆಂದುಂ; ಗರ್ದುಟಿಯಿಂ=ಗರ್ದುಟಿಯೆಂದುಂ; ಉರ್ದಿದುದೆನೆಯುಂ=ಉರ್ದಿದುದು ಎಂದೊಡೆಯುಂ; ಗರ್ದೆಯುಂ=ಗರ್ದೆ ಎಂದುಂ; ಆ ಗುರ್ದೆಯುಂ=ಆ ಪ್ರಸಿದ್ಧವಾದ ಗುರ್ದೆ ಎಂದುಂ; ಸರೇಫಪದಂಗಳ್=ರೇಫೆಯೊಡನೆ ಕೂಡಿದ ಪದಂಗಳೆನಿಸುವವು.

1) Compound-consonants of a fleeting character; S. 42. In Prosody such a compound-consonant may either be regarded as double or not. Cf. Sûtras 59; 143; 162; 180; 208; 220; 246; etc. This rule has been acted upon in the Jeimini for instance in the following places (Bangalore native edition): Chapter II, verse 45; III, ಸೂಚನೆ; III, 26; IV, 7; V, 31; VI, 36; VIII, 24. 33. 39. 48; XI, 34. For the not counting of a Repha, which is very common, also the Author's verses themselves often present instances. See Ss. 42. 45.

ಸೂತ್ರಂ.

Further words of the same character.

ನುರ್ಗಿದುದೆನೆ ತರ್ಗಿದುದೆನೆ
ಕಿರ್ಗಿದುದೆನೆ ಜರ್ಗುವಿಟ್ಟುದೆನೆ ಪೆರ್ಗತ್ತಾ |
ವೊರ್ಗಾದರ್ಪೆರ್ಗಳವೆನೆ
ಕುರ್ಗಿದುದೆನೆ ಮಾರ್ಗದೊಳ್ಸರೇಫಪದಂಗಳ್ || 38 ||

ಪದಚ್ಛೇದಂ.

ನುರ್ಗಿದುದು ಎನೆ, ತರ್ಗಿದುದು ಎನೆ, ಕಿರ್ಗಿದುದು ಎನೆ, ಜರ್ಗುವಿಟ್ಟುದು [-ವಿಳ್ದುದು] ಎನೆ, ಪೆರ್ಗತ್ತು, ಆ ಒರ್ಗಾದರ್, ಪೆರ್ಗಳವು ಎನೆ, ಕುರ್ಗಿದುದು ಎನೆ, ಮಾರ್ಗದೊಳ್ ಸರೇಫಪದಂಗಳ್.

ಯಥಾನ್ವಯಂ.

ಟೀಕು.

ಇವೆಲ್ಲಂ ಸರೇಫಪದಂಗಳೆಂಬುದರ್ಥಂ.

ಸೂತ್ರಂ.

Further words (Adjective themes of the Future, S. 232; or verbal nouns, S. 211) of a similar character.

ಇರ್ಪುಂ ತೋರ್ಪುಂ ಕೆರ್ಪುಂ
ನೆರ್ಪುಂ ಪೆರ್ಪೆಯುಮಡರ್ಪುಮಾರ್ಪುಂ ಕೂರ್ಪುಂ |
ಪರ್ಪರಿಕೆಯುಮೆರ್ಪುಂ ಮೈ
ಯ್ಗರ್ಪುಂ ಮೊದಲಾಗಿ ರೇಫಸಂಯೋಗಂಗಳ್[1] || 39 ||

ಪದಚ್ಛೇದಂ.

ಇರ್ಪುಂ, ತೋರ್ಪುಂ, ಕೆರ್ಪುಂ, ನೆರ್ಪುಂ, ಪೆರ್ಪೆಯುಂ, ಅಡರ್ಪುಂ, ಆರ್ಪುಂ, ಕೂರ್ಪುಂ (S. 225), ಪರ್ಪರಿಕೆಯುಂ, ಎರ್ಪುಂ (887) [ಇರ್ಪುಂ], ಮೈಯ್ಗರ್ಪುಂ ಮೊದಲ್ ಆಗಿ ರೇಫ ಸಂಯೋಗಂಗಳ್.

ಯಥಾನ್ವಯಂ.

ಟೀಕು.

ಇವು ಮೊದಲಾದ ಶಬ್ದಂಗಳ್ ರೇಫೆಯೊಡನೆ ಕೂಡಿದ ಪದಂಗಳೆಂಬುದರ್ಥಂ.

ಸೂತ್ರಂ.

Words (Forms of the Imperfect of roots with final ರ್) having a Long penultimate-vowel with Repha (cf. the end of S. 44; s. S. 241; about forms of themes with final ಱ್ see S. 240).

ಆರ್ದಂ ಸಾರ್ದಂ ಪೋರ್ದಂ
ತೀರ್ದಂ ಪಾರ್ದಂ ಸಮಂತು ಪೀರ್ದಂ ಕಾರ್ದಂ |
ನೇರ್ದಂ ಬಾರ್ದಂ ಗೋರ್ದಂ
ಸೋರ್ದಂ ತಾನೆಂದೊಡಂ ಗುರೂಪಧೆಯಿನಿತುಂ || 40 ||

1) ಇರ್ಪು, ನೆರ್ಪು, ಕುರ್ಪು (?), ತೋರ್ಪು occur Caturâsya Nighaṇṭu S. 47.

ಪದಚ್ಛೇದಂ.

ಆರ್ದಱಂ (566), ಸಾರ್ದಱಂ (556), ಪೋರ್ದಱಂ (555), ತೀರ್ದಱಂ, ಪಾರ್ದಱಂ (558); ಸಮಂತು ಪೀರ್ದಱಂ (565), ಕಾರ್ದಱಂ (564), ನೇರ್ದಱಂ (557), ಬಾರ್ದಱಂ (562), ಗೋರ್ದಱಂ (559), ಸೋರ್ದಱಂ (563) ತಾಂ ಎಂದೊಡಂ ಗುರೂಪಧೆ ಇನಿತುಂ.

ಅನ್ವಯಂ.

ಸೋರ್ದಱಂ ಎಂದೊಡಂ[1] ತಾಂ ಇನಿತುಂ ಗುರೂಪಧೆ. ಉಳಿದದ್ದು ಯಥಾನ್ವಯಂ.

ಟೀಕು.

ಸೋರ್ದಱನೆಂದೊಡಂ ತಾವಿನಿತು ಶಬ್ದಂಗಳುಂ ಗುರೂಪಧೆ=ಗುರುವಾದುಪಧೆ ಎಂಬುದರ್ಥಂ.

ವಿಚಾರಂ.

ಉಪಧೆಯೆಂದೊಡೆ ವ್ಯಾಕರಣಂಗಳಲ್ಲಿ— || ಅಂತ್ಯಾತ್ ಪೂರ್ವಮ್ ಉಪಧಾ || ಎಂಬ ಸಂಜ್ಞಾಸೂತ್ರದಿಂ[2]—ಅಂತ್ಯದತ್ತಣಿಂ ಮೊದಲುಪಧೆಯು ಎಂದಱ್!

ಸೂತ್ರಂ.

Further words (Nominatives of the Plural with ಗಳ್) of such a character.

ಊಱ್ಗಳ್ಕೇಱ್ಗಳ್ಬೇಱ್ಗ
ಳ್ನಾಱ್ಗಳ್ತೇಱ್ಗಳ್ನೆಗಱ್ತೆಯಾಱ್ಗಳ್ಕೂಱ್ಗ |
ಳ್ನೇಱ್ಗಳ್ಸೀಱ್ಗಳ್ತಾಱ್ಗ
ಳ್ಸೂಱ್ಗಳ್ಕಾಱ್ಗಳ್ಗುರೂಪಧಾರ್ಥಮೆನಿಕ್ಕುಂ || 41 ||

ಪದಚ್ಛೇದಂ.

ಊಱ್ಗಳ್, ಕೇಱ್ಗಳ್, ಬೇಱ್ಗಳ್, ನಾಱ್ಗಳ್, ತೇಱ್ಗಳ್, ನೆಗಱ್ತೆಯ ಆಱ್ಗಳ್, ಕೂಱ್ಗಳ್, ನೇಱ್ಗಳ್, ಸೀಱ್ಗಳ್, ತಾಱ್ಗಳ್, ಸೂಱ್ಗಳ್, ಕಾಱ್ಗಳ್ ಗುರೂಪಧಾರ್ಥಂ ಎನಿಕ್ಕುಂ.

ಟೀಕು.

ಇವೆಲ್ಲಂ ಗುರೂಪಧಾರ್ಥಂಗಳೆಂಬುದರ್ಥಂ.

ಸೂತ್ರಂ.

Fleeting double consonants (ಶಿಥಿಲ ದ್ವಿತ್ವಂಗಳ್) often occur in the (Nominative) Plural formed with ಗಳ್

ಪಿಂತಮರ್ದಿಱೆ ಱಿಱಿಕುಳಱೇ
ಫಾಂತಂ ಹ್ರಸ್ವಾದಿಲಿಂಗಮುಂತವು ಗಳ್ಕ್ಕೆ |
ಣಾಂತೆ ಚತುರ್ಥಿಯ ಗೆಯೆ ಮೇ
ಣ್ಮ್ರಾಂತಮರ್ದಿಱೆ ಪಿರಿದುಮೊದವುಗುಂ ಶಿಥಿಲತ್ವಂ || 42 ||

(cf. Ss. 41; 95) and Dative Singular formed with ಗೆ (S. 113) (which is also the case-affix for the Dative Plural) of nominal themes with short penultimate which end either in ಱು or ಳ್ or ಱ್ (cf. S. 115). This ಱ್ may be a substitute (ಆದೇಶಂ) for ಱು.

1) The ಅಂ in ಎಂದೊಡಂ seems to say "also these" (like those in Ss. 37, 38 and 39, the penultimate of which is long for the Repha) have a long penultimate. 2) ಅಂತ್ಯಾದ್ ವರ್ಣಾತ್ ಪೂರ್ವ ಉಪಧಾ ಎಂತ, ವಾಜಸನೇಯಿಪ್ರಾತಿಶಾಖ್ಯದೊಳುಂಟು (1, 35).

### ಪದಚ್ಛೇದಂ.

ಪಿಂತೆ ಅಮರ್ದುರ್ ಇರೆ ಟಟುಕುಳರೇಫಾಂತಂ ಹ್ರಸ್ವಾದಿಲಿಂಗಂ ಅಂತು ಅವು, ಗಳ್ ಮೇಣ್ ಅಂತೆ ಚತುರ್ಥಿಯ ಗೆಯೆ ಮೇಣ್ ಮುಂತೆ ಅಮರ್ದುರ್ ಇರೆ ಪಿರಿದುಂ ಒದವುಗುಂ ಶಿಥಿಲತ್ವಂ.

### ಅನ್ವಯಂ.

ಹ್ರಸ್ವಾದಿಲಿಂಗಂ ಟಟುಕುಳರೇಫಾಂತಂ ಪಿಂತೆ ಅಂತು ಅವು ಅಮರ್ದಿರೆ, ಮೇಣ್ ಗಳ್ ಅಂತೆ ಮೇಣ್ ಚತುರ್ಥಿಯ ಗೆಯೆ ಮುಂತೆ ಅಮರ್ದಿರೆ, ಪಿರಿದುಂ ಶಿಥಿಲತ್ವಂ ಒದವುಗುಂ.

### ಟೀಕು.

ಹ್ರಸ್ವಾದಿಲಿಂಗಂ=ಹ್ರಸ್ವಾದಿಲಿಂಗಂಗಳಾದ; ಟಟುಕುಳರೇಫಾಂತಂ=ಟಟುಾಂತ ಕುಳಾಂತ ರೇಫಾಂತಂಗಳಾದ ಶಬ್ದಂಗಳ್; ಪಿಂತೆ=ಹಿಂದುಗಡೆಯಲ್ಲಿ; ಅಂತು=ಹಾಂಗೆ; ಅವು=ಆ ಶಬ್ದಂಗಳ್; ಅಮರ್ದಿರೆ=ಪೊರ್ದುಗೆಯಾಗಿ ಇರೆ; ಮೇಣ್=ವಿಕಲ್ಪದಿಂದೆ; ಗಳ್=ಬಹುವಚನದ ಗಳಾಗಮಂ; ಅಂತೆ=ಹಾಂಗೆ; ಮೇಣ್=ಅದಲ್ಲದೆ; ಚತುರ್ಥಿಯ=ಚತುರ್ಥೀವಿಭಕ್ತಿಯ; ಗೆಯೆ=ಗೆಕಾರಂ; ಮುಂತೆ=ಮುಂದುಗಡೆಯಲ್ಲಿ; ಅಮರ್ದಿರೆ=ಪೊರ್ದುಗೆಯಾಗಿರೆ; ಪಿರಿದುಂ=ಬಹುಳಮಾಗಿಯುಂ; ಶಿಥಿಲತ್ವಂ=ಶಿಥಿಲಮಪ್ಪತನಂ; ಒದವುಗುಂ=ಪ್ರಾಪ್ತಿಸುವದು.

### ವೃತ್ತಿ.

ಪೆಱಗಣ ವ್ಯೆಂಜನ ಯೊಳ್ ಲಘು ಮೊದಲಾಗಿರ್ದ ಟಟುಕುಳರೇಫಾಂತಂಗಳಪ್ಪ ಲಿಂಗಂಗಳಿರೆ, ಮುಂದೆ ಗಳ್ ಅಕ್ಕೆ, ಮೇಣ್ ಚತುರ್ಥಿಗಾದ ಗೆಕಾರಮಕ್ಕೆ, ಶಿಥಿಲಮಕ್ಕುಂ.

### ಪ್ರಯೋಗಂ.

ಟಟುಾಂತಕ್ಕೆ—ಅಗಟ್ಗಳ್, ಎಸಟ್ಗಳ್ (see s. S. 19), ನೆಗಟ್ಗಳ್ ಎಂದೊಡೆ ಜಲಚರಂಗಳ್, ಉಗುಟ್ಗಳ್; ಅಗಟ್ಗೆ, ಎಸಟ್ಗೆ, ನೆಗಟ್ಗೆ ಉಗುಟ್ಗೆ.

ಆದಿ ದೀರ್ಘಮಾದೊಡಂ ಗುರುವಾದೊಡಂ ಶಿಥಿಲಮಿಲ್ಲ—ಬಾಸುಟ್ಗಳ್, ಇಕ್ಕುಟ್ಗಳ್, ಪೊಕ್ಕುಟ್ಗಳ್; ಬಾಸುಟ್ಗೆ, ಇಕ್ಕುಟ್ಗೆ, ಪೊಕ್ಕುಟ್ಗೆ.

ಕುಳಾಂತಕ್ಕೆ—ಮುಗುಳ್ಗಳ್, ಪುಗುಳ್ಗಳ್, ಅಮುಳ್ಗಳ್, ಎಸಳ್ಗಳ್ ಎಂದೊಡೆ ಪೂವಿನವು; ಮುಗುಳ್ಗೆ, ಪುಗುಳ್ಗೆ, ಅಮುಳ್ಗೆ, ಎಸಳ್ಗೆ.

ಪಿರಿದುಂ ಎಂಬುದಱಿಂ ಕೆಲವೆಡೆಯೊಳ್ ಶಿಥಿಲಮಿಲ್ಲದುದರ್ಕೆ—ಕುರುಳ್ಗಳ್, ಪುರುಳ್ಗಳ್, ಮರುಳ್ಗಳ್; ಕುರುಳ್ಗೆ ಇತ್ಯಾದಿ.

ರೇಫಾಂತಕ್ಕೆ—ಕನರ್ಗಳ್, ಕೊನರ್ಗಳ್, ತಳಿರ್ಗಗಳ್, ಅಲರ್ಗಳ್, ಎಲರ್ಗಳ್, ಉಗುರ್ಗಳ್, ಬಿದಿರ್ಗಳ್, ಕದಿರ್ಗಳ್, ತಿಮಿರ್ಗಳ್, ತೆಮರ್ಗಳ್, ಬೆಮರ್ಗಳ್, ಎಸರ್ಗಗಳ್, ಮೊಸರ್ಗಳ್, ಉಸುರ್ಗಳ್, ಪಸುರ್ಗಳ್, ನವಿರ್ಗಳ್; ಕನರ್ಗೆ ಇತ್ಯಾದಿ.

ಱಕಾರಾದೇಶರೇಫೆಗಂ ಶಿಥಿಲತ್ವಂ—ಅಳಿರ್ಗಳ್, ವಸರ್ಗಳ್, ಕೆಸರ್ಗಳ್, ಬಸಿರ್ಗಳ್, ಪೆಸರ್ಗಳ್, ಹಗರ್ಗಳ್, ಎಡರ್ಗಳ್; ಅಳಿರ್ಗೆ ಇತ್ಯಾದಿ[1].—ಪಿರಿದುಮೆಂಬುದಱಿಂದೆ ಕಾದಲರ್ಗಳೆಂಬ ಪದನ ಆದಿ ದೀರ್ಘಮಾಗಿಯುಂ ಶಿಥಿಲಮಾಯ್ತು.

ಸೂತ್ರಂ.

Also in Compounds (ಸಮಾಸಂ) fleeting double consonants occur when ಗ, ದ, ವ, ಜ are preceded by words with short penultimate which terminate either in ರ or ಳ.

ಗದವಜಕಾರಮವಿದಿರಿರೆ
ಪದಮಧ್ಯಂ ವಿಷಯಮಾಗನೇಕಾಕ್ಷರದೊಳ್ |
ಪುದಿಯೆ ಲಘೂಪಧೆಕೆಲಕೆಲ
ವೊದವಿರ್ಕುಂ ರಾಂತಳಾಂತಮವು ಶಿಥಿಲತೆಯುಂ || 43 ||

ಪದಚ್ಛೇದಂ.

ಗದವಜಕಾರಂ ಅವು ಇದಿರ್ ಇರೆ, ಪದಮಧ್ಯಂ ವಿಷಯಂ ಆಗೆ, ಅನೇಕಾಕ್ಷರದೊಳ್ ಪುದಿಯೆ, ಲಘೂಪಧೆ (ೞ) ಕೆಲ ಕೆಲವು ಒದವಿ ಇರ್ಕುಂ ರಾಂತಳಾಂತಂ ಅವು ಶಿಥಿಲತೆಯುಂ.

ಅನ್ವಯಂ.

ಪದಮಧ್ಯಂ ವಿಷಯಂ ಆಗೆ, ಗದವಜಕಾರಂ ಅವು ಇದಿರಿರೆ, ಅನೇಕಾಕ್ಷರದೊಳ್ ಪುದಿಯೆ, ಲಘೂಪಧೆ(ೞ) ಕೆಲ ಕೆಲವು ರಾಂತಳಾಂತಂ ಅವು ಶಿಥಿಲತೆಯುಂ ಒದವಿರ್ಕುಂ.

ಟೀಕು.

ಪದಮಧ್ಯಂ=ಸಮಾಸ ಮಧ್ಯಂ; ವಿಷಯಂ=ಪ್ರಯೋಜನಂ; ಆಗೆ=ಆಗೆ; ಗದವಜಕಾರಂ=ಗಕಾರ, ದಕಾರ, ವಕಾರ, ಜಕಾರಂಗಳ್; ಅವು=ಅವು; ಇದಿರಿರೆ=ಮುಂದಿರೆ; ಅನೇಕಾಕ್ಷರದೊಳ್=ಅನೇಕಾಕ್ಷರದಲ್ಲಿ; ಪುದಿಯೆ=ಪ್ರವೇಶವಾಗೆ; ಲಘೂಪಧೆ=ಲಘುವೆ ಉಪಧೆಯಾದ; ಕೆಲ ಕೆಲವು=ಹಲವು ಕೆಲವು; ರಾಂತಳಾಂತಂ=ರೇಫಾಂತಳಕಾರಾಂತ ಶಬ್ದಂಗಳ್; ಅವು=ಅವು; ಶಿಥಿಲತೆಯುಂ=ಶಿಥಿಲತ್ವವಂ; ಒದವಿರ್ಕುಂ=ಪ್ರಾಪ್ತಿಯಾಗಿರ್ಪುವು(?).

ವೃತ್ತಿ.

ಮುಂತೆ ಗದವಜಕಾರಂಗಳಿರೆ, ಪೆಱಗಣ ಪ್ಯೊಯೊಳ್ ರಾಂತಳಾಂತಗಳ್, ಸಮಾಸಮಧ್ಯವೆ ವಿಷಯಮಾಗಿ, ಪಲವಕ್ಕರಂಗಳೊಳ್ಕೂಡಿ ಲಘೂಪಧೆಯಾಗಿ ನಿಲೆ, ಆ ರಾಂತ ಳಾಂತಂಗಳ್ಗೆ ಶಿಥಿಲತ್ವಮಕ್ಕುಂ.

1) The themes of these words in the Singular are: ಅಳಿಱ್, ವಸಱ್, ಕೆಸಱ್, ಬಸಿಱ್, ಪೆಸಱ್, ಹಗಱ್, ಎಡಱ್.

## ಪ್ರಯೋಗಂ.

ರಾಂತಕ್ಕೆ—ಕುಳಿರ್ಗ್ಗಾಳಿ; ಬೆಳರ್ಗ್ಗೆಂಪು; ಅಲದೊರ್ರ್ರಣಂ; ಬಿದಿರ್ದ್ದಟ್ಟಿ; ತಳಿದೋರ್ರಣಂ; ಪೊಗರ್ವ್ವಟ್ಟಿ; ಬೆಮರ್ವ್ವನಿ; ಅಲರ್ಜೊರ್ಂಪಂ; ಕದಿರ್ಜೊನ್ನಂ.

ಳಾಂತಕ್ಕೆ—ಮುಗುಳ್ಗ್ಗಾಯ್; ಅಮಳ್ದ್ದೊಂಗಲ್; ಎಸಳ್ಗಸೆ; ಅಮಳ್ಜಂತ್ರಂ.

## ಸೂತ್ರಂ.

ಪುಗೆ ದದಪವಕಾರಂ ವಿಧಿ
ಯ ಗೆಕಾರಂ ವರ್ತಮಾನಕಾಲದ ಗುಂ ಧಾ
ತುಗೆ ಱಳಕುಳರೇಫಾಂತ
ಕ್ಕೊಗೆಗುಂ ಶಿಥಿಲತ್ವಮಗುರುಪೂರ್ವಸ್ಥಿತಿಯಿಂ || 44 ||

Further in conjugating verbs which end in ಱ್, ಳ್ or ರ and the first syllable of which is short, fleeting double consonants occur viz. before the affixes ದ, ದಪ, ವ, ಗೆ, ಗುಂ (see Ss. 221; 227; 229).

## ಪದಚ್ಛೇದಂ.

ಪುಗೆ ದದಪವಕಾರಂ ವಿಧಿಯ ಗೆಕಾರಂ ವರ್ತಮಾನಕಾಲದ ಗುಂ ಧಾತುಗೆ, ಱಳಕುಳರೇಫಾಂತಕ್ಕೆ ಒಗೆಗುಂ ಶಿಥಿಲತ್ವಂ ಅಗುರುಪೂರ್ವಸ್ಥಿತಿಯಿಂ.

## ಅನ್ವಯಂ.

ಅಗುರುಪೂರ್ವಸ್ಥಿತಿಯಿಂ ಱಳಕುಳರೇಫಾಂತಕ್ಕೆ, ಧಾತುಗೆ ದದಪವಕಾರಂ ವಿಧಿಯ ಗೆಕಾರಂ ವರ್ತಮಾನಕಾಲದ ಗುಂ ಪುಗೆ, ಶಿಥಿಲತ್ವಂ ಒಗೆಗುಂ.

## ಟೀಕು.

ಅಗುರುಪೂರ್ವಸ್ಥಿತಿಯಿಂ=ಲಘು ಮೊದಲಾಗಿರ್ಪುದಱಿಂದೆ; ಱಳಕುಳರೇಫಾಂತಕ್ಕೆ=ಱಳಾಂತ ಕುಳಾಂತ ರೇಫಾಂತಗಳಾದ; ಧಾತುಗೆ=ಧಾತುಗಳ್ಗೆ; ದದಪವಕಾರಂ=ದಕಾರ ದಪಕಾರ ವಕಾರಂಗಳ್; ವಿಧಿಯ=ವಿಧ್ಯರ್ಥದ; ಗೆಕಾರಂ=ಗೆ ಎಂಬಕ್ಷರಂ; ವರ್ತಮಾನಕಾಲದ=ವರ್ತಮಾನಕಾಲಾರ್ಥದ; ಗುಂ=ಗುಂಕಾರಂ; ಪುಗೆ=ಪ್ರವೇಶಮಾಗೆ; ಶಿಥಿಲತ್ವಂ=ಶಿಥಿಲಮಪ್ಪತನಂ; ಒಗೆಗುಂ=ಹುಟ್ಟುಗುಂ.

## ವೃತ್ತಿ.

ಹ್ರಸ್ವಾದಿಗಳಪ್ಪ ಱಳಕುಳರೇಫಾಂತಂಗಳಪ್ಪನೇಕಾಕ್ಷರಧಾತುಗಳ್ಗೆ ಭೂತವರ್ತಮಾನಭವಿಷ್ಯಂತಿಗಾದ || ದ || || ದಪ || || ವ || ಎಂಬಿವು ಪರಮಾದೊಡಂ, ಪ್ರಥಮಪುರುಷದ ವಿಧ್ಯರ್ಥದೊಳಾದ || ಗೆ || ಎಂಬುದು ಪರಮಾದೊಡಂ, ಪ್ರಥಮಪುರುಷದ ವರ್ತಮಾನಭವಿಷ್ಯಂತಿಗಾದ || ಗುಂ || ಎಂಬುದು ಪರಮಾದೊಡಂ, ಕ್ರಿಯಾಪದದೊಳ್ ಶಿಥಿಲತೆಯನ್ನೈದುವುವು.

ಪ್ರಯೋಗಂ.

ಱಟಾಂತಂಗಳ ದ ದಪ ವಂಗಳ್ಗೆ—ಜಗುಳ್ದಿಂ, ಅಗುಳ್ದಿಂ, ಪೊಗಳ್ದಿಂ, ತೆಗಳ್ದಿಂ, ನೆಗಳ್ದಿಂ, ತುಮುಳ್ದಿಂ; ಜಗುಳ್ದಿಪಂ ಇತ್ಯಾದಿ; ಜಗುಳ್ತಿಂ ಇತ್ಯಾದಿ.

ಗೆಕಾರಕ್ಕೆ—ತೆಗಳ್ಗೆ, ನೆಗಳ್ಗೆ, ಪೊಗಳ್ಗೆ ಎಂಬಂತಱವುದು.

ಗುಂ ಎಂಬುದರ್ಕೆ—ತೆಗಳ್ಗುಂ, ನೆಗಳ್ಗುಂ, ಪೊಗಳ್ಗುಂ ಎಂಬಂತುಱವುದರ್ಕೆಲ್ಲಂ ಪತ್ತಿಸುಗುಂ.—

ಕುಳಾಂತಕ್ಕೆ—ನುಸುಳ್ದಂ, ಮುಸುಳ್ದಂ, ಮುಗುಳ್ದಂ; ಮುಸುಳ್ದಪಂ ಇತ್ಯಾದಿ; ಮುಸುಳ್ತಂ ಇತ್ಯಾದಿ.

ಗೆಕಾರಕ್ಕೆ—ನುಸುಳ್ಗೆ, ಮುಸುಳ್ಗೆ ಎಂಬಂತೆ.

ಗುಂ ಎಂಬುದರ್ಕೆ—ನುಸುಳ್ಗುಂ, ಮುಸುಳ್ಗುಂ ಎಂಬಂತೆ ಮಾಱ್ಪುದು.—

ತೆರಳ್ದಂ, ಪೊರಳ್ದಂ ಎಂಬಂತೆ ಕೆಲಕೆಲವೆಡೆಯೊಳ್ ಶಿಥಿಲತ್ವಮಿಲ್ಲ.—

ರೇಫಾಂತಕ್ಕೆ—ತೊಡರ್ದಂ, ತಳರ್ದಂ, ಅಳರ್ದಂ, ಅದಿರ್ದಂ, ಬಿದಿರ್ದಂ, ನಿಮಿರ್ದಂ; ನಿಮಿರ್ದಪಂ; ನಿಮಿರ್ವನೆಂಬಂತೆಲ್ಲಕ್ಕಂ ಪತ್ತಿಸುವುದು.

ಗೆಕಾರಕ್ಕೆ—ತೊಡರ್ಗೆ, ಅದಿರ್ಗೆ ಎಂಬಂತೆ.

ಗುಂ ಎಂಬುದರ್ಕೆ—ಅಮರ್ಗುಂ, ನಿಮಿರ್ಗುಂ ಎಂಬಂತೆ.—

ದೀರ್ಘಾದಿಗೆ ಶಿಥಿಲಮಿಲ್ಲ—ಆರ್ದಂ, ಸಾರ್ದಂ, ಸೋರ್ದಂ, ನೇರ್ದಮೆಂಬಂತೆ.—

ಸೂತ್ರಂ.

Fleeting double consonants also inherent in some few words.

ಬರ್ದಿಲಂ ಸಗ್ಗಕ್ಕೆ ಪೆಸ
ಗರ್ದುಗೆಸೆವಮುರ್ದುವಳ್ಳಿ ಕಂಪಲರ್ದುದೆನ |
ಲ್ಕೆರ್ದೆವಾಯದಿರ್ಮುತ್ತೆ ಪೊದ
ಱ್ದಿರ್ದೆಯೆಂಬಿವು ಸಹಜಶಿಥಿಲವೃತ್ತಿಯನಾಳ್ಗುಂ || 45 ||

ಪದಚ್ಛೇದಂ.

ಬರ್ದಿಲಂ ಸಗ್ಗಕ್ಕೆ ಪೆಸಱ್, ಗರ್ದುಗು, ಎಸೆವ ಅಮುರ್ದುವಳ್ಳಿ, ಕಂಪಲರ್ದುದು ಎನಲ್ಕೆ, ಎರ್ದೆವಾಯ್, ಅದಿರ್ಮುತ್ತೆ, ಪೊದಱ್ದಿರ್ದೆ ಎಂಬಿವು ಸಹಜಶಿಥಿಲವೃತ್ತಿಯಂ ಆಳ್ಗುಂ.

ಯಥಾನ್ವಯಂ.

ಟೀಕು.

ಬರ್ದಿಲಂ=ಬರ್ದಿಲಮೆಂದು; ಸಗ್ಗಕ್ಕೆ=ಸ್ವರ್ಗಕ್ಕೆ; ಪೆಸಱ್=ಹೆಸರ್; ಗರ್ದುಗು=ಗರ್ದುಗು

ಎಂದು; ಎಸೆವ=ಒಪ್ಪುವ; ಅಮರ್ದುವಳ್ಳಿ=ಅಮರ್ದುವಳ್ಳಿಯೆಂದು; ಕಂಪಲರ್ದುದು=ಕಂಪಲ ರ್ದುದು ಎಂದು; ಎನಲ್ಕೆ=ಪೇಳಲ್ಕೆ; ಎರ್ದೆವಾಯ್=ಎರ್ದೆವಾಯೆಂದು; ಅದಿರ್ಮುತ್ತೆ=ಅದಿರ್ಮು ತ್ತೆಯೆಂದು; ಪೊದಟ್ಟಿ=ಪ್ರಸಿದ್ಧಿವಡೆದ; ಎರ್ದೆ=ಎರ್ದೆಯೆಂದು; ಎಂಬಿವು=ಎಂಬೀ ಶಬ್ದಂಗಳ್; ಸ ಹಜಶಿಥಿಲವೃತ್ತಿಯಂ=ಸಹಜವಾದ ಶಿಥಿಲದ ವೃತ್ತಿಯಂ; ಆಳ್ಗುಂ=ತಾಳ್ವುವು.

ವೃತ್ತಿ.

ಇದರ್ಕಿದೆ ವೃತ್ತಿ.

ಸೂತ್ರಂ.

Elision (ಲೋಪಂ) of the last letter (ವು) in certain nouns.

ನರವುಂ ನೆರವುಂ ದೇವರ
ಬರವುಂ ತೆರವುಂ ನೆಗೞ್ತೆಯೆೞ್ತಿರವುಂ ಸಂ |
ಚರಿಸುವ ನೊಳವುಂ ತಾವರೆ
ಬರ ಮತದಿಂದಂತ್ಯವರ್ಣಲೋಪಮನಾಳ್ಗುಂ || 46 ||

ಪದಚ್ಛೇದಂ.

ನರವುಂ, ನೆರವುಂ, ದೇವರ ಬರವುಂ, ತೆರವುಂ, ನೆಗೞ್ತೆಯ ಎೞ್ತಿರವುಂ, ಸಂಚರಿಸುವ ನೊಳವುಂ ತಾಂ ಅರೆಬರ ಮತದಿಂದೆ ಅಂತ್ಯವರ್ಣಲೋಪಮಂ ಆಳ್ಗುಂ.

ಯಥಾನ್ವಯಂ.

ಟೀಕು.

ನರವುಂ=ನರವು[1] ಎಂಬ ಶಬ್ದಮುಂ; ನೆರವುಂ=ನೆರವು ಎಂಬ ಶಬ್ದಮುಂ; ದೇವರ ಬರವುಂ= ದೇವರ ಬರವು ಎಂಬ ಶಬ್ದಮುಂ; ತೆರವುಂ=ತೆರವು ಎಂಬ ಶಬ್ದಮುಂ; ನೆಗೞ್ತೆಯ=ಪ್ರಸಿದ್ಧಿಯ; ಎೞ್ತಿರವುಂ=ಎೞ್ತಿರವು ಎಂಬ ಶಬ್ದಮುಂ; ಸಂಚರಿಸುವ ನೊಳವುಂ=ಸಂಚಾರವ ಮಾೞ್ಪ ನೊಳ ವು ಎಂಬ ಶಬ್ದಮುಂ; ತಾಂ=ತಾಂ; ಅರೆಬರ=ಕೆಲಂಬರ; ಮತದಿಂದೆ=ಮತದಿಂದೆ; ಅಂತ್ಯ=ಕಡೆ ಯಣ; ವರ್ಣ=ಅಕ್ಷರದ; ಲೋಪಮಂ=ಅದರ್ಶನಮಂ; ಆಳ್ಗುಂ=ತಾಳ್ಗುಂ.

ವೃತ್ತಿ.

ಈ ಪದಂಗಳ ಕಡೆಯ ವಕಾರಕ್ಕೆ ವಿಕಲ್ಪದಿಂ ಲೋಪಮುಂಟು.

ಪ್ರಯೋಗಂ.

ನರವು=ನರಂ; ನೆರಂ, ಬರಂ, ಎೞ್ತಿರಂ, ನೊಳಂ ಎಂದಱಿವುದು.

1) in Tamil நரம்பு

ಸೂತ್ರಂ.

Elision of the last letter in ಅಲ್ಲದೆ when it is emphasizing, and its Non-elision in ಅಲ್ಲದು (ಅಲ್ತು) when it is denying (or, with ಎ, questioning). (cf. S. 312).

ಪುದಿಗುಂ ನಿರ್ಧಾರಣದ
ಲ್ಲದೆಯೆಂಬ ದೆಕಾರದೆಡೆಗೆ ಪಿರಿದುಂ ಲೋಪಂ |
ಪುದಿಯದು ಲೋಪಂ ಪ್ರತಿಷೇ
ಧದೊಳಲ್ಲದುವೆಂಬ ಪದಮನಲ್ತೆನಲಕ್ಕುಂ || 47 ||

ಪದಚ್ಛೇದಂ.

ಪುದಿಗುಂ ನಿರ್ಧಾರಣದ ಅಲ್ಲದೆ ಎಂಬ ದೆಕಾರದ ಎಡೆಗೆ ಪಿರಿದುಂ ಲೋಪಂ; ಪುದಿಯದು ಲೋಪಂ ಪ್ರತಿಷೇಧದೊಳ್; ಅಲ್ಲದು ಎಂಬ ಪದಮಂ ಅಲ್ತು ಎನಲ್ ಅಕ್ಕುಂ.

ಅನ್ವಯಂ.

ನಿರ್ಧಾರಣದ ಅಲ್ಲದೆ ಎಂಬ ದೆಕಾರದ ಎಡೆಗೆ ಪಿರಿದುಂ ಲೋಪಂ ಪುದಿಗುಂ; ಪ್ರತಿಷೇಧದೊಳ್ ಲೋಪಂ ಪುದಿಯದು; ಅಲ್ಲದು ಎಂಬ ಪದಮಂ ಅಲ್ತು ಎನಲ್ ಅಕ್ಕುಂ.

ಟೀಕು.

ನಿರ್ಧಾರಣದ=ನಿರ್ಧಾರಣಾರ್ಥದ; ಅಲ್ಲದೆಯೆಂಬ ದೆಕಾರದ=ಅಲ್ಲದೆ ಎಂದು ಪೇಳ್ವ ದೆಕಾರದ; ಎಡೆಗೆ=ಸ್ಥಾನಕ್ಕೆ; ಪಿರಿದುಂ=ವಿಶೇಷವಾಗಿಯುಂ; ಲೋಪಂ=ಅದರ್ಶನಂ; ಪುದಿಗುಂ=ಪ್ರವೇಶವಾಗುವದು; ಪ್ರತಿಷೇಧದೊಳ್=ಪ್ರತಿಷೇಧದಲ್ಲಿ; ಲೋಪಂ=ಅದರ್ಶನಂ; ಪುದಿಯದು=ಪ್ರವೇಶವಾಗದು; ಅಲ್ಲದುವೆಂಬ ಪದಮಂ=ಅಲ್ಲದು ಎಂದು ಪೇಳ್ವ ಪದವಂ; ಅಲ್ತೆನಲ್=ಅಲ್ತು ಎಂದು ಹೇಳಲ್; ಅಕ್ಕುಂ=ಅಪ್ಪುದು.

ವೃತ್ತಿ.

ನಿರ್ಧಾರಣಾರ್ಥಮಂ ಪೇಳ್ವ ಅಲ್ಲದೆ ಎಂಬ ಶಬ್ದದ ದೆಕಾರಕ್ಕೆ ವಿಕಲ್ಪದಿಂ ಲೋಪಮುಂಟು; ಅಲ್ಲದು ಎಂಬ ಪ್ರತಿಷೇಧದೊಳ್ ದುಕಾರಕ್ಕೆ ಲೋಪಮಾಗಲೆನಲಾಗದು. ಅಲ್ಲದು ಎಂಬುದನಲ್ತೆಂದು ವಿಕಲ್ಪದಿನೆನಲಕ್ಕುಂ, ಅದರ್ಕೆ ಲಿಂಗ ವಚನವ್ಯವಸ್ಥೆಯಿಲ್ಲ.

ಪ್ರಯೋಗಂ.

ದೆಕಾರಲೋಪಕ್ಕೆ—ಗೊರವನಲ್ಲದೆ ಪೊಗೞೆನೆಂಬಲ್ಲಿ ಗೊರವನಲ್ಲ ಪೊಗೞೆನೆಂದುಂಟು.

ಪ್ರತಿಷೇಧದೊಳ್ ಲಿಂಗತ್ರಯಕ್ಕೆ—ಅವನಲ್ತು! ಅವಳಲ್ತು! ಅದಲ್ತು!

ವಚನತ್ರಯಕ್ಕೆ—ಓರ್ವನೆ ಗಂಡನಲ್ತೆ ಜಗತಿತಳದೊಳ್? ಈರ್ವರ್ತೋಳ್ಗಳಲ್ತೆ ಪತಿಗೆ ರಣದೊಳ್? ತೇಜೋನಿಧಿಕವಿನಿಳಯದೊಳೀಶರ್ಮಹಾತ್ಮರಲ್ತೆ?

ಸೂತ್ರಂ.

The letters ಯ, ರ, ಲ, ಣ, ನ, ಳ, ೞ, ಱ very often occur without the vowel ಅ (as ಯ್, ರ್, etc.) at the end of words.

ಯರಲಣನಳೞಱವರ್ಣೋ
ತ್ಕರಮೆ ವಲಂ ಪದದ ಕಡೆಯೊಳಸ್ವರವಿಧಿಯಂ |
ಪಿರಿದುಂ ತಾಳ್ದುಗುಮಿವನಱಿ
ವರೆ ಕನ್ನಡಗಬ್ಬದೊಳ್ತೊಡಂಕದೆ ಸಲ್ವರ್ || 48 ||

ಪದಚ್ಛೇದಂ.

ಯರಲಣನಳೞಱವರ್ಣೋತ್ಕರಮೆ ವಲಂ ಪದದ ಕಡೆಯೊಳ್ ಅಸ್ವರವಿಧಿಯಂ ಪಿರಿದುಂ ತಾಳ್ದುಗುಂ; ಇವಂ ಅಱಿವರೆ ಕನ್ನಡಗಬ್ಬದೊಳ್ ತೊಡಂಕದೆ ಸಲ್ವರ್.

ಯಥಾನ್ವಯಂ.

ಟೀಕು.

ಯ || ರ || ಲ || ಣ || ನ || ಳ || ೞ || ಱ=ಯಕಾರ, ರೇಫ, ಲಕಾರ, ಣಕಾರ, ನಕಾರ, ಳಕಾರ, ೞಕಾರ, ಱಕಾರಂಗಳೆಂಬ; ವರ್ಣ=ಅಕ್ಷರಂಗಳ; ಉತ್ಕರಮೆ=ಹೆಚ್ಚಿಗೆಯೆ; ವಲಂ=ನಿಶ್ಚಯವಾಗಿ; ಪದದ=ಪದಂಗಳ; ಕಡೆಯೊಳ್=ಅಂತ್ಯದಲ್ಲಿ; ಅಸ್ವರವಿಧಿಯಂ=ವ್ಯಂಜನವಿಧಿಯಂ; ಪಿರಿದುಂ=ಬಹುಳಮಾಗಿಯುಂ; ತಾಳ್ದುಗುಂ=ಧರಿಸುವುದು; ಇವಂ=ಈ ವ್ಯಂಜನಾಂತಶಬ್ದಂಗಳಂ; ಅಱಿವರೆ=ತಿಳಿವರೆ; ಕನ್ನಡಗಬ್ಬದೊಳ್=ಕರ್ಣಾಟಕಕಾವ್ಯಂಗಳಲ್ಲಿ; ತೊಡಂಕದೆ=ತೊಡಕಿಲ್ಲದೆ; ಸಲ್ವರ್=ಸಲುವಳಿಯಾಗಿರ್ಪರ್.

ವೃತ್ತಿ.

ಯಕಾರ ರೇಫ ಲಕಾರ ಣಕಾರ ನಕಾರ ಳಕಾರ ೞಕಾರ ಱಕಾರಂಗಳ್ ಕನ್ನಡದೊಳ್ ಪಿರಿದುಂ ವ್ಯಂಜನಾಂತಂಗಳಾಗಿ ಪದಂಗಳಾಗಿರ್ಪುವು; ಇವನಱಿದು ಪ್ರಯೋಗಿಸುವರ್ಗೆ ಕವಿತ್ವದೊಳ್ತೊಡಂಕಿಲ್ಲ.

ಪ್ರಯೋಗಂ.

ಯಕಾರಕ್ಕೆ—ಕೆಯ್, ಮೆಯ್, ಬೆಯ್, ಕೊಯ್, ಪಾಯ್, ಸಾಯ್, ಮಿಾಯ್, ಬಾಯ್.

ರೇಫೆಗೆ—ನಾರ್, ಬೇರ್, ತೇರ್, ಒರ್, ತೆಮರ್, ಬೆಮರ್, ಉಸಿರ್, ಮೊಸರ್, ತಳಿರ್, ಕುಳಿರ್.

ಲಕಾರಕ್ಕೆ—ಪಾಲ್, ಕೇಲ್, ಕೋಲ್, ಸಾಲ್, ನೂಲ್, ಕಲ್, ನೆಲ್, ಬಿಲ್, ಕವಲ್, ಅವಲ್, ಕಂದಲ್, ತಂದಲ್.

ಣಕಾರಕ್ಕೆ—ಪವಣ್, ನಾಣ್, ಜಾಣ್, ಮಾಣ್, ಗೇಣ್, ಕಣ್, ಮಣ್, ಪೂಣ್.

ನಕಾರಕ್ಕೆ—ಪೊನ್, ಬೆನ್, ಏನ್, ಜೇನ್, ಸೀನ್, ಈನ್, ನೀನ್, ಬಾನ್, ಪೇನ್.

ಳಕಾರಕ್ಕೆ—ಒಳ್, ತಳ್, ಮಿದುಳ್, ಕರುಳ್, ಕುರುಳ್, ತಿರುಳ್, ಮುಗುಳ್.

ಱಕಾರಕ್ಕೆ—(cf. s. S. 42) ಎಱ್, ಬಸಿಱ್, ಕೆಸಱ್, ಪೆಸಱ್, ನೇಸಱ್, ಎಚ್ಚಱ್, ಪೊಱವಾಱ್ (s. S. 113), ಬೀಱ್, ಜಾಱ್, ತೇಱ್.

ಱಿಕ್ಕೆ—ಎಸೞ್, ಅಗೞ್, ನೆಗೞ್, ಪೊಗೞ್.

ಪಿರಿದುಮೆಂಬುದಱಿಂ ಕೆಲವಱೊಳ್ವ್ಯಂಜನಮಿಲ್ಲ, ಅವಾವೆಂದೊಡೆ—ಕರು, ತಣ್ಣು, ಅನು, ತಳು, ಕಳು, ಕಱು, ತುಱು, ಪೞು, ಪುೞು—ಇವು ಮೊದಲಾದುವು. ಯಕಾರ ಲಕಾರಂಗಳ್ಗೆ ನೋಡಿ ಕೊಳ್ವುದು.

ಸೂತ್ರಂ.

The joining of two or more letters to each other is called (euphonic) Combination (ಸಂಧಿ). Consonants without any vowel (S. 48) enter the following letter.

ಎರಡುಂ ಪಲವುಂ ವರ್ಣಂ
ಪರಸ್ಪರಂ ಕೂಡುವಂದಮದು ಸಂಧಿ ವಲಂ |
ಸ್ವರರಹಿತವ್ಯಂಜನಮವು
ಪರವರ್ಣಮನೈದುತಿರ್ಪುವಾ ಸಂಹಿತೆಯೊಳ್ || 49 ||

ಪದಚ್ಛೇದಂ.

ಎರಡುಂ ಪಲವುಂ ವರ್ಣಂ ಪರಸ್ಪರಂ ಕೂಡುವ ಅಂದಂ ಅದು ಸಂಧಿ, ವಲಂ! ಸ್ವರರಹಿತ ವ್ಯಂಜನಂ ಅವು ಪರವರ್ಣಮುಂ ಐದುತೆ ಇರ್ಪುವು ಆ ಸಂಹಿತೆಯೊಳ್.

ಅನ್ವಯಂ.

ಎರಡುಂ ಪಲವುಂ ವರ್ಣಂ ಪರಸ್ಪರಂ ಕೂಡುವಂದಂ ಅದು ಸಂಧಿ, ವಲಂ! ಆ ಸಂಹಿತೆಯೊಳ್ ಸ್ವರರಹಿತವ್ಯಂಜನಂ ಅವು ಪರವರ್ಣಮುಂ ಐದುತೆ ಇರ್ಪುವು.

ಟೀಕು.

ಎರಡುಂ=ಎರಡಕ್ಷರಂಗಳುಂ; ಪಲವುಂ=ಹಲವಕ್ಷರಂಗಳುಂ; ಪರಸ್ಪರಂ=ಅನ್ಯೋನ್ಯವಾಗಿ; ಕೂಡುವಂದಂ=ಸಂಯೋಗವಾಗುವಂದಂ; ಅದು=ಅದು; ಸಂಧಿ=ಸಂಧಿಯೆನಿಪುದು; ವಲಂ=ನಿಶ್ಚಯಂ; ಆ ಸಂಹಿತೆಯೊಳ್=ಆ ಸಂಧಿಯಲ್ಲಿ; ಸ್ವರರಹಿತ=ಸ್ವರಹೀನವಾದ; ವ್ಯಂಜನಂ=ವ್ಯಂಜನಾಕ್ಷರಂ; ಅವು=ಅವು; ಪರವರ್ಣಮುಂ=ಮುಂದಣಕ್ಷರವಂ; ಎಯ್ದುತೆ ಇರ್ಪುವು=ಕೂಡುತ್ತಿರ್ಪುವು.

ವೃತ್ತಿ.

ಎರಡಕ್ಕರಂ ಮೇಣ್ಪಲವಕ್ಕರಂ ತಮ್ಮೊಳನ್ಯೋನ್ಯಮಾಗಿ ಕೂಡುವುದು ಸಂಧಿಯೆನಿಸುಗುಂ. ಆ ಸಂಧಿಯಲ್ಲಿ ಸ್ವರರಹಿತವ್ಯಂಜನಂಗಳ್ಮುಂದಣಕ್ಕರಮನೈದುವುವು.

ಪ್ರಯೋಗಂ.

ಸ್ವರಯುಕ್ತವ್ಯಂಜನಕ್ಕೆ—ಕೂರ್ತು ಈವಂ=ಕೂರ್ತೀವಂ; ಎನ್ನ ಅರಸಂ=ಎನ್ನರಸಂ; ಮುಂನೆ ಇಱಿವಂ=ಮುಂನಿಱಿವಂ.

ಸ್ವರರಹಿತವ್ಯಂಜನಕ್ಕೆ—ಜಾಣ್ ಉಂಟು=ಜಾಣುಂಟು; ಕುರುಳ್ ಕೊಂಕಾಯ್ತು=ಕುರುಳ್ಕೊಂಕಾಯ್ತು.

ಸೂತ್ರಂ.

The two kinds of euphonic Combination, viz. Internal (the joining of theme and affixes, S. 35) and Final (the joining of a word to the end of another).

ಪದಮಧ್ಯಂ ಪದದಂತ್ಯಂ
ವಿದಗ್ಧರಿಂ ಸಂಧಿವಿಷಯಮೆರಡಕ್ಕುಮಿಳಾ |
ವಿದಿತಪ್ರಕೃತಿಪ್ರತ್ಯಯ
ಮೊದವಿದ ಪದಯುಗದ ಬೆರಕೆ ಬೇಡಿರ್ದುದಱಿಂ || 50 ||

ಪದಚ್ಛೇದಂ.

ಪದಮಧ್ಯಂ ಪದದ ಅಂತ್ಯಂ ವಿದಗ್ಧರಿಂ ಸಂಧಿವಿಷಯಂ ಎರಡು ಅಕ್ಕುಂ; ಇಳಾವಿದಿತಪ್ರಕೃತಿಪ್ರತ್ಯಯಂ, ಒದವಿದ ಪದಯುಗದ ಬೆರಕೆ ಬೇಡಿ ಇರ್ದುದಱಿಂ.

ಅನ್ವಯಂ.

ಇಳಾವಿದಿತಪ್ರಕೃತಿಪ್ರತ್ಯಯಂ (ಮತ್ತಂ) ಒದವಿದ ಪದಯುಗದ ಬೆರಕೆ ಬೇಡಿರ್ದುದಱಿಂ ಪದಮಧ್ಯಂ ಪದದಂತ್ಯಂ ವಿದಗ್ಧರಿಂ ಸಂಧಿವಿಷಯಂ ಎರಡು ಅಕ್ಕುಂ.

ಟೀಕು.

ಇಳಾವಿದಿತಪ್ರಕೃತಿಪ್ರತ್ಯಯಂ=ಭೂಮಿಯಲ್ಲಿ ಪ್ರಸಿದ್ಧವಾದ ಪ್ರಕೃತಿ ಪ್ರತ್ಯಯಂಗಳ್; ಒದವಿದ ಪದಯುಗದ=ಪ್ರಾಪ್ತಿಸಿದ ಪದಂಗಳೆರಡಱ; ಬೆರಕೆ=ಸಂಯೋಗಂ; ಬೇಡಿರ್ದುದಱಿಂ=ಬೇಕಾಗಿರ್ದುದಱಿಂದೆ; ಪದಮಧ್ಯಂ=ಪದಮಧ್ಯಸಂಧಿಯೆಂದು; ಪದದಂತ್ಯಂ=ಪದಾಂತ್ಯಸಂಧಿಯೆಂದು; ವಿದಗ್ಧರಿಂ=ವಿದ್ವಾಂಸರಿಂದೆ; ಸಂಧಿವಿಷಯಂ=ಸಂಧಿಪ್ರಯೋಜನಂ; ಎರಡು=ಎರಡು ತೆಱಂ; ಅಕ್ಕುಂ=ಅಪ್ಪುದು.

ವಿಚಾರಂ.

ಪ್ರಕೃತಿ ಪ್ರತ್ಯಯಂಗಳ್ಕೂಡುವುದು ಪದಮಧ್ಯಸಂಧಿಯೆನಿಪುದು; ಪದಂಗಳೆರಡು ಕೂಡುವಲ್ಲಿ ಮೊದಲ ಪದದ ಕಡೆಯೊಳಪ್ಪುದು ಪದಾಂತ್ಯಸಂಧಿಯೆನಿಪುದು.

ವೃತ್ತಿ.

ಪ್ರಕೃತಿ ಪ್ರತ್ಯಯಂಗಳ ಮಧ್ಯಮುಂ ಪೂರ್ವಪದದ ಕಡೆಯುಂ ಪರಪದದ ಮೊದಲುಂ ಕೂಡೆ, ಪದಮಧ್ಯಸಂಧಿ ಪದಾಂತ್ಯಸಂಧಿ ಎಂದು, ಸಂಧಿವಿಷಯಮಿರ್ತೆಱಂ.

ಪ್ರಯೋಗಂ.

ಪದಮಧ್ಯಸಂಧಿಗೆ ನಾಮವಿಭಕ್ತಿಯಲ್ಲಿ—ಮಾತು+ಅಮ್=ಮಾತಂ; ಮಾತು+ಇಮ್=ಮಾತಿಂ; ಮಾತು+ಇಂಗೆ=ಮಾತಿಂಗೆ; ಮಾತಿನ+ಅತ್ತಣಿಂ=ಮಾತಿನತ್ತಣಿಂ; ಮಾತು+ಇನ=ಮಾತಿನ; ಮಾತಿನ+ಒಳ್=ಮಾತಿನೊಳ್;—

ಕ್ರಿಯಾವಿಭಕ್ತಿಯಲ್ಲಿ (ಆಖ್ಯಾತ-)—ನುಡಿದ+ಅಮ್=ನುಡಿದಂ; ನುಡಿದ+ಅರ್=ನುಡಿದರ್; ನುಡಿದ+ಅಯ್=ನುಡಿದಯ್; ನುಡಿದ+ಇರ್=ನುಡಿದಿರ್; ನುಡಿದ+ಎನ್=ನುಡಿದೆನ್; ನುಡಿದ+ಎವು=ನುಡಿದೆವು.

ಪದಾಂತ್ಯಸಂಧಿಗೆ ನಾಮಪದಂಗಳಲ್ಲಿ—ಅವನ+ಆಳ್ತನಂ=ಅವನಾಳ್ತನಂ; ಪಾಪದ+ಅಂಡಲೆ=ಪಾಪದಂಡಲೆ;—

ಕ್ರಿಯಾಪದಂ ಬೆರಕೆಯಾದಲ್ಲಿ—ನುಡಿದರ್+ಅವರ್=ನುಡಿದರವರ್; ಬೆಸಸಿದೆವು+ಒಳ್ಪಂ=ಬೆಸಸಿದೆವೊಳ್ಪಂ. ಇಂತಱಿವುದು.

ಸೂತ್ರಂ.

The section on letters finished.

ಇದು ಪೂರ್ವಪ್ರಕರಣಮಿಂ
ತಿದಱೊಳ್ಸಾಕಲ್ಯಸಂಜ್ಞೆ ಪೇೞೆವೆನಲ್ಬೇ |
ಡುದಿತಪ್ರಕರಣಗಣಸೂ
ತ್ರದಿಷ್ಟದಿಂ ಸಂಜ್ಞೆಯೊಡನೆ ಪೇೞಲ್ಪಡೆಗುಂ || 51 ||

ಪದಚ್ಛೇದಂ.

ಇದು ಪೂರ್ವಪ್ರಕರಣಂ. ಇಂತು ಇದಱೊಳ್ ಸಾಕಲ್ಯಸಂಜ್ಞೆ ಪೇೞೆವು ಎನಲ್ ಬೇಡ! ಉದಿತಪ್ರಕರಣಗಣಸೂತ್ರದ ಇಷ್ಟದಿಂ ಸಂಜ್ಞೆಯೊಡನೆ ಪೇೞಲ್ ಪಡೆಗುಂ.

ಯಥಾನ್ವಯಂ.

ಟೀಕು.

ಇದು=ಇದು; ಪೂರ್ವಪ್ರಕರಣಂ=ಮೊದಲ ಪ್ರಕರಣಂ; ಇಂತು=ಹೀಂಗೆ; ಇದಱೊಳ್=ಈ ಪ್ರಕರಣದಲ್ಲಿ; ಸಾಕಲ್ಯಸಂಜ್ಞೆ=ಸಮಸ್ತಸಂಜ್ಞೆಗಳ್; ಪೇೞೆವೆನಲ್ಬೇಡ=ಹೇಳಿತಿಲ್ಲೆನ ಬೇಡ; ಉದಿತ ಪ್ರಕರಣಗಣಸೂತ್ರದ=ಉಂಟಾಗಲ್ಪಟ್ಟ ಪ್ರಕರಣದ ಸಮೂಹದ ಸೂತ್ರಂಗಳ; ಇಷ್ಟದಿಂ=ಇಷ್ಟದಿಂದೆ (ಎಂದೊಡೆ ಸಹಾಯದಿಂದೆ); ಸಂಜ್ಞೆಯೊಡನೆ=ಸಂಜ್ಞೆಯ ಕೂಡೆ (ಎಂದೊಡೆ ಸೂಚನೆಯಾಗಿ ಸಮಸ್ತ ಸಂಜ್ಞೆಗಳ್); ಪೇೞಲ್ಪಡೆಗುಂ=ಹೇಳಲ್ಪಟ್ಟುವು.

ವೃತ್ತಿ.

ಸಂಜ್ಞಾಪ್ರಕರಣಂ ಸಂಪೂರ್ಣಂ.

|| ಸಂಜ್ಞಾಪ್ರಕರಣಂ ಸಮಾಪ್ತಂ. ||

## 2. ಸಂಧಿಪ್ರಕರಣಂ. Second Section: Euphonic Combination.

### I. Combination of Vowels.

ಸೂತ್ರಂ.

ಸ್ವರಮಿದಿರೊಳಿರೆ ವಿಭಕ್ತಿ
ಸ್ವರಕಂ ಪ್ರಕೃತಿಸ್ವರಕ್ಕಮಕ್ಕುಂ ಲೋಪಂ |
ವರಸಂಸ್ಕೃತಕರ್ಣಾಟಕ
ಮೆರಡಱೊಳಂ ನಾಮರೂಢಿಯಱಿಯದ ಪಕ್ಷಂ || 52 ||

Elision of vowels (ಅ, ಇ, ಉ, ಎ) at the end of inflected and uninflected words (whether Sanskṛt or Canarese) before vowels is very frequent, but ought not to occur when the meaning would become uncertain (cf. S. 61).

ಪದಚ್ಛೇದಂ.

ಸ್ವರಂ ಇದಿರೊಳ್ ಇರೆ, ವಿಭಕ್ತಿಸ್ವರಕಂ ಪ್ರಕೃತಿಸ್ವರಕ್ಕಂ ಅಕ್ಕುಂ ಲೋಪಂ, ವರಸಂಸ್ಕೃತ ಕರ್ಣಾಟಕಂ ಎರಡಱೊಳಂ, ನಾಮರೂಢಿ ಅಱಿಯದ ಪಕ್ಷಂ.

ಅನ್ವಯಂ.

ವರಸಂಸ್ಕೃತಕರ್ಣಾಟಕಂ ಎರಡಱೊಳಂ— ನಾಮರೂಢಿ ಅಱಿಯದ ಪಕ್ಷಂ—ಸ್ವರಂ ಇದಿರೊಳ್ ಇರೆ, ವಿಭಕ್ತಿಸ್ವರಕಂ ಪ್ರಕೃತಿಸ್ವರಕ್ಕಂ ಲೋಪಂ ಅಕ್ಕುಂ.

ಟೀಕು.

ವರ=ಶ್ರೇಷ್ಠವಾದ; ಸಂಸ್ಕೃತಕರ್ಣಾಟಕಂ=ಸಂಸ್ಕೃತಕರ್ಣಾಟಕಂಗಳೆಂಬ; ಎರಡಱೊಳಂ= ಎರಡು ಶಬ್ದದಲ್ಲಿಯುಂ; ನಾಮರೂಢಿ=ನಾಮಪ್ರಸಿದ್ಧಿಯು; ಅಱಿಯದ ಪಕ್ಷಂ=ಕೆಡದ ಪಕ್ಷದಲ್ಲಿ; ಸ್ವರಂ=ಸ್ವರಾಕ್ಷರಂ; ಇದಿರೊಳ್=ಮುಂದುಗಡೆಯಲ್ಲಿ; ಇರೆ=ಇರೆ; ವಿಭಕ್ತಿಸ್ವರಕಂ=ವಿಭಕ್ತಿಸ್ವರಕ್ಕೆಯುಂ; ಪ್ರಕೃತಿಸ್ವರಕ್ಕಂ=ಪ್ರಕೃತಿಸ್ವರಕ್ಕೆಯುಂ; ಲೋಪಂ=ಅದರ್ಶನಂ; ಅಕ್ಕುಂ=ಅಪ್ಪುದು.

ವೃತ್ತಿ.

ಸ್ವರಂ ಪರಮಾಗೆ, ಸಂಸ್ಕೃತದ ಕನ್ನಡದ ವಿಭಕ್ತಿಸ್ವರಕ್ಕಂ ಪ್ರಕೃತಿಯ ಸಹಜ ಸ್ವರಕ್ಕಂ, ನಾಮಪ್ರಸಿದ್ಧಿ ಕೆಡದ ಪಕ್ಷಂ, ಲೋಪಮಕ್ಕುಂ.

ಪ್ರಯೋಗಂ.

ಸಂಸ್ಕೃತಪ್ರಕೃತಿಯ ವಿಭಕ್ತಿಸ್ವರಲೋಪಕ್ಕೆ—ಕ್ರಮದೆ+ಆಯ್ತು=ಕ್ರಮದಾಯ್ತು; ಇಂದ್ರಂಗೆ+ಐರಾವತಂ=ಇಂದ್ರಂಗೈರಾವತಂ; ಗಿರಿಯತ್ತಣಿಂದೆ+ಇೞಿದಂ= ಗಿರಿಯತ್ತಣಿಂದಿೞಿದಂ; ಗೃಹದಲ್ಲಿ+ಇರ್ದಂ=ಗೃಹದಲ್ಲಿರ್ದಂ; ಈಶ್ವರನ+ಒಲವು= ಈಶ್ವರನೊಲವು.

ವಿಭಕ್ತ್ಯಾದಿ ಕೂಡುವೆಡೆ ಸಂಸ್ಕೃತಪ್ರಕೃತಿಸ್ವರಲೋಪಕ್ಕೆ—ಬುಧ+ಅರ್=ಬುಧರ್; ಉದ್ಧತ+ಅರ್=ಉದ್ಧತರ್; ದೇವ+ಎಂಬರ್=ದೇವೆಂಬರ್; ರಾಗ+ಇಸು=ರಾಗಿಸು (cf. S. 54); ಭಂಗ+ಇಸು=ಭಂಗಿಸು; ಭಾವ+ಇಸು=ಭಾವಿಸು. ಇಂತು ಱಿದುವನಱಿವುದು.—

ಕರ್ಣಾಟಕಪ್ರಕೃತಿಯ ವಿಭಕ್ತಿಸ್ವರಲೋಪಕ್ಕೆ—ನೆಲದಿಂದೆ+ಉಣ್ಬಂ=ನೆಲದಿಂದುಣ್ಬಂ; ಲೇಸಿಂಗೆ+ಒಡೆಯಂ=ಲೇಸಿಂಗೊಡೆಯಂ; ಮರದತ್ತಣಿಂದೆ+ಇೞಿದಂ=ಮರದತ್ತಣಿಂದಿೞಿದಂ; ಚಲದ+ಆಣ್ಮಂ=ಚಲದಾಣ್ಮಂ; ಪೊಲದಲ್ಲಿ+ಇರ್ದಂ=ಪೊಲದಲ್ಲಿರ್ದಂ; ಪೊಲದೆ+ಎೞ್ತಂದಂ=ಪೊಲದೆೞ್ತಂದಂ.—

ಆಖ್ಯಾತವಿಭಕ್ತಿಸ್ವರಲೋಪಕ್ಕೆ—ಮಾಡಿದೆವು+ಒಳ್ಪಂ=ಮಾಡಿದೆವೊಳ್ಪಂ;—

ಕ್ರಿಯಾವಿಭಕ್ತ್ಯಾದೇಶಮಾದ ಸ್ವರದ ಲೋಪಕ್ಕೆ—ಕೂಡಿ+ಇರ್ದಂ=ಕೂಡಿರ್ದಂ; ಪಸಿದು+ಉಣ್ಡಂ=ಪಸಿದುಣ್ಡಂ.—

ಕರ್ನಾಟಕಪ್ರಕೃತಿಸ್ವರಲೋಪಕ್ಕೆ 1) ಅಕಾರಕ್ಕೆ—ಅರಸ+ಆಳ್=ಅರಸಾಳ್; ಅಚ್ಚ+ಆನೆ=ಅಚ್ಚಾನೆ; ಜಿಯ+ಎಂಬಂ=ಜಿಯೆಂಬಂ; ಬಡಬಡ+ಆದಂ=ಬಡಬಡಾದಂ; ಸಾವಂತ+ಓಲಗಂ=ಸಾವಂತೋಲಗಂ. 2) ಇಕಾರಕ್ಕೆ—ದಾಳಿಟ್ಟಂ, ಹಂದಿಟ್ಟಂ, ಸವದಿಟ್ಟಂ. 3) ಎಕಾರಕ್ಕೆ—ಸೇಸಿಕ್ಕಿದಂ, ಮುಡಿಗಿಕ್ಕಿದಂ, ಮತ್ತೆಲ್ಲಂ, ಮುನ್ನಱಿವಂ. 4)ಉಕಾರಕ್ಕೆ—ಸುತ್ತೊಲೆ, ಹತ್ತೆಂಟು, ಲೇಸೆಲ್ಲಂ, ಸೊವಡೊಂದು; ನೋಡಿದಂ, ಮಾಡಿದಂ, ಕೂಡಿದಂ.—

ನಾಮಂ ಕೆಡುವೊಡೆ ಸಂಸ್ಕೃತಕರ್ಣಾಟಕದ ಪ್ರಕೃತಿಸ್ವರಕ್ಕೆ ಲೋಪಮಿಲ್ಲ—ಪಟು+ಏಕವಾಕ್ಯಂ=ಪಟುವೇಕವಾಕ್ಯಂ; ವಿಧು+ಇದು=ವಿಧುವಿದು; ಮಡು+ಇದು=ಮಡುವಿದು; ಕುಡು+ಇಲ್ಲ=ಕುಡುವಿಲ್ಲ.

ಸೂತ್ರಂ.

Insertion of ಯ after ಆ, ಇ, ಈ, ಓ, ಐ, ಎ, ಏ (for ಇ and ಎ cf. S. 52), and after ಅ (cf. S. 52) when it is the affix of the Genitive (S. 117) and followed by the emphasizing ಎ (cf. S. 47; 56).

ಆತ್ವದಿನಿವರ್ಣದಿಂ ಮ
ತ್ತೋತ್ವದಿನೈತ್ವದಿನೆವರ್ಣದಿಂ ಮುಂದಕ್ಕುಂ |
ಯತ್ವಮದವಧಾರಣೆ ಪರ
ಮತ್ವಂ ಪಿಂತಾಗೆ ಷಷ್ಠಿನಿಯಮದೆ ಯತ್ವಂ || 53 ||

ಪದಚ್ಛೇದಂ.

ಆತ್ವದಿಂ ಇವರ್ಣದಿಂ ಮತ್ತೆ ಓತ್ವದಿಂ ಐತ್ವದಿಂ ಎವರ್ಣದಿಂ ಮುಂದೆ ಅಕ್ಕುಂ ಯತ್ವಂ ಅದು; ಅವಧಾರಣೆ ಪರಂ, ಅತ್ವಂ ಪಿಂತು ಆಗೆ ಷಷ್ಠಿನಿಯಮದೆ, ಯತ್ವಂ.

ಯಥಾನ್ವಯಂ.

ಟೀಕು.

ಆ ಸಂಹಿತೆಯೊಳೆಂಬುದನುವರ್ತನೆ (s. 49)— ಅತ್ವದಿಂ=ಅಕಾರದಿಂದೆ; ಇವರ್ಣದಿಂ=ಇ ಈ ಎಂಬ ಸವರ್ಣದಿಂದೆ; ಮತ್ತೆ=ಬಳಿಕಂ; ಓತ್ವದಿಂ=ಓಕಾರದಿಂದೆ; ಐತ್ವದಿಂ=ಐಕಾರದಿಂದೆ; ಎ ವರ್ಣದಿಂ=ಎ ಏ ಎಂಬ ಸವರ್ಣದಿಂ; ಮುಂದೆ=ಮುಂದುಗಡೆಯಲ್ಲಿ; ಯತ್ವಂ=ಯಕಾರಂ; ಅದು= ಅದು; ಅಕ್ಕುಂ=ಅಪ್ಪುದು; ಅವಧಾರಣೆ (ಅವಧಾರಣೆ+ಎ)=ನಿರ್ಧಾರಣೆಯ ಎಕಾರಂ; ಪರಂ= ಮುಂದಣದು; ಅತ್ವಂ=ಅಕಾರಂ; ಪಿಂತು=ಹಿಂದು; ಆಗೆ=ಆಗೆ; ಷಷ್ಟಿ=ಷಷ್ಟಿಯೆಂಬ ವಿಭಕ್ತಿಯ; ನಿಯಮದೆ=ಕಟ್ಟಿನಿಂದೆ; ಯತ್ವಂ=ಯಕಾರಂ ಅಪ್ಪುದು.

ವೃತ್ತಿ.

|| ಆ || ಇ || ಈ || ಓ || ಐ || ಎ || ಏ || ಎಂಬಿವರ್ಕೆ ಸ್ವರಂ ಪರಮಾಗೆ, ನಡುವೆ ಯತ್ವಮಕ್ಕುಂ; ಷಷ್ಟಿಯಕಾರಂ (ಷಷ್ಟಿಯ ಅಕಾರಂ) ಪೆಱಗಿರೆ, ಅವಧಾರಣೈಯೆಕಾರಂ ಪರದೊಳಿರೆ, ನಿಯಮದಿಂ ಯತ್ವಮಕ್ಕುಂ.

ಪ್ರಯೋಗಂ.

ಆಕಾರಕ್ಕೆ—ಆಯಿರ್ದ ಮಾಱ್ಕೆ ಕಾಯಲುಂ.

ಇತ್ವಕ್ಕೆ—ಬಲಿಯುಂ; ಕವಿಯಾರ್; ನಿಷ್ಕಾಮಿಯಾವಳ್; ಪಿಡಿಯೆಂದು.

ಈಕಾರಕ್ಕೆ—ಈಯಲ್ಬಂದತ್ತು; ಶ್ರೀಯುಂ; ಸ್ತ್ರೀಯೆಂಬ.

ಓಕಾರಕ್ಕೆ—ಜೋಯೆಂದು ಪಾಡಿದರ್; ಭೋಯೆನಲುಂ; ವಿಧೋಯೆನಲುಂ; ನೋಯಿಸಿದಂ; ತೋಯಲ್.

ಐಕಾರಕ್ಕೆ—ದೈಯೆಂದುಂ; ರೈಯೊಂದವಿತ್ತು; ಭೈಭೈಯೆಂಬಿನಂ.

ಎಕಾರಕ್ಕೆ—ತೊರೆಯುಂ [M. A. ವೊಱೆಯುಂ]; ಪಸೆಯಿರ್ದಂ; ನಡೆನಡೆಯೆಂದು.

ಏಕಾರಕ್ಕೆ—ತೇಯಿಸಿದಂ; ಮೇಯಿಸಿದಂ; ಏಯೆಂದು; ಉಫೇಯೆಂದು.

ಅವಧಾರಣೈಗೆ—ಆತನಯೆ ತೋರದೊಡೆಗಳಿವು; ಅವಳಯೆ, ಅದಱಯೆ.

ಸೂತ್ರಂ.

Further insertion of ಯ between Sanskṛt or Canarese (s. S. 157) themes with final ಅ and the affix ಇಸು (cf. Ss. 228; 231; also Ss. 52; 74), and after imitative sounds with final ಅ (cf. S. 61).

ಸದಮಳಸಂಸ್ಕೃತಕರ್ಣಾ
ಟದದಂತಪ್ರಕೃತಿಗಳ್ಗೆಸುಪ್ರತ್ಯಯಮಿಂ |
ತಿದಿರಾಗೆ ಯತ್ವಮನುಕೃತಿ
ಪದಕಂ ಮುಂದನುಕೃತಿಸ್ವರಂ ನಿಲೆ ಯತ್ವಂ || 54 ||

## ಪದಚ್ಛೇದಂ.

ಸದಮಳಸಂಸ್ಕೃತಕರ್ಣಾಟದ ಅದಂತಪ್ರಕೃತಿಗಳ್ಗೆ ಇಸುಪ್ರತ್ಯಯಂ ಇಂತು ಇದಿರ್ ಆಗೆ, ಯತ್ವಂ; ಅನುಕೃತಿಪದಕಂ ಮುಂದೆ ಅನುಕೃತಿಸ್ವರಂ ನಿಲೆ, ಯತ್ವಂ.

## ಯಥಾನ್ವಯಂ.

## ಟೀಕು.

ಸತ್=ಲೇಸಾದ; ಅಮಳ=ನಿರ್ಮಲವಾದ; ಸಂಸ್ಕೃತ=ಸಂಸ್ಕೃತದ; ಕರ್ಣಾಟದ=ಕನ್ನಡದ; ಅದಂತಪ್ರಕೃತಿಗಳ್ಗೆ=ಅಕಾರಾಂತವಾದ ಪ್ರಕೃತಿಗಳ್ಗೆ; ಇಸುಪ್ರತ್ಯಯಂ=ಇಸು ಎಂಬ ಪ್ರತ್ಯಯಂ; ಇಂತು=ಹೀಂಗೆ; ಇದಿರಾಗೆ=ಪರಮಾಗೆ; ಯತ್ವಂ=ಯಕಾರವಪ್ಪುದು; ಅನುಕೃತಿಪದಕಂ=ಅನುಕರಣಪದಕ್ಕೆಯುಂ; ಮುಂದೆ=ಮುಂದುಗಡೆಯಲ್ಲಿ; ಅನುಕೃತಿಸ್ವರಂ=ಅನುಕರಣವಂ ಪೇಳ್ವ ಸ್ವರಂ; ನಿಲೆ=ನೆಲಸೆ; ಯತ್ವಂ=ಯಕಾರವಪ್ಪುದು.

## ವೃತ್ತಿ.

ಅಮಳತರಸಂಸ್ಕೃತಕರ್ಣಾಟದಕಾರಾಂತಪ್ರಕೃತಿಗಳ್ಗೆ ಇಸುಪ್ರತ್ಯಯಂ ಪರಮಾಗೆ, ನಡುವೆಯತ್ವಮಕ್ಕುಂ; ಅದಂತಮಪ್ಪನುಕೃತಿಪದಕ್ಕೆ ಅನುಕೃತಿಸ್ವರಂ ಪರಮಾಗೆ, ಯತ್ವಂ.

## ಪ್ರಯೋಗಂ.

ಸಂಸ್ಕೃತಶಬ್ದದಲ್ಲಿ—ಶುದ್ಧ+ಇಸಿದಂ=ಶುದ್ಧಯಿಸಿದಂ; ಕಾರ+ಇಸಿದಂ=ಕಾರಯಿಸಿದಂ; ನಿರ್ಗ+ಇಸಿದಂ=ನಿರ್ಗಯಿಸಿದಂ; ಪೂರ+ಇಸಿದಂ=ಪೂರಯಿಸಿದಂ.

ಕನ್ನಡಶಬ್ದದಲ್ಲಿ—ಒರ+ಇಸಿದಂ=ಒರಯಿಸಿದಂ; ತೆರಯಿಸಿದಂ; ತೆಲ್ಲಯಿಸಿದಂ; ಮೇಳಯಿಸಿದಂ.

ಅನುಕೃತಿಸ್ವರಕ್ಕೆ—ಪಟಪಟಯೆಂದಾರಿಕಲ್ಗಳುದಿರ್ದುವು ನಭದಿಂ; ಗುಟುಗುಟುಗಟುಗಟುಯೆನುತುಂ ಪರಿವವೊನಲ್ ಸೊಗಯಿಸುಗುಂ (see s. S. 23, No. 109; 117).

## ಸೂತ್ರಂ.

ಅವತರಿಸಿರ್ಕುಮುವರ್ಣದ
ಋವರ್ಣದೋತ್ತೌತ್ವದಗ್ರದೊಳ್ಸ್ವರಮಿರೆ ವ |
ತ್ವವಿಧಾನಂ ಬಹುಳತೆ ಯ
ತ್ವವತ್ವದೊಳ್ಸಂಸ್ಕೃತಕ್ಕೆ ತಾನಿಲ್ಲೆಂದುಂ || 55 ||

Insertion of ವ after ಉ (see the end of S. 52), ಊ, ಋ, ೠ, ಓ, ಔ (ಇ, ಈ), and remark on S. 53 regarding ಓ (ಒ). In Canarese words arbitrariness regarding the insertion of ಯ or ವ may happen, but not in Sanskṛt words.

## ಪದಚ್ಛೇದಂ.

ಅವತರಿಸಿ ಇರ್ಕುಂ, ಉವರ್ಣದ ಋವರ್ಣದ ಓತ್ವೌತ್ವದ ಅಗ್ರದೊಳ್ ಸ್ವರಂ ಇರೆ, ವತ್ವ ವಿಧಾನಂ; ಬಹುಳತೆ ಯತ್ವವತ್ವದೊಳ್ ಸಂಸ್ಕೃತಕ್ಕೆ ತಾಂ ಇಲ್ಲ ಎಂದುಂ.

## ಅನ್ವಯಂ.

ಉವರ್ಣದ ಋವರ್ಣದ ಓತ್ವೌತ್ವದ ಅಗ್ರದೊಳ್ ಸ್ವರಂ ಇರೆ, ವತ್ವವಿಧಾನಂ ಅವತರಿಸಿ ಇರ್ಕುಂ; ಸಂಸ್ಕೃತಕ್ಕೆ ಯತ್ವವತ್ವದೊಳ್ ಬಹುಳತೆ ತಾಂ ಎಂದುಂ ಇಲ್ಲ.

## ಟೀಕು.

ಉವರ್ಣದ=ಉ ಊ ಎಂಬ ಸವರ್ಣದ; ಋವರ್ಣದ=ಋ ೠ ಎಂಬ ಸವರ್ಣದ; ಓತ್ವೌತ್ವದ=ಓಕಾರ ಔಕಾರದ; ಅಗ್ರದೊಳ್=ಮುಂದೆ; ಸ್ವರಂ=ಸ್ವರಾಕ್ಷರಂ; ಇರೆ=ಇರೆ; ವತ್ವವಿಧಾನಂ=ವಕಾರದ ವಿಧಾನಂ; ಅವತರಿಸಿರ್ಕುಂ=ಹುಟ್ಟಿರ್ಪುದು; ಸಂಸ್ಕೃತಕ್ಕೆ=ಸಂಸ್ಕೃತಶಬ್ದಕ್ಕೆ; ಯತ್ವವತ್ವದೊಳ್=ಯತ್ವಸಂಧಿ ವತ್ವಸಂಧಿಗಳಲ್ಲಿ; ಬಹುಳತೆ=ಬಹುಳತ್ವಂ; ತಾಂ=ತಾಂ; ಎಂದುಂ=ಆವಾಗಳುಂ; ಇಲ್ಲ=ಉಂಟಾಗದು.

## ವಿಚಾರಂ.

ಕನ್ನಡದ ಶಬ್ದದಲ್ಲಿ ಯತ್ವವತ್ವಸಂಧಿಗಳಲ್ಲಿ ಬಹುಳಮುಂಟೆಂಬುದರ್ಥಂ. (ಪಿಂತೆ ಪೇಳ್ದಂತೆ) ಆತ್ವದಿನಿವರ್ಣದಿಂ ಮತ್ತೋತ್ವದಿನೈತ್ವದಿನೆವರ್ಣದಿಂ ಮುಂದಕ್ಕುಂ ಯತ್ವಂ (s. 53); (ಈಗಳ್ಪೇಳ್ದಂತೆ) ಉವರ್ಣದ ಋವರ್ಣದೋತ್ವೌತ್ವದಗ್ರದೊಳ್ಸ್ವರಮಿರೆ ವತ್ವವಿಧಾನವೆಂಬ ಈ ಯತ್ವಸಂಧಿ ವತ್ವಸಂಧಿಗಳಲ್ಲಿ ವಿಚಾರಮುಂಟು; ಆತ್ವಮದೆಂತೆಂದೊಡೆ — ಶಬ್ದಾನುಶಾಸನದಲ್ಲಿ ಸೂತ್ರಂ (1ನೆಯ ಪಾದದ 38ನೆಯ ಸೂತ್ರಂ) || ಆತ ಓಷ್ಠ್ಯೇ ಸ್ವರೇ ಪರೇ ಆಕಾರಸ್ಯ ವಗ್ಭವತಿ || ಎಂದುದಾಗಿ ಆಕಾರಕ್ಕೆ ಓಷ್ಠ್ಯಸ್ವರಂ ಪರಮಾಗೆ, ವತ್ವಸಂಧಿಯಾಗುವದು—ಆ+ಉದಕಂ=ಆವುದಕಂ, ಆ+ಊರ್=ಆವೂರ್, ಆವೂಟಂ. ಆವೊಲೆ, ಆವೋಲೆ ಎಂಬಂತೆ ಓಷ್ಠ್ಯಗ್ರಹಣದಿಂ ಕಂಠೋಷ್ಠ್ಯಮುಂ ಸಂಗ್ರಹಿಸಲ್ಪಟ್ಟದು[1].

## ವೃತ್ತಿ.

ಉ ಊ ಋ ೠ ಓ ಔ ಎಂಬಿವರ್ಕೆ ಸ್ವರಂ ಪರಮಾಗೆ, ನಡುವೆ ವತ್ವಂ; ಸಂಸ್ಕೃತದೊಳ್ ಯತ್ವವತ್ವಂಗಳ್ಗೆ ಬಹುಳಮಿಲ್ಲ.

## ನಿತ್ಯಕ್ರಮಪ್ರಯೋಗಂ.

ಉಕಾರಕ್ಕೆ—ಕುಡುವುದು, ಮನುವಿನ, ಗುರುವಿನ, ನೆಗೞ್ದಿನಾ ವಿಭುವಿಳೆಯೊಳ್.
ಊಕಾರಕ್ಕೆ—ಪೂವಿನ; ಲಲಿತಭ್ರೂವಿಭ್ರಮಂಗಜನಿಕ್ಷುಚಾಪಸಹಚರಮಕ್ಕುಂ.
ಋಕಾರಕ್ಕೆ—ಹೋತೃವೆ, ಕರ್ತೃವಾದಂ.

1) ಉ, ಊ=ಓಷ್ಠ್ಯಂಗಳ್; ಒ, ಓ, ಔ=ಕಂಠೋಷ್ಠ್ಯಂಗಳ್.

ಋೂಕಾರಕ್ಕೆ—ಋೂವೆಂದಂ, ಋೂವಿತ್ತಂ.

ಓಕಾರಕ್ಕೆ—ಗೋವಿನ, ಗೋವಂ, ಗೋವೀವಂ.

ಔಕಾರಕ್ಕೆ—ನೌವನೇಱಿದಂ; ಗ್ಲಾವಂ ನೋಡಿದಂ, ಗ್ಲಾವೆನಲ್ ಚಂದ್ರಂ; ಚೌವಿವಂ.

ಇ ಈ ಎಂಬಕ್ಕರಂಗಳನುಕರಿಸಿ ತೋಱುವಲ್ಲಿಯುಂ ನಡುವೆ ವತ್ವಂ—ಈವೀ ಗ್ರಂಥಂಗಳ್, ಈವಿದು ಗ್ರಂಥಂ.

ಕನ್ನಡದೊಳ್ ಯತ್ವವತ್ವಂಗಳ ಬಹುಳತೆಯಿಂ ಲೋಪಮುಂಟು—ಒತ್ತೆ+ಇಟ್ಟಂ=ಒತ್ತಿಟ್ಟಂ (ಅಥವಾ) ಒತ್ತೆಯಿಟ್ಟಂ; ಒತ್ತಿಟ್ಟಿರುಳಿಕೆಯ ಕೈತವಕಂಜಿ ಪೋಱಮಟ್ಟಿರ್ದಂ; ತೆಗೆವೆಯಪ್ಪೊಡೆ, ತೆಗೆವಪೊಡೆ (ತೆಗ–); ಮಾತು+ಎಲ್ಲಂ=ಮಾತುವೆಲ್ಲಂ, ಮಾತೆಲ್ಲಂ; ಸೊವಡು+ಒಂದು=ಸೊವಡುವೊಂದು, ಸೊವಡೊಂದು.

ಸಂಸ್ಕೃತದ ನಿತ್ಯಕ್ಕೆ—ನದಿಯೆಲ್ಲಂ, ಸುರಸಿಂಧುವೆ, ವಿಧುವಿಲ್ಲದಿರುಳ್.

ವಿಧುವಿಲ್ಲದಿರುಳ್ ತನ್ನಯೆ
ವಧುವಿಲ್ಲದ ಲೀಲೆ ಮಧುರಮಧುವಿಲ್ಲದ ಪೂ |
ರಧಿಯಿಲ್ಲದುಣಿಸದೆವುದೋ
ಬುಧರಿಲ್ಲದ ಸಭೆ ಸರಸ್ವತೀಮುಖತಿಲಕಾ || ಕಂದಂ ||

ಇಂತಱಿವುದು.

ಸೂತ್ರಂ.

ಅವಿಕೃತಿಗಳೆವರ್ಣವೊವ
ರ್ಣವಂತ್ಯವೆನಿಸಿದ ನಿಪಾತಮವಧಾರಣೆ ತ |
ಳ್ತ ವಿಶಂಕೆಗಳೆಂಬಿವಱೊಳ್
ವ್ಯವಹರಿಸದು ಸಂಧಿಯಾ ಪ್ಲುತಕ್ಕಮಭಾವಂ || 56 ||

No insertion of letters is allowed after the ಎ, ಏ or ಒ, ಓ in certain particles, strict emphasises, or suspicious questions, and after a syllable lengthened to three moras (ಪ್ಲುತಂ). (Exception to S. 53).

ಪದಚ್ಛೇದಂ.

ಅವಿಕೃತಿಗಳ್ ಎವರ್ಣಂ ಒವರ್ಣಂ ಅಂತ್ಯಂ ಎನಿಸಿದ ನಿಪಾತಂ, ಅವಧಾರಣೆ, ತಳ್ತ ವಿಶಂಕೆಗಳ್ ಎಂಬಿವಱೊಳ್ ವ್ಯವಹರಿಸದು ಸಂಧಿ; ಆ ಪ್ಲುತಕ್ಕಂ ಅಭಾವಂ.

ಅನ್ವಯಂ.

ಎಂಬಿವಱೊಳ್ ಸಂಧಿ ವ್ಯವಹರಿಸದು; ಆ ಪ್ಲುತಕ್ಕಂ ಅಭಾವಂ ಎಂಬುದನ್ವಯಂ.

ಟೀಕು.

ಅವಿಕೃತಿಗಳ್=ನಿರ್ವಿಕಾರಿಗಳಾದ (ಎಂದೊಡೆ ಸಂಸ್ಕೃತವಲ್ಲದ ಕರ್ನಾಟಕವೆ ಅಪ್ಪ); ಎ

ವರ್ಣಂ=ಎ ಏ ಎಂಬ ಸವರ್ಣಂ; ಒವರ್ಣಂ=ಒ ಓ ಎಂಬ ಸವರ್ಣಂ; ಅಂತ್ಯಂ=ಕಡೆ; ಎನಿಸಿದ ನಿಪಾತಂ=ಎನಿಸಿದವ್ಯಯಂ; ಅವಧಾರಣೆ=ನಿರ್ಧಾರಣೆ; ತಳ್ತ=ಪೊರ್ದುಗೆಯಾದ; ವಿಶಂಕೆಗಳ್= ವಿಶಂಕೆಗಳ್; ಎಂಬಿವಱೊಳ್=ಎಂಬಿವಱಲ್ಲಿ; ಸಂಧಿ=ಸಂಹಿತೆ; ವ್ಯವಹರಿಸದು=ಬಾರದು; ಆ ಪ್ಲುತಕ್ಕಂ=ಆ ಮೂಱು ಮಾತ್ರೆಯನುಳ್ಳ ಪ್ಲುತಕ್ಕಂ; ಅಭಾವಂ=ಸಂಧಿಯಿಲ್ಲ.

ವೃತ್ತಿ.

ನಿರ್ವಿಕಾರಿಗಳಪ್ಪ ಎ ಏ, ಒ ಓ ಎಂಬಿವು ಕಡೆಯಾದ ನಿಪಾತಾವಧಾರಣೆ ತಳ್ತ ವಿಶಂಕೆಗಳೆಂಬಿವರ್ಕೆ ಸ್ವರಂ ಪರಮಾಗೆ, ಸಂಧಿಯಿಲ್ಲ; ಪ್ಲುತಕ್ಕಮಂತೆ ಸಂಧಿ ಯಿಲ್ಲ.

ಪ್ರಯೋಗಂ.

ನಿಪಾತಕ್ಕೆ—ಅರಮೆ ಅರಲ್ದ ಬಯಲ್ದಾವರೆಗಳುಂ (S. 311); ಎಲೆ ಎಲೆ ಇ ದಲ್ತೆ ತುಹಿನಕ್ಷೋಣೀಂದ್ರದುತ್ತುಂಗಸಾನುಗಳ್? (cf. S. 312); ಅರೆ ಎಡೆ ಹಸ್ತಿ ಶಿಕ್ಷಣಾವಿಚಕ್ಷಣರಿಂ (cf. Ss. 304; 311); ಒಹೋ ಇರಲಿಂ ಪೆಱವರ ಮಹಾ ತ್ಮ್ಯಮುಂ (cf. S. 309).

ಅವಧಾರಣೆಗೆ—ನುಡಿದನೆ ಕಾವುದನೆ ಎರ್ದೆ
ಗೆಡದಿರು ಜವನಿಟ್ಟುರಕ್ಕೆ ನಿನಗೀವುದನೆಂ |
ನುಡಿದನೆ ಅದು ಕಯ್ಯದು ಮೇ
ಣ್ನುಡಿದುದು ತಪ್ಪುಗುಮೆ ಗಂಗಚೂಡಾಮಣಿಯಾ ||ಕಂದಂ||

ಆತನೆ ಇಂದ್ರನಾತನೆ ಗುಣೋನ್ನತನಾತನೆ ಅಂಬುಜೋದರಂ.

ವಿಶಂಕೆಗೆ—ಇನೆಯನೆ ಬೆಲ್ಲದಿಂದಿನಿದನಿವನೆ ಅಃ ಪಿರಿದಿವನಿತ್ತುದಂ ನೆನೆವನೆ ಚಿಃ ಅದಂ ನೆನೆಯಂ. ಆನೆಯೊ ಅದ್ರಿಯೊ? ಗುರುವಿಲ್ಲ ಕರ್ಣನಿಲ್ಲ ಗುರುವಿನ ಮ ಗನಿಲ್ಲ ಎನ್ನರೆ ಅನ್ನೆ ನೆನೆಯಂ ಕವಿರಾಜಕುಂಜರಂ.

ಪ್ಲುತಕ್ಕೆ—ಕು ಕೂ ಕೂೞ ಎಂದು (see s. S. 10); ಹಾ ರಾಮಾೞ ಎಂದು ಸೀತೆ ಬಾಯೞದಲ್ತಿಳ್.

ಸೂತ್ರಂ.

ಮೆಚ್ಚಿನೊಳಾಕ್ಷೇಪಕದೊ
ಳ್ಚಚ್ಚೋವಭ್ಯುಪಗಮಾರ್ಥದೆಮುಶಬ್ದಂ ಕ |
ಟ್ಟಚ್ಚರಿಯ ಗಡಾರ್ಥಾತ್ತಂ
ಬಿಚ್ಚಿರ್ಕುಂ ಸ್ವರಮುವಿದಿರೊಳಿರೆ ಖೇದದೊಳಂ || 57 ||

Further, insertion of letters is not allowed after the ಓ (cf. S. 314) in approvals or reproaches, after ಎ ಮು in consent, after the ಆ in surprise, and after particles of lamentation.

## ಪದಚ್ಛೇದಂ.

ಮೆಚ್ಚಿನೊಳ್ ಆಕ್ಷೇಪಕದೊಳ್ ಬೆಚ್ಚ ಓ, ಅಭ್ಯುಪಗಮಾರ್ಥದ ಎಮಶಬ್ದಂ, ಕಟ್ಟಚ್ಚರಿಯ ಗಡಾರ್ಥಾತ್ವಂ ಬಿಚ್ಚಿಕುರ್ಗುಂ, ಸ್ವರಂ ಅವು ಇದಿರೊಳ್ ಇರೆ; ಖೇದದೊಳಂ.

## ಅನ್ವಯಂ.

ಮೆಚ್ಚಿನೊಳ್ ಆಕ್ಷೇಪಕದೊಳ್ ಬೆಚ್ಚ ಓ, ಅಭ್ಯುಪಗಮಾರ್ಥದ ಎಮಶಬ್ದಂ, ಕಟ್ಟಚ್ಚರಿಯ ಗಡಾರ್ಥಾತ್ವಂ—ಸ್ವರಂ ಅವು ಇದಿರೊಳ್ ಇರೆ—ಖೇದದೊಳಂ ಬಿಚ್ಚಿಕುರ್ಗುಂ.

## ಟೀಕು.

ಮೆಚ್ಚಿನೊಳ್=ಮೆಚ್ಚಿನಲ್ಲಿ; ಆಕ್ಷೇಪಕದೊಳ್=ಆಕ್ಷೇಪಕದಲ್ಲಿ; ಬೆಚ್ಚೋ=ಬೆಚ್ಚು ಬೆಸುಗೆಯಾದ ಓಕಾರಂ; ಅಭ್ಯುಪಗಮಾರ್ಥದ=ಅಂಗೀಕಾರಾರ್ಥದ; ಎಮಶಬ್ದಂ=ಎಮ ಎಂಬ ಶಬ್ದಂ; ಕಟ್ಟಚ್ಚರಿಯ=ಕಡಿದಾದಾಶ್ಚರ್ಯದ; ಗಡಾರ್ಥಾತ್ವಂ=ಗಡಾರ್ಥದ ಆಕಾರಂ; ಸ್ವರಂ=ಸ್ವರಾಕ್ಷರಂ; ಅವು=ಅವು; ಇದಿರೊಳ್=ಮುಂದೆ; ಇರೆ=ಇರೆ; ಖೇದದೊಳಂ=ದುಃಖದಲ್ಲಿಯುಂ; ಬಿಚ್ಚಿಕುರ್ಗುಂ=ಸಂಧಿ ಬಿಚ್ಚಿಪುರ್ದು.

## ವೃತ್ತಿ.

ಮೆಚ್ಚಿನೊಳ್ ಆಕ್ಷೇಪಕದೊಳ್ ನೆಲಸಿರ್ದ ಓಕಾರಕ್ಕಂ, ಅಂಗೀಕಾರಾರ್ಥದ ಎಮಶಬ್ದಕ್ಕಂ, ಗಡಾರ್ಥಕ್ಕಾದೇಶಮಾದಾಕಾರಕ್ಕಂ—ಸ್ವರಂ ಪರಮಾಗೆ—ಸಂಧಿಯಿಲ್ಲ; ಖೇದದೊಳಮಂತೆ ಸಂಧಿಯಿಲ್ಲ.

## ಪ್ರಯೋಗಂ.

ಮೆಚ್ಚಿಂಗೆ—ಎಂತೆಂತೋ ಅಃ ಕಬ್ಬವೊಳ್ಳಿತ್ತಾಯ್ತು; ಏನೇನೋ ಓದಿದ ಪರಿ ಲೇಸು ಲೇಸು.

ಆಕ್ಷೇಪಕ್ಕೆ—ಎಡಱಿದನೋ ಅವನ ನೊಸಲಕ್ಕರಂ ತೊಡೆದುದಕ್ಕುಂ; ಮುತ್ತಿದನೋ ಇಂದೆ ಕೋಂಟೆ ಧೂಳಿಪಟಂ.

ಎಮಶಬ್ದಕ್ಕೆ—ನಿಮಗಕ್ಕೆಮ ಅಬ್ಜಗರ್ಭನಾಯುಂ ಶ್ರೀಯುಂ; ಸಿಂಗರವಕ್ಕೆಮ ಅಂಜೆಂ.

ಗಡಾರ್ಥದಾಕಾರಕ್ಕೆ—ಹಾಲಾ ಅಮರ್ದಾ ಇನಿದು ಗಡಾ (s. S. 316)! ಆ ನಿಮ್ಮಡಿಯಾ ಎರಟ್ಟಿದರೆಯಾ ಇರ್ಬರ್ಗೆರಟ್ಟೈದುವಾ!

ಖೇದಕ್ಕೆ—ಅಯ್ಯೋ ಅಕ್ಕಟಾ ಇಂದ್ರಂಗೆ ಕೇಡಾಯ್ತು! (cf. S. 308).

## ಸೂತ್ರಂ.

It is also not used after ಪೊಱ, ಒಳ, ಪೊಸ, ಪಳ and ಎಳ (cf. S. 153).

ಪೊಱಗೊಳಗು ಪೊಸತು ಪಳದೆಳ
ದಱಿಕೆಯದಂತತೆಯನಾ ಸಮಾಸಾಂತರದೊಳ್ |
ನೆಱೆ ತಾಳ್ದು ಸಂಧಿಯಾಗವು
ತಱಿಸಂದಿದಿರೊಳ್ಸ್ವರಂಗಳಾವುವು ನಿಲೆಯುಂ || 58 ||

## ಪದಚ್ಛೇದಂ.

ಪೊಱಗು ಒಳಗು ಪೊಸತು ಪಳದು ಎಳದು ಅಱಿಕೆಯ ಅದಂತತೆಯಂ ಆ ಸಮಾಸಾಂತರದೊಳ್ ನೆಱೆ ತಾಳ್ದು, ಸಂಧಿ ಆಗವು—ತಱಿಸಂದು ಇದಿರೊಳ್ ಸ್ವರಂಗಳ್ ಆವುವು ನಿಲೆಯುಂ.

## ಅನ್ವಯಂ.

ಪೊಱಗು ಒಳಗು ಪೊಸತು ಪಳದು ಎಳದು ಅಱಿಕೆಯ ಅದಂತತೆಯಂ ಆ ಸಮಾಸಾಂತರದೊಳ್ ನೆಱೆ ತಾಳ್ದು, ಇದಿರೊಳ್ ತಱಿಸಂದು ಸ್ವರಂಗಳ್ ಆವುವು ನಿಲೆಯುಂ, ಸಂಧಿ ಆಗವು.

## ಟೀಕು.

ಪೊಱಗು=ಪೊಱಗೆಂಬ ಶಬ್ದಂ; ಒಳಗು=ಒಳಗೆಂಬ ಶಬ್ದಂ; ಪೊಸತು=ಪೊಸತೆಂಬ ಶಬ್ದಂ; ಪಳದು=ಪಳದೆಂಬ ಶಬ್ದಂ; ಎಳದು=ಎಳದೆಂಬ ಶಬ್ದಂ; ಅಱಿಕೆಯ=ಉಪಾಂತದ[1] ಅಕ್ಷರಕ್ಕೆ ಲೋಪಮಾಗಿ ಅಕಾರವಂ ಪಡೆವುದೆಂಬ ಅಱಿಕೆಯ; ಅದಂತತೆಯಂ=ಅಕಾರಾಂತತ್ವವಂ; ಆ ಸಮಾಸಾಂತರದೊಳ್=ಆ ಸಮಾಸಮಧ್ಯದಲ್ಲಿ; ನೆಱೆ=ಚನ್ನಾಗಿ; ತಾಳ್ದು=ಧರಿಸಿ; ಇದಿರೊಳ್=ಮುಂದುಗಡೆಯಲ್ಲಿ; ತಱಿಸಂದು=ಚನ್ನಾಗಿ ಸಂದು; ಸ್ವರಂಗಳ್=ಸ್ವರಾಕ್ಷರಂಗಳ್; ಆವುವು=ಆವುವು; ನಿಲೆಯುಂ=ನೆಲೆಗೊಂಡಿರೆಯುಂ; ಸಂಧಿ=ಸಂಹಿತೆ; ಆಗವು=ಆಗವು.

## ವೃತ್ತಿ.

ಪೊಱಗು ಒಳಗು ಪೊಸತು ಪಳದು ಎಳದು ಎಂಬಿವರ್ಕೆ ಸಮಾಸವಿಷಯದೊಳುಪಾಂತಾಕ್ಷರಕ್ಕೆ ಲೋಪಮಾಗಿ, ಅಕಾರಾಂತತೆಯನೈದಿ, ನಿಪಾತದಂತೆ, ಪರದೊಳ್ಸ್ವರಮಾವುವಿರ್ದೊಡಂ, ಸಂಧಿ ಇಲ್ಲ.

## ಪ್ರಯೋಗಂ.

ಪೊಱ ಅಡಿ, ಒಳ ಅಟ್ಟಂ, ಪೊಸ ಅಡಕೆ, ಪಳ ಅಲಗು, ಎಳ ಅಂಚೆ.

1) Immediate proximity (last letter).

### ಸೂತ್ರಂ.

ಪರಪದಪೂರ್ವಂ ದ್ವಿತ್ವಾ
ಕ್ಷರಮಾಗಿರೆ ಪೂರ್ವಪದದ ಚರಮಂ ಹ್ರಸ್ವಾ |
ಕ್ಷರಮಾಗೆ ಸಂಧಿ ದೋಷಂ
ಸರೇಫಮಿದಿರಾಗೆ ಶಿಥಿಲಮೆಂದನುಕರಿಪರ್ || 59 ||

(In writing Canarese) combination of letters cannot occur when the final letter of the first word is short and the initial letter of the second word is a double consonant. — This double consonant, when a compound with Repha, is, sometimes, considered as fleeting (cf. S. 36, seq).

### ಪದಚ್ಛೇದಂ.

ಪರಪದಪೂರ್ವಂ ದ್ವಿತ್ವಾಕ್ಷರಂ ಆಗಿ ಇರೆ, ಪೂರ್ವಪದದ ಚರಮಂ ಹ್ರಸ್ವಾಕ್ಷರಂ ಆಗೆ, ಸಂಧಿ ದೋಷಂ. ಸರೇಫಂ ಇದಿರ್ ಆಗೆ, ಶಿಥಿಲಂ ಎಂದು, ಅನುಕರಿಪರ್.

### ಯಥಾನ್ವಯಂ.

### ಟೀಕು.

ಪರಪದ=ಮುಂದಣ ಪದದ; ಪೂರ್ವಂ=ಮೊದಲಕ್ಷರಂ; ದ್ವಿತ್ವಾಕ್ಷರಂ=ಒತ್ತಿನಕ್ಷರಂ; ಆಗಿ=ಆಗಿ; ಇರೆ=ಇರೆ; ಪೂರ್ವಪದದ=ಮೊದಲ ಪದದ; ಚರಮಂ=ಅಂತ್ಯಂ; ಹ್ರಸ್ವಾಕ್ಷರಂ=ಹ್ರಸ್ವವಾದಕ್ಷರಂ; ಆಗೆ=ಆಗೆ; ಸಂಧಿ ದೋಷಂ=ಸಂಧಿ ದೋಷವಪ್ಪುದು; ಸರೇಫಂ=ರೇಫೆಯೊಡನೆ ಕೂಡಿದಕ್ಷರಂ; ಇದಿರಾಗೆ=ಮುಂದಾಗೆ; ಶಿಥಿಲಮೆಂದು=ಶಿಥಿಲವಾಗುವದೆಂದು; ಅನುಕರಿಪರ್=ಅಂಗೀಕರಿಸುವರ್.

### ವೃತ್ತಿ.

ಪರಪದದ ಮೊದಲಕ್ಕರಂ ದ್ವಿತ್ವಮಾಗಿರೆ, ಪೂರ್ವಪದದ ಕಡೆಯಕ್ಕರಂ ಲಘುವಾಗಿರೆ, ಸಂಧಿ ದೋಷಮಕ್ಕುಂ. ಛಂದೋವಿಷಯದೊಳ್ ಪರಪದದ ಪೂರ್ವಾಕ್ಷರಂ ರೇಫೆವೆರಸಿರ್ದೊಡಂ, ಶಿಥಿಲಮಾಗಲಾಪ್ಪುದೆಂದು, ಕೆಲಂಬರದನಂಗೀಕರಿಸುವರ್.

### ಪ್ರಯೋಗಂ.

ಸಂಧಿದೋಷಕ್ಕೆ—ಬರಿಸಿಪ್ರಧಾನರಂ ಕು
ಳ್ಳಿರಿಸಿಪ್ರಿಯಕುಶಲವಾರ್ತೆಯಂ ನೆಱೆ ಕೇಳ್ದು ||
ಸ್ಥಿರಮಿರ್ದುಪ್ರಭು ನುಡಿಯೆ
ಪ್ರರೂಢಮುದನಾದನಾತನೊಬುದಮಾರ್ಗಂ
(ಎಂದೊಡೆ ಬರೆಯುವದಿಲ್ಲೆ)[1] || ಕಂದಂ ||

1) ಬರಿಸಿಯೆಂದುಂ ಪ್ರಧಾನರಮೆಂದುಂ ಮೊದಲಾದುದುಮಂ ಕೂಡಿಸಿ ಓದ ಬೇಕಾದೊಡಂ ಹಾಗೆ ಕೂಡಿಸಿ ಬರೆಯಬಾರದು.

(ಗದ್ಯಕಾವ್ಯದೊಳ್)[1] ಸರೇಫಾಕ್ಷರಕ್ಕೆ (ಕೆಲಂಬರ್ ಶಿಥಿಲಂಬಡಿಸಿದುದರ್ಕೆ)— ಮಿಱುಗುತ್ತಿರ್ಪ ತ್ರಿಶೂಲದೆ ಪ್ರಣಯದೆ ತ್ರಿಪಥೆಗೆ ನಡೆದಂ ತ್ರಿಣೇತ್ರನೊಲವಿಂದೆ ತಾಳ್ದಿದಂ ಮಸ್ತಕದೊಳ್.

ಸೂತ್ರಂ.

But it ought not to be considered as fleeting.

ಬಗೆಯದೆ ಸತೃಣಾಭ್ಯವಹಾ
ರಿಗಳುಸಿರ್ವರ್ಗದ್ಯಕಾವ್ಯದೊಳ್ನಿರ್ಬಂಧಂ |
ಪುಗದೆಂದರೋಚಿಗಳದಂ
ತೆಗಟಿಂದಾ ಗದ್ಯಪದ್ಯಕಾವ್ಯದೊಳಿರ್ಕರ್ || 60 ||

ಪದಚ್ಛೇದಂ.

ಬಗೆಯದೆ, ಸತೃಣಾಭ್ಯವಹಾರಿಗಳ್ ಉಸಿರ್ವರ್, ಗದ್ಯಕಾವ್ಯದೊಳ್ ನಿರ್ಬಂಧಂ ಪುಗದು ಎಂದು; ಅರೋಚಿಗಳ್ ಅದಂ, ತೆಗಟಿಂ ಎಂದು, ಆ ಗದ್ಯಪದ್ಯಕಾವ್ಯದೊಳ್ ಇರ್ಕರ್.

ಅನ್ವಯಂ.

ಸತೃಣಾಭ್ಯವಹಾರಿಗಳ್, ಗದ್ಯಕಾವ್ಯದೊಳ್ ನಿರ್ಬಂಧಂ ಪುಗದೆಂದು, ಬಗೆಯದೆ, ಉಸಿರ್ವರ್; ಅರೋಚಿಗಳ್ ಅದಂ, ತೆಗಟಿಂ ಎಂದು, ಆ ಗದ್ಯಪದ್ಯಕಾವ್ಯದೊಳ್ ಇರ್ಕರ್.

ಟೀಕು.

ಸತೃಣ=ತೃಣದೊಡನೆ ಕೂಡಿದ; ಅಭ್ಯವಹಾರಿಗಳ್=ವ್ಯಾಪಾರವನುಳ್ಳ ಕವಿಗಳ್; ಗದ್ಯಕಾವ್ಯದೊಳ್=ಗದ್ಯಕಾವ್ಯದಲ್ಲಿ; ನಿರ್ಬಂಧಂ=ಬಲಾತ್ಕಾರಂ; ಪುಗದೆಂದು=ಪ್ರವೇಶವಾಗದೆಂದು; ಬಗೆಯದೆ=ವಿಚಾರಿಸದೆ; ಅದಂ=ಆ ಸರೇಫಮಿದಿರಾಗೆ ಶಿಥಿಲಮಪ್ಪುದೆಂಬ ಸಂಧಿಯಂ; ಉಸಿರ್ವರ್=ಪೇಳ್ವರ್; ಅರೋಚಿಗಳ್=ಹೇಯವುಳ್ಳವರ್; ಅದಂ=ಆ ಸಂಧಿಯಂ; ತೆಗಟಿಂದು=ನಿಂದೆ ಬರ್ಪುದೆಂದು; ಆ ಗದ್ಯಪದ್ಯಕಾವ್ಯದೊಳ್=ಆ ಗದ್ಯಕಾವ್ಯ ಪದ್ಯಕಾವ್ಯಂಗಳಲ್ಲಿ; ಇರ್ಕರ್=ಪೇಳರ್.

ಸೂತ್ರಂ.

ಕರೆಗತ್ತದಿರ್ಗೆಯಲ್ಲದೆ
ಪರಮಿರೆ ಪದಾರ್ಥವಾಕ್ಯವೇಪ್ಸನದೆಡೆಗಂ |
ಸ್ಫುರದನುಕೃತಿಗಂ ಸ್ವರಮವು
ಪರಮಿರೆ ಖುತ್ತಕ್ಕಮಂತೆ ಸಂಧಿವಿಕಲ್ಪಂ || 61 ||

When ಅಲ್ (S. 234) is joined (for instance) to ಕರೆ, and ಅದೆ (S. 71, for instance) to ಇರ, or when the meaning requires it (cf. S. 52), or after quotations from the Sanskrt, or also after imitative sounds (cf. S. 54), or before ಋ Combination of letters is optional.

1) ಗದ್ಯಕಾವ್ಯವೆಂಬ ಚಂಪೂ ಗದ್ಯಪದ್ಯವೆಂಬುದೇ. ಇಲ್ಲಿ ಕೊಟ್ಟುದಾಹರಣೆಯಲ್ಲಿ ಗಣಕ್ಕೆ ನಾಲ್ಕು ನಾಲ್ಕು ಮಾತ್ರೆ, i. e. ◡◡◡◡, ಇರ್ಕುಮೆಂಬರ್.

ಪದಚ್ಛೇದಂ.

ಕರೆಗೆ ಅತ್ವದ ಇರ್ಗೆ ಅಲ್ ಅದೆ ಪರಂ ಇರೆ, ಪದ್ಯಾರ್ಥವಾಕ್ಯವೇಷ್ಟನದ ಎಡೆಗಂ ಸ್ಫುರದ ನುಕೃತಿಗಂ ಸ್ವರಂ ಅವು ಪರಂ ಇರೆ, ಋತ್ವಕ್ಕಂ ಅಂತೆ ಸಂಧಿವಿಕಲ್ಪಂ.

ಯಥಾನ್ವಯಂ.

ಟೀಕು.

ಕರೆಗೆ=ಕರೆಯೆಂಬ ಧಾತುವಿಂಗೆ; ಅತ್ವದ=ಅಕಾರದ; ಇರ್ಗೆ=ಇರೆಂಬ ಧಾತುವಿಂಗೆ; ಅಲ್=ಅಲ್ ಎಂದು; ಅದೆ=ಅದೆ ಎಂಬುದು; ಪರಮಿರೆ=ಪರಮಾಗಿರೆ; ಪದ್ಯ=ಪದ್ಯಂಗಳ; ಅರ್ಥ=ಅರ್ಥದ; ವಾಕ್ಯವೇಷ್ಟನದ=ಸಂಸ್ಕೃತದ ವಾಕ್ಯವೇಷ್ಟನದ; ಎಡೆಗಂ=ಸ್ಥಾನಕ್ಕೆಯುಂ; ಸ್ಫುರತ್=ಪ್ರಕಾಶಿಸುವ; ಅನುಕೃತಿಗಂ=ಅನುಕರಣಶಬ್ದಕ್ಕೆಯುಂ; ಸ್ವರಂ=ಸ್ವರಾಕ್ಷರಂಗಳ್; ಅವು=ಅವು; ಪರಮಿರೆ=ಪರದಲ್ಲಿರೆ; ಋತ್ವಕ್ಕಂ=ಋಕಾರಂ ಪರಮಾದುದರ್ಕೆಯುಂ; ಅಂತೆ=ಹಾಂಗೆ; ಸಂಧಿ=ಸಂಹಿತೆ; ವಿಕಲ್ಪಂ=ವಿಕಲ್ಪವಪ್ಪುದು.

ವೃತ್ತಿ.

ಕರೆಯೆಂಬ ಶಬ್ದಕ್ಕೆ ಅಲ್ ಪರಮಾದೊಡಂ, ಅದಂತಮಾದ ಇರ್ಗೆ ಅದೆ ಪರಮಾದೊಡಂ, ಪದ್ಯಾರ್ಥಕ್ಕಂ ವಾಕ್ಯವೇಷ್ಟನಕ್ಕಂ ಅನುಕರಣೆಗಂ ಸ್ವರಂ ಪರಮಾದೊಡಂ, ಸಂಧಿವಿಕಲ್ಪಂ; ಋಕಾರಂ ಪರಮಾದೊಡಮಂತೆ ಕ್ರಮಂ.

ಪ್ರಯೋಗಂ.

ಅಲ್ ಅದೆಗಳ ವಿಸಂಧಿಗೆ—ಕರೆ+ಅಲ್=ಕರೆಅಲ್; ಇರ+ಅದೆ=ಇರಅದೆ.

ಅವಱ ಸಂಧಿಗೆ—ವೈಗರೆಯಲೆ ಪಾಂಡವರ್ಗೆ ನೆರೆದವು ಬರಿಸಂ (ಕಂದಪಾದಂ); ಇರದೆ ಗರ್ಜಿಸಿ ಬೊಪ್ಪಲಂತಳರ್ವಂಜವಂತಳರ್ದಂದದಿಂ.

ಪದ್ಯಾರ್ಥಕ್ಕೆ ವಿಸಂಧಿಯಾದುದರ್ಕೆ—

ಅಲ್ಲಿ ಇದುಂಟೆಂಬರ್ಥದೊ
ಳೆಲ್ಲಿಯುಮುಳ್ಳೊಡೆ ಯವಂತಶಬ್ದಮುಮಕ್ಕುಂ |
ಎಲ್ಲಂದದೊಳಂ ಪೋಲಿಸು
ವಲ್ಲಿಗುಣಾಧಿಕದೊಳಂತೆವೋಲೆನಲಕ್ಕುಂ || ಕಂದಂ || (ಗುಣಾಧಿಕರೊ—)

ಪದ್ಯಾರ್ಥಸಂಧಿಗೆ—ಬನದೊಳಗೆ ಪೋಗಿ ಪೊಸಪೂ
ವಿನ ಗೊಂಚಲನಕ್ಕ ನಿನಗೆ ತಂದಪ್ಪೆಂ ನೀ |
ನಿನಿತೊಂದು ಬೇಗದಿಂ ನಿಂ
ನಿನಿಯನ ಪಕ್ಕೆಯೊಳಿರೆಂದು ಸಖಿ ತೊಲಗುವುದುಂ || ಕಂದಂ ||

ವಾಕ್ಯವೇಷ್ಟನವಿಸಂಧಿಗೆ—ಕಃ? ಕೇನಾರ್ಥೀ? ಕೋ? ದರಿದ್ರೋ? ಎನಿತುಮನಿತುಮಂ ಧರ್ಮಜಂ ಸೂಱೆಗೊಟ್ಟಂ.

ವಾಕ್ಯವೇಷ್ಟನಸಂಧಿಗೆ—ನ ದೇವಚರಿತಂ ಚರನೆನಿಸಿದಯ್, ತ್ರಿಲೋಕೇಶ್ವರಾ!

ಅನುಕರಣವಿಸಂಧಿಗೆ—ಕವಕ್ಕವ ಎಲೆಎಲೆ ಒಬ ಪುಗಲ್ ಪುಗಲೆಂದೊಚ್ಚತ ಉಳ್ಳ ಕೋಗಿಲೆಯುಂ.

ಅನುಕರಣಸಂಧಿಗೆ—ಛಮೆಂಬ; ಛಟಛಟೆಂಬ.

ಋಕಾರವಿಸಂಧಿಗೆ—ಎಸೆಗುಂ ಋಜ್ವಾಗತಂ ಕಣ್ಗೊಳಿಸುಗುಮಳವಟ್ಟಿರ್ದ ಋಜ್ವಾಗತಂ.

ಋಕಾರಸಂಧಿಗೆ—ಸರಸಮ್ರುಜುವೀರನೆಂದಾ |

ತರುಣಿಯನೊಸದಿತ್ತಂ || ಕಂದಭಾಗಂ ||

(ಸಂಸ್ಕೃತದ) ವಾಕ್ಯವೇಷ್ಟನಶಬ್ದಮುಂ ಅನುಕರಣಶಬ್ದಮುಮಿರ್ದಂತಿರ್ಪುವು, ಕನ್ನಡ ವಿಭಕ್ತಿಯುಂ ಮಾಡ ಬೇಡ. ನವೋ ನವೋ ಭವತಿ ಜಾಯಮಾನೋಹ್ನಾ ಎಂಬ ಸಂಸ್ಕೃತವಾಕ್ಯಾಂತಮಂ, ಜಾಯಮಾನೋಹ್ನಮೆಂದು, ಉಪಸಂಹರಿಸಲಾಗದು; ಧಗಧಗ ಎಂಬುದುಂ ಧಗಧಗಂ ಎನಲಾಗದು. (cf. S. 75).

ಸೂತ್ರಂ.

Combinations of letters, also when eliding vowels, is to be used with much discretion, and obscenities are to be avoided by all means.

ಪದಯುಗದ ಸಂಧಿಯಂ ಬೇ
ಱದೊಂದಸಹ್ಯೋಕ್ತಿ ಪುಟ್ಟಿ ಮಾಡುವುದುಂ ಮಾ |
ರ್ಗದೊಳುಳ್ಳ ಸಂಧಿಯಂ ಕೆಡಿ
ಪುದುಮಾಗದು ತಾಂ ಯಥೇಷ್ಟಮೆಂದಱಿವುಳ್ಳರ್ || 62 ||

ಪದಚ್ಛೇದಂ.

ಪದಯುಗದ ಸಂಧಿಯಂ ಬೇಱೆ ಅದು ಒಂದು ಅಸಹ್ಯೋಕ್ತಿ ಪುಟ್ಟೆ ಮಾಡುವುದುಂ ಮಾರ್ಗದೊಳ್ ಉಳ್ಳ ಸಂಧಿಯಂ ಕೆಡಿಪುದುಂ ಆಗದು ತಾಂ, ಯಥೇಷ್ಟಂ ಎಂದು, ಅಱಿವುಳ್ಳರ್.

ಅನ್ವಯಂ.

ಅಱಿವುಳ್ಳರ್ ತಾಂ, ಯಥೇಷ್ಟಮೆಂದು, ಪದಯುಗದ ಸಂಧಿಯಂ ಬೇಱೆ ಅದೊಂದು ಅಸಹ್ಯೋಕ್ತಿ ಪುಟ್ಟೆ ಮಾಡುವುದುಂ ಮಾರ್ಗದೊಳುಳ್ಳ ಸಂಧಿಯಂ ಕೆಡಿಪುದುಂ ಆಗದು.

ಟೀಕು.

ಅಱಿವುಳ್ಳರ್=ವಿಚಾರವುಳ್ಳ ಕವಿಗಳ್; ತಾಂ=ತಾಂ; ಯಥೇಷ್ಟಮೆಂದು=ಸಂಧಿ ಯಥೇಷ್ಟಮೆಂದು, ಇಚ್ಛೆ ಬಂದ ಹಾಂಗೆ ಎಂಬರ್ಥಂ; ಪದಯುಗದ=ಪದವೆರಡಱ; ಸಂಧಿಯಂ=ಸಂಹಿತೆಯಂ; ಬೇಱೆ=ಅನ್ಯವಾಗಿ; ಅದೊಂದು=ಅದು ತಾನೊಂದು; ಅಸಹ್ಯೋಕ್ತಿ=ಅಸಹ್ಯವಾದ ವಾಕ್ಯಂ; ಪುಟ್ಟೆ=ಹುಟ್ಟೆ; ಮಾಡುವುದುಂ=ಸಂಧಿ ಮಾಡುವದುಂ; ಮಾರ್ಗದೊಳ್=ಕವಿಮಾರ್ಗದಲ್ಲಿ; ಉಳ್ಳ

ಸಂಧಿಯಂ=ರೂಢಮಾಗಿ ಉಳ್ಳ ಸಂಧಿಯಂ; ಕೆಡಿಪುದುಂ=ಸ್ವರಲೋಪಸಂಧಿಯಂ ಮಾಡಿ ಕೆಡಿಸುವದುಂ; ಆಗದು=ಸಲುವಳಿಯಾಗದು.

ವೃತ್ತಿ.

ಎರಡು ಪದಂಗಳ ನಡುವೆ, ಬೇಱೊಂದು ದುಃಪ್ರತೀತಿ ಪುಟ್ಟುವೊಡೆ, ಸಂಧಿಯಂ ಮಾಡಲಾಗದು; ಸಂಧಿ ಯಥೇಷ್ಟಮೆಂದು, ರೂಢಮಪ್ಪ ಸಂಧಿಯಂ ಕೆಡಿಸಿ ಸ್ವರಲೋಪಸಂಧಿಯಂ ಮಾಡಲಾಗದು.

ಪ್ರಯೋಗಂ.

ಸಂಧಿದೋಷಪರಿಹಾರದ ಲಕ್ಷ್ಯಂ[1]—

ಬನ್ನಿಯ ತರು ಡಕ್ಕೆಗೆ ಸುರ
ಹೊನ್ನೆಯ ತರು ಡಮರುಗಕ್ಕೆ ಕರುವಿಡಿದಿರ್ಪರ್ | (ಕಡುವಿ—ಎಂತ ಪಾಠಾಂತರಂ, also in M. A.)
ಚೆನ್ನಂಗಿಯ ತರು ಡಾರ್ಣಗೆ
ಹೊನ್ನಂ ಕುಡುವೆಡೆಗೆ ಕಲ್ಪತರು ಡಾಕರಸಾ (—ಸಂ ಎಂತಪಾಠಾಂತರಂ, also in M. A.) || ಕಂದಂ ||

ಸಂಧಿದೋಷದ ಅಸಹ್ಯೋಕ್ತಿಗೆ[2]—(ಆಸೆಗರ್ಣತಾ. ಪೂಸಲೆಸೊಗಸು. ಹೇಲತಾಕೋಮಲಾಂಗ).

ವಿಸಂಧಿದೋಷಕ್ಕೆ—ಅಸಿಯ ಒಱೆ ಬೆಸೆದ ಪೆಟ್ಟಿಗೆ
ಮಿಸುಗುವ ಅರನ್ಮೆದೆ ತೋಳಪ ಕನ್ನವುರಂ ಚೆ |
ಲ್ವೆಸದಿರೆ ಬಲವರ್ಪ ಜನರ್
ಕುಸುಮೇಷುವಮೆಳೆದವರ್ಗಳೆನಿಸಿದರವರೊಳ್ ||ಕಂದಂ||

ಪೊನ್ನ ಅಂದಳಂ ಎಂದಿಂತು ಸಂಧಿಯಂ ಕೆಡಿಸಲಾಗದು.

ಸೂತ್ರಂ.

Also sounds disagreeable to the ear (for instance the joining of two Rephas) are to be avoided.

ಎರಡುಂ ರೇಫೆಗಳಂ ತಂ
ದುರವರ್ಣಯಿಂ ಕೂಡಿದಂತೆವೋಲ್ಶ್ರುತಿಕಷ್ಟಂ |
ಬರೆ ಸಂಧಿ ಮಾಡಲಾಗದು
ಕರಡೆಯ ಗಿರ್ಗಟದ ದನಿಯೊಲಮರವಮೆಂದುಂ || 63 ||

1) ಮಾತೆಲ್ಲಮಂ ಜೋಡಿಸಿ ಬರೆವುದೇ ಸಂಧಿದೋಷಂ. 2) In this instance we refrained from giving the original 3 little sentences.

ಪದಚ್ಛೇದಂ.

ಎರಡುಂ ರೇಫೆಗಳಂ ತಂದು ಉರವಣೆಯಿಂ ಕೂಡಿದಂತೆವೋಲ್ ಶ್ರುತಿಕಷ್ಟಂ ಬರೆ, ಸಂಧಿ ಮಾಡಲ್ ಆಗದು; ಕರಡೆಯ ಗಿರ್ಗಟದ ದನಿಯೊಲ್ ಅಮರವು ಅವು ಎಂದುಂ.

ಅನ್ವಯಂ.

ಅವು ಎಂದುಂ ಕರಡೆಯ ಗಿರ್ಗಟದ ದನಿಯೊಲ್ ಅಮರವು. ಉಳಿದದು ಯಥಾನ್ವಯಂ.

ಟೀಕು.

ಎರಡುಂ ರೇಫೆಗಳಂ=ಪೂರ್ವಪದದ ಕಡೆಯಲ್ಲಿ ಪರಪದದ ಮೊದಲಲ್ಲಿ ಇರ್ದ ಎರಡು ರೇಫೆಗಳುಂ; ತಂದು=ತಂದು ಕೊಂಡು; ಉರವಣೆಯಿಂ=ಶೀಘ್ರದಿಂದೆ; ಕೂಡಿದಂತೆವೋಲ್=ಕೂಡಿದ ಹಾಂಗೆ; ಶ್ರುತಿಕಷ್ಟಂ=ಶ್ರುತಿಕಷ್ಟವೆಂಬ ಕರ್ಣಕಠೋರಂ; ಬರೆ=ಬರೆ; ಸಂಧಿ ಮಾಡಲ್=ಸಂಧಿಯಂ ಮಾಡಲ್ಕೆ; ಆಗದು=ಸಲುವಳಿಯಾಗದು; ಅವು=ಅವು; ಎಂದುಂ=ಆವಾಗಳುಂ; ಕರಡೆಯ=ಕರಡೆಯೆಂಬ ವಾದ್ಯದ; ಗಿರ್ಗಟದ=ಗಿರ್ಗಟಿಯೆಂಬ ವಾದ್ಯದ; ದನಿಯೊಲ್=ಧ್ವನಿಯ ಹಾಂಗೆ; ಅಮರವು=ಪೊರ್ದುಗೆಯಾಗವು.

ವೃತ್ತಿ.

ಪದಂಗಳೆರಡಱಂತರಾಳರೇಫೆಗಳಂ, ಕೂಡಿದಂತೆ ಶ್ರುತಿಕಷ್ಟವಾಗೆ, ಸಂಧಿಯಂ ಮಾಡಲಾಗದು; ಕರಡೆಯ ಗಿರ್ಗಟದ ಧ್ವನಿಯಂತಿರವು, ನೇರ್ಪಡವು.

ಪ್ರಯೋಗಂ.

ರೇಫದ್ವಿತೀಯಸಂಧಿದೋಷಕ್ಕೆ—ಬಂದರರ್ಾಮರ್; ದೇವರ್ರಕ್ಷಿಸುಗೆ; ಮೂವರ ರಾಯರನೆ ಮಾಱುವಂತೆಸೆದಿರ್ಕುಂ.

ಶ್ರುತಿಕಷ್ಟಕ್ಕೆ—ವಿದ್ವಿಟ್ಸ್ತ್ರಿಯರೆಂದು, ಮಾಡಲಾಗದು.

ಸೂತ್ರಂ.

Combination of letters regarding the ಎ of strict emphasis (cf. S. 56) and ಅರೆ (Ss. 56; 312) when their meaning is modified (cf. S. 53). (For ಅಲ್ಲದೆ see S. 47; in the present case it excludes another possibility).

ಅವಧಾರಣೆಯನಿಯೋಗ
ವ್ಯವಹೃತಿಯಿಂದಿರೆ ನಿಪಾತವಿಷಯದೊಳಲ್ಪಾ |
ರ್ಥವನಾಳ್ದರೆ ವಸ್ತುವಿನ
ರ್ಥವನುಸಿರುತ್ತಿರೆ ತಗುಳ್ಟುವುದು ಸಂಹಿತೆಯಂ || 64 ||

ಪದಚ್ಛೇದಂ.

ಅವಧಾರಣೆ ಎ ಅನಿಯೋಗವ್ಯವಹೃತಿಯಿಂದ ಇರೆ, ನಿಪಾತವಿಷಯದೊಳ್ ಅಲ್ಪಾರ್ಥವಂ ಆಳ್ದ ಅರೆ ವಸ್ತುವಿನ ಅರ್ಥವಂ ಉಸಿರುತ್ತೆ ಇರೆ, ತಗುಳುವುದು ಸಂಹಿತೆಯಂ.

ಅನ್ವಯಂ.

ಸಂಹಿತೆಯಂ ತಗುಳ್ಚುವುದು. ಉಳಿದದು ಯಥಾನ್ವಯಂ.

ಟೀಕು.

ಅವಧಾರಣೆ=ಅವಧಾರಣೆಯ ಎಕಾರಂ; ಅನಿಯೋಗವ್ಯವಹೃತಿಯಿಂದೆ=ತನ್ನ ನಿಯತಾರ್ಥವಂ ಬಿಟ್ಟು ಅನಿಯೋಗವ್ಯವಹಾರದಿಂದೆ; ಇರೆ=ಇರೆ; ನಿಪಾತವಿಷಯದೊಳ್=ಅವ್ಯಯವಿಷಯದಲ್ಲಿ; ಅಲ್ಪಾರ್ಥವಂ=ಕಿಱಿದೆಂಬಲ್ಪಾರ್ಥವಂ; ಅಳ್ದ=ತಾಳ್ದ; ಅರೆ=ಅರೆಯೆಂಬ ಶಬ್ದಂ; ವಸ್ತುವಿನ=ಒಂದು ವಸ್ತುವಿನ; ಅರ್ಧವಂ=ಸರಿ ಭಾಗವಂ; ಉಸಿರುತ್ತಿರೆ=ಹೇಳುತ್ತಿರೆ; ಸಂಹಿತೆಯಂ=ಸಂಧಿಯಂ; ತಗುಳ್ಚುವುದು=ಎಯ್ದುವದು.

ವೃತ್ತಿ.

ಅವಧಾರಣೆಯ ಎಕಾರಂ ತನ್ನ ನಿಯತಾರ್ಥಮಂ ಬಿಟ್ಟು ಅನಿಯೋಗಮಾದಲ್ಲಿಯುಂ ಕಿಱಿದೆಡೆಯುಂ ಪೇೞ್ದು ನಿಪಾತಾರ್ಥದರೆಯೆಂಬ ಶಬ್ದವೊಂದು ವಸ್ತುವಿನ ಭಾಗಮಂ ಪೇೞ್ದಲ್ಲಿಯುಂ ಸಂಧಿಯುಂಟು.

ಪ್ರಯೋಗಂ.

ಅನಿಯೋಗಸಂಧಿಗೆ—ಮಾಮರನಲ್ಲದಿಲ್ಲ; ತನಿಗಂಪಿನ ಮಲ್ಲಿಗೆಯಲ್ಲದಿಲ್ಲ.
ಅರೆಯ ಸಂಧಿಗೆ—ಕುರುಪತಿಯಂ ವಿಷ್ಣು ಬೇಡಿದಂ ಧರೆಯರೆಯಂ| ಕಂದಪಾದಂ ||

**2. Combination of Consonants.**

ಸೂತ್ರಂ.

In combination ಕ, ತ, ಪ, when initials of the second word, are often changed into ಗ, ದ, ಬ (cf. S. 293).

ಇರೆ ವರ್ಗಪ್ರಥಮಂಗಳ್
ಪರದೊಳ್ಚಟವರ್ಗಮುಱಿಯೆ ತಮ್ಮ ತೃತೀಯಾ |
ಕ್ಷರಮಕ್ಕುಂ ಪದವಿಧಿಯೊಳ್
ಪರಿಹರಿಸಲ್ಬಾರದಲ್ಲಿ ಬಹುಳಸ್ಥಿತಿಯಂ || 65 ||

ಪದಚ್ಛೇದಂ.

ಇರೆ ವರ್ಗಪ್ರಥಮಂಗಳ್ ಪರದೊಳ್-ಚಟವರ್ಗಂ ಉಱಿಯೆ-ತಮ್ಮ ತೃತೀಯಾಕ್ಷರಂ ಅಕ್ಕುಂ ಪದವಿಧಿಯೊಳ್; ಪರಿಹರಿಸಲ್ ಬಾರದು ಅಲ್ಲಿ ಬಹುಳಸ್ಥಿತಿಯಂ.

ಅನ್ವಯಂ.

ಪದವಿಧಿಯೊಳ್-ಚಟವರ್ಗಂ ಉಱಿಯೆ-ವರ್ಗಪ್ರಥಮಂಗಳ್ ಪರದೊಳ್ ಇರೆ, ತಮ್ಮ ತೃತೀಯಾಕ್ಷರಂ ಅಕ್ಕುಂ; ಅಲ್ಲಿ ಬಹುಳಸ್ಥಿತಿಯಂ ಪರಿಹರಿಸಲ್ ಬಾರದು.

ಟೀಕು.

ಪದವಿಧಿಯೊಳ್=ಸಮಾಸವಿಧಿಯಲ್ಲಿ; ಚಟವರ್ಗಂ=ಚವರ್ಗ ಟವರ್ಗಂಗಳ್; ಉಱಿಯೆ=

ಹೊರತಾಗೆ; ವರ್ಗ=ವರ್ಗಂಗಳ; ಪ್ರಥಮಂಗಳ್=|| ಕ || ತ || ಪ || ಎಂಬ ಮೊದಲಕ್ಷರಂಗಳ್; ಪರದೊಳ್=ಪರ ಪದದಾದಿಯಲ್ಲಿ; ಇರೆ=ಇರೆ; ತಮ್ಮ=ತಮ್ಮ ತಮ್ಮ; ತೃತೀಯಾಕ್ಷರಂ=|| ಗ || ದ || ಬ || ಎಂಬ (ವರ್ಗದ) ಮೂಱನೆಯಕ್ಷರಂಗಳ್; ಅಕ್ಕುಂ=ಅಪ್ಪುವು; ಅಲ್ಲಿ=ಆ ತೃತೀಯಾಕ್ಷರವಾಗುವಲ್ಲಿ; ಬಹುಳಸ್ಥಿತಿಯಂ=ಬಹುಳದ ಸ್ಥಿತಿಯಂ; ಪರಿಹರಿಸಲ್ಬಾರದು=ಬಿಡ ಬಾರದು.

ವೃತ್ತಿ.

ಚಟವರ್ಗದಿಂ ಪಿಂಗಿದ ಕ ತ ಪಂಗಳ್ಪರಪದದಾದಿಯೊಳಿರ್ದು, ಸಮಾಸವಿಷಯದೊಳ್ತಮ್ಮ ತಮ್ಮ ತೃತೀಯಾಕ್ಷರಂಗಳಂ ಬಹುಳತೆಯಿನೆಯ್ದುಗುಂ.

ಪ್ರಯೋಗಂ.

ಕಕಾರದ ತೃತೀಯತ್ವಕ್ಕೆ—ಪಳಗನ್ನಡದ ಪದುಂಗೊಳೆ

ಕೊಳೆ ಸಕ್ಕದಮುಂ ತಗುಳ್ಚಿ ಜಾಣಿಡೆಮುತ್ತುಂ ।
ಮೆಳಸುಂಗೋದುಂತಿರೆ ಪೇ
ೞ್ವಳಿಗವಿಗಳ ಕವಿತೆ ಬುಧರನೆರ್ದೆಗೊಳಿಸುಗುಮೆ ||ಕಂದಂ||

ಗಱಿಗೂಸಾಡುವರಿಂದ್ರನಂ ಗಿರಿಶನಂ ಸರ್ವಸ್ವಮಂ ಕೊಂಡು ಮುನ್ನುಱಿವರ್ || ಇತ್ಯಾದಿ, ಮತ್ತೇಭವಿಕ್ರೀಡಿತವೃತ್ತಂ[1] || (ಗಳಿಗೂ—)

ತಕಾರದ ತೃತೀಯತ್ವಕ್ಕೆ—ಕಣ್ದೆಱಿ; ಮೇಲ್ದುಡಿಗೆ; ಉಡಿದೊವಲುಂ ಪಿರಿಯ ಪಣಿಗಣ್ಣುಂ; ನಿರಿದಲೆಯೊಳ್ಪವೆತ್ತನಗೆಗಳವೋಲ್; ಬೆಳಗಂಪಿನ ಪಿಂಪನಾಳ್ದ ಬಾಯ್ದೆಱಿ.

ಪಕಾರದ ತೃತೀಯತ್ವಕ್ಕೆ—ಕಣ್ಬರಿ; ತಣ್ಬುೞಲ್; ಕಣ್ಬೊಲಂ.

ಬಹುಳವೆಂಬುದಱಿಂದೆ ಕೆಲವೆಡೆಯೊಳಿಲ್ಲ—ತಲೆಕಟ್ಟು; ಬೆಸೆಕೋಲ್; ಒಳಕಯ್ಯೊಳಿರ್ದು ಪಲ್ಗಿರಿದೋಳವಾಲಂಗೊಂಡು; ಏದುಪಂಡಿ.

ಚಟವರ್ಗಕ್ಕೆ ತೃತೀಯತ್ವಮೆಂದುಮಿಲ್ಲದುದರ್ಕೆ—ಕಡುಚಾಗಿ; ಕಣ್ಚಲ್ಲಂ; ಕಡುಟಕ್ಕು; ಪೊಸಟೊಪ್ಪಿಗೆ; ಕಳ್ಳಟಿಪ್ಪಣಂ.

ಸೂತ್ರಂ.

ಒಂದೆರಡರ್ಕೆ ಱಕಾರ
ಕ್ಕಂದಾದಾದೇಶರೇಫೆಗಂ ಡತ್ವಕ್ಕಂ |
ಬಂದಾದೇಶಱಿಕ್ಕಂ
ಸಂಧಿಸದು ತೃತೀಯವೃತ್ತಿ ಕತಪಕ್ಕೆಂದುಂ || 66 ||

The foregoing rule is, for instance, not made use of when ಕ, ತ, ಪ occur after ಒಱ್ and ಇಱ್ (cf. S. 187), after ೯ when substitute of ಡಿ (cf. Ss. 42; 183), and after ೞ್ when substitute of ಡ (Ss. 18; 183).

1) This is: ⏑⏑—|—⏑⏑|—⏑—|⏑⏑⏑|— — —|⏑— —| ⏑—|

ಪದಚ್ಛೇದಂ.

ಒಂದೆರಡರ್ಕೆ, ಱಕಾರಕ್ಕೆ ಅಂದು ಆದ ಆದೇಶರೇಫೆಗಂ, ಡತ್ವಕ್ಕಂ ಬಂದ ಆದೇಶಱುಱಿಕ್ಕಂ ಸಂಧಿಸದು ತೃತೀಯವೃತ್ತಿ ಕತಪಕ್ಕೆ ಎಂದುಂ.

ಅನ್ವಯಂ.

ಒಂದೆರಡರ್ಕೆ, ಱಕಾರಕ್ಕೆ ಅಂದಾದಾದೇಶರೇಫೆಗಂ, ಡತ್ವಕ್ಕಂ ಬಂದಾದೇಶಱುಱಿಕ್ಕಂ ಕತಪಕ್ಕೆ ತೃತೀಯವೃತ್ತಿ ಎಂದುಂ ಸಂಧಿಸದು.

ಟೀಕು.

ಇಲ್ಲಿ ಅನುವರ್ತನೆ-ಪದವಿಧಿಯೊಳ್ ವರ್ಗಪ್ರಥಮಂಗಳ್ ಪರದೊಳಿರೆ (S. 65) ಒಂದೆರಡರ್ಕೆ=ಒಂದೆರಡೆಂಬಿವರ್ಕೆ; ಱಕಾರಕ್ಕೆ=ಱತ್ವಕ್ಕೆ; ಅಂದು=ಆ ಸಮಾಸ ಮಾಡುವಂದು; ಆದಾದೇಶರೇಫೆಗಂ=ಆದ ಆದೇಶದ ರೇಫೆಗೆಯುಂ; ಡತ್ವಕ್ಕಂ=ಡಕಾರಕ್ಕೆಯುಂ; ಬಂದ ಆದೇಶಱುಱಿಕ್ಕಂ=ಬಂದ ಆದೇಶದ ಱುಱಿಕ್ಕೆಯುಂ; ಕತಪಕ್ಕೆ=ಪರಮಾದ ಕತಪಂಗಳ್ಗೆ; ತೃತೀಯವೃತ್ತಿ=ಮೂಱನೆಯಕ್ಷರದ ವೃತ್ತಿ; ಎಂದುಂ=ಆವಾಗಳುಂ; ಸಂಧಿಸದು=ಸಂಘಟನೆಯಾಗದು, ಬಾರದೆಂಬುದರ್ಥಂ.

ವೃತ್ತಿ.

ಒಂದೆರಡೆಂಬಿವರ್ಕಂ, ಱಕಾರಕ್ಕಾದೇಶಮಾದ ರೇಫೆಗಂ, ಡಕಾರಕ್ಕಾದೇಶಮಾದ ಱುಱಿಕ್ಕಂ ಪರಮಾದ ಕ ತ ಪಂಗಳ್ಗೆಂದುಂ ತೃತೀಯತ್ವಮಿಲ್ಲ.

ಪ್ರಯೋಗಂ.

ಒಂದರ್ಕೆ—ಒರ್ಕೈಸಿ ಬಿಲ್ಲಮಂಬುಮ
ಸುರ್ಕಾಳ್ಗಳ್ ಸುರಿಗಿನಿರ್ತು ಮಾಣ್ದರದಾ ಗೋ | (—ನಿಱ್ತು)
ವರ್ಕಳಿದಿರ್ಚಿದ ಘೋಱಾ
ಯ್ತುರ್ಕಳೊಳೆಕ್ಕತುಳುಮಿಱಿದು ಕುಱಿದಱಿಯಾದರ್ || ಕಂದಂ ||

ಒರ್ತುತ್ತೆಂಬಿನಂ ತುತ್ತಿ ದೇವಗಣಕ್ಕಚ್ಚರಿಯಾಗಿ ಪಾಱಿ; ಒರ್ಪಿಡಿಗೂಳುಂ ಸಿತಗನ ಕಪ್ಪಡಮುಂ; ಒರ್ತುತ್ತು; ಒರ್ಪಿಡಿ.

ಎರಡರ್ಕೆ—ಇರ್ಕೋಡಿಯಿಂ ಶೀವಿ ನಾಲ್ದೆಸೆಗಂ ಸೂಸಿ; ಇರ್ತಲೆಗೊಜ್ಜಂ ಪಿರಿದಿರ್ಪತ್ತು ತೋಳುಂ ದಶಮುಖಕುಹರಾಟೋಪಮುಂ.

ಱಕಾರಕ್ಕಾದೇಶಮಾದ ರೇಫೆಗೆ—ಮಾರ್ಕೊರಲ (ಮೂಕೊರಲ) ಭೈರವಂ; ಮಾರ್ಕಟ್ಟಳೆ; ಮಾರ್ತಲೆ; ಮಾರ್ತಪ್ಪ ತೆರೆಗಳಿಂ ತರಲಾರ್ತುದು ತನ್ನದಿಗೆ ಸುರನದಿವಿಭ್ರಮಮಂ. ಬೇರ್ಪಟ್ಟಂ; ಎರ್ಪತ್ತರೆರ್ಪತ್ತರಂ[1] ಪದುಳಂ ಮಾಱ್ಪುದುಂ ಚಿತ್ರಮೆಂದು.

1) Is ಎರ್ಪತ್ತರೆನಲ್ಕೆ ಘಾಯಂ in Caturâsya Nighantu S. 47 the same word?

ಡಕಾರಕ್ಕಾದೇಶಮಾದ ೞಕಾರಕ್ಕೆ—ಕಾೞ್ಕಿಚ್ಚು ತಗುಳೆ ತವೆ್ಮೂಳ್; ಕೋೞ್ಕುಟ್ಟಿ; ಕಾೞ್ತುೞು ಮಸಗಿದ ವೋಲ್ ಆಡಿದುದು; ಕಾೞ್ಪೂರಂ; ನಾೞ್ಪಗರಣಂ; ನಾೞ್ತುಡುಗುಣಿ.

ಸಮುಚ್ಚಯವಶದಿಂದೆ ಕೆಳಗಣ್ಗಾದೇಶವಾದ ೞಕ್ಕಂ ತ್ರಿತೀಯತ್ವಮಿಲ್ಲ, ಕಿೞ್ಕೆೞ[3] (cf. S. 166) ಎಂಬಂತೆ.

ಸೂತ್ರಂ.

After vowels and radical (half) consonants the letters ಪ, ಬ, ಮ are, also in metrical and non-metrical prose, often changed into ವ (cf. Ss. 104; 232; 292).

ವಿದಿತಸ್ವರದಿನನಾದೇ
ಶದ ಸಹಜವ್ಯಂಜನಂಗಳಿಂ ಪರದ ಪವ |
ರ್ಗದ ನೆಲೆಗಕ್ಕುಂ ವತ್ವಂ
ಪದವಿಧಿಯೊಳ್ಬಹುಳವೃತ್ತಿಯಿಂ ವಾಕ್ಯದೊಳಂ || 67 ||

ಪದಚ್ಛೇದಂ.

ವಿದಿತಸ್ವರದಿಂ ಅನಾದೇಶದ ಸಹಜವ್ಯಂಜನಂಗಳಿಂ ಪರದ ಪವರ್ಗದ ನೆಲೆಗೆ ಅಕ್ಕುಂ ವತ್ವಂ ಪದವಿಧಿಯೊಳ್ ಬಹುಳವೃತ್ತಿಯಿಂ; ವಾಕ್ಯದೊಳಂ.

ಅನ್ವಯಂ.

ಪದವಿಧಿಯೊಳ್ ಬಹುಳವೃತ್ತಿಯಿಂ, ವಾಕ್ಯದೊಳಂ, ವಿದಿತಸ್ವರದಿಂ ಅನಾದೇಶದ ಸಹಜವ್ಯಂಜನಂಗಳಿಂ ಪರದ ಪವರ್ಗದ ನೆಲೆಗೆ ವತ್ವಂ ಅಕ್ಕುಂ.

ಟೀಕು.

ಪದವಿಧಿಯೊಳ್=ಸಮಾಸದ ವಿಧಿಯಲ್ಲಿ; ಬಹುಳವೃತ್ತಿಯಿಂ=ಬಹುಳದ ವರ್ತನೆಯಿಂದೆ; ವಾಕ್ಯದೊಳಂ=ವಾಕ್ಯದಲ್ಲಿಯುಂ; ವಿದಿತಸ್ವರದಿ=ಪ್ರಸಿದ್ಧಮಾದ ಸ್ವರಾಕ್ಷರಂಗಳಿಂದೆ; ಅನಾದೇಶದ=ಆದೇಶವಲ್ಲದ; ಸಹಜವ್ಯಂಜನಂಗಳಿಂ=ಸಹಜವಾದ ವ್ಯಂಜನಾಕ್ಷರಂಗಳಿಂದೆ; ಪರದ=ಮುಂದಣ; ಪವರ್ಗದ= || ಪ || ಬ || ಮ ಎಂಬ ಪವರ್ಗದ; ನೆಲೆಗೆ=ಸ್ಥಾನಕ್ಕೆ; ವತ್ವಂ=ವಕಾರಂ; ಅಕ್ಕುಂ=ಅಪ್ಪುದು.

ವೃತ್ತಿ.

ಸ್ವರಂಗಳಿಂದನಾದೇಶದ ಸಹಜವಾದ ವ್ಯಂಜನಂಗಳಿಂ ಪರದೊಳಿರ್ದ ಪವರ್ಗಕ್ಕೆ ಸಮಾಸವಿಷಯದೊಳ್ವತ್ವಮಕ್ಕುಂ; ಬಹುಳಮೆಂಬುದಱಿಂ ಕೆಲವೞಿ[1]ೊಳಿಲ್ಲ; ವಾಕ್ಯದೊಳಂ ವತ್ವಮುಂಟು.

ಪ್ರಯೋಗಂ.

ಸ್ವರಂಗಳ್ಗೆ—

ಪಕಾರಕ್ಕೆ—ಎಳವೆಱೆ ದಾಡೆ ಕೆಂದಳಿರ ನಾಲಗೆ ಮಾಮರದಳ್ಕೆಗೊಂಬಿನಳ್
ಮಿಳಿರ್ವೆಳವಳ್ಳಿ ಬಾಲಮಲರ್ದೊಂಗಲೆ ಕೇಸರಮೆಂಬಿನಂ ಮನಂ|
ಗೊಳೆ ಮಧುಮಾಸಕೇಸರಿ ವಿಯೋಗಿಗಳೆಂಬ ಮೃಗಂಗಳಂ ಭಯಂ
ಗೊಳಿಸಿದುದುದ್ಧಕೀರಮದಕೋಕಿಲಗರ್ಜಿತತರ್ಜಿತಂಗಳಿಂ || ಉತ್ಪಲ
ಮಾಲಿಕಾವೃತ್ತಂ[1] || ಬೆಳೆವೊಲಂ.

ಬಕಾರಕ್ಕೆ—ನಡುವಣ ಕರ್ಪುರಂ ಕಡೆಯಣ
ಕಡುವೆಳ್ಪುಂ ತುದಿಯ ಕೂರ್ಪುಮೆಸದಿರೆ ಜನರಂ |
ಬಿಡದೆಸಲು ತೆಗೆದ ಮದನನ
ನಿಡಿಯಲರ್ಗಣೆಗಳನೆ ಪೋಲ್ತುವಾಕೆಯ ಕಣ್ಗಳ್ || ಕಂದಂ ||

ಮಕಾರಕ್ಕೆ—ಮರವಣೆಗಂ ಬೀಣೆಗಮುಂ
ತರಮಾ(ಗ)ವು ದೋಷರಹಿತಮೃದುಲಲಿತಪದ |
ಸ್ಫುರಿತಸರಸೋಕ್ತಿಗಂ ನಿ
ಷ್ಠುರಕುಕವಿಕರೋಕ್ತಿಗಳ್ಗಮೇನಂತರಮೋ || ಕಂದಂ ||
ಪಳವಾನಿಸಂ.

ಸಹಜವ್ಯಂಜನಕ್ಕೆ—

ಪ—ಎಳೆನೀರ್ವೊನಲ್; ಬ—ಮೆಯ್ಬುಸೆ; ಮ—ಮೆಲ್ಮಾತು.

ಬ—ಆಳ್ಬಲೆ, ತೋಳ್ಬಲೆ, ಕಣ್ಬುಚ್ಚದೆ, ಬೇರ್ವೆರಸಿ, ಗೇಣ್ಬಾಯಿ; ಮ—ಬಾಳ್ಮೀಣಂ.

ಆದೇಶವ್ಯಂಜನಕ್ಕೆ ವತ್ವಮಿಲ್ಲ—

ಬ—ಇರ್ಬಾಳ್[2]; ಮ—ಇರ್ಮಡಿ;
ಧರೆಯೊಳ್ಬೀರದ ಪೆಂಪಿನ
ನರನಿರ್ಮಡಿಯಾ ಬಕಾರಿಯಿಂ ಮೂವಡಿ ಭಾ |
ಸ್ಕರಸುತನಿಂ ನಾಲ್ಮಡಿ ಮುರ
ಹರನಿಂದೈವಡಿ ನೆಗೞ್ತೆಯ ಧಟರ ಭೀಮಂ || ಕಂದಂ ||

ಪ—ಕಿಱುಪ್ಪಡೆ(see s. S. 66).

ಬಹಳಮೆಂಬುದಱಿಂ ಕೆಲವಱೊಳ್ವತ್ವಮಿಲ್ಲ.—

1) 4 Times: ᴗᴗᴗ | ᴗ—ᴗ | —ᴗᴗ | ᴗ—ᴗ | ᴗ—ᴗ | ᴗ—ᴗ | —ᴗ— || (There are two fleeting double consonants in the 2nd line). 2) ಇರ್ was ಎರಡು (S. 187).

ಬ—ಕಣ್ಬ್ಬೇಟಂ, ಸುಡುಬಾಡು; ಮ—ಬಾಳ್ಮೊನೆ, ಪಾಲ್ಮನೆ, ಕತ್ತುರಿಮಿಗಂ; ಪ—ಕಯ್ಪುಟ್ಟೆಗುಟ್ಟಿಯಾಡಿದರ್ (ಕಯ್ಪುಱಿಗು—); ಪೂಪುಣುಂಬು; ಪಲ್ಪುಱಿಗುಟ್ಟಿದಂ.

ವಾಕ್ಯಕ್ಕೆ ವತ್ವಂ—

ತಮುರೂರ್ಗೆವೋಪ ಕುಲಜಾಂಗನೆಯರ್; ದಿವದಿಂ ಕೆಲಸಕ್ಕೆವರ್ಪ ದಿವಿಜಾಂಗನೆಯರ್[1]; ಬೇಗೆವಂದಂ; ತರವೇಟ್ಟಂ.

ಸೂತ್ರಂ.

ಸ is often changed into ಚ, ಜ and ಛ after the consonants with the exception of ಯ and ಲ.

ಇರೆ ಯಲರಹಿತವ್ಯಂಜನ
ಪರಮಾಗಿ ಸಕಾರಮಲ್ಲಿ ಬಹುಳಂ ಚತ್ತಂ |
ಅರೆಯೆಡೆಯೊಳ್ಜತ್ತಂ ಮೇ
ಣರೆಯೆಡೆಯೊಳ್ಸಂಖ್ಯೆಯಾಗೆ ನಿಯತಂ ಛತ್ತಂ || 68 ||

ಪದಚ್ಛೇದಂ.

ಇರೆ ಯಲರಹಿತವ್ಯಂಜನಪರಂ ಆಗಿ ಸಕಾರಂ, ಅಲ್ಲಿ ಬಹುಳಂ ಚತ್ವಂ; ಅರೆ ಎಡೆಯೊಳ್ ಜತ್ವಂ; ಮೇಣ್ ಅರೆ ಎಡೆಯೊಳ್, ಸಂಖ್ಯೆ ಆಗೆ, ನಿಯತಂ ಛತ್ವಂ.

ಅನ್ವಯಂ.

ಯಲರಹಿತವ್ಯಂಜನಪರಂ ಆಗಿ ಸಕಾರಂ ಇರೆ, ಅಲ್ಲಿ ಬಹುಳಂ ಚತ್ವಂ; ಅರೆ ಎಡೆಯೊಳ್ ಜತ್ವಂ; ಮೇಣ್ ಅರೆ ಎಡೆಯೊಳ್, ಸಂಖ್ಯೆ ಆಗೆ, ನಿಯತಂ ಛತ್ವಂ.

ಟೀಕು.

ಯಲರಹಿತ=ಯಕಾರ ಲಕಾರಂಗಳಿಂ ವಿರಹಿತಂಗಳಾದ; ವ್ಯಂಜನ=ವ್ಯಂಜನಂಗಳ್ಗೆ; ಪರಂ=ಮುಂದಣಕ್ಷರಂ; ಆಗಿ=ಆಗಿ; ಸಕಾರಂ=ಸತ್ವಂ; ಇರೆ=ಇರೆ; ಅಲ್ಲಿ=ಆ ಸ್ಥಾನದಲ್ಲಿ; ಬಹುಳಂ=ಬಹುಳವಾಗಿ; ಚತ್ವಂ=ಚಕಾರವಪ್ಪುದು; ಅರೆಯೆಡೆಯೊಳ್=ಕೆಲವೆಡೆಯಲ್ಲಿ; ಜತ್ವಂ=ಜಕಾರವಪ್ಪುದು; ಮೇಣ್=ಅದಲ್ಲದೆ; ಆರೆಯೆಡೆಯೊಳ್=ಕಿಱಿದೆಡೆಯಲ್ಲಿ; ಸಂಖ್ಯೆ=ಸಂಖ್ಯಾವಾಚಿ; ಆಗೆ=ಆಗೆ; ನಿಯತಂ=ಕಟ್ಟಾಗಿ; ಛತ್ವಂ=ಛಕಾರವಪ್ಪುದು.

ವೃತ್ತಿ.

ಯಕಾರ ಲಕಾರಂಗಳಂ ಕಳೆದುಳಿದ ವ್ಯಂಜನಂಗಳ್ಗೆ ಪರಮಾಗಿ ನಿಂದ ಸಕಾರಂ ಬಹುಳತೆಯಿಂ ಚತ್ತಮಕ್ಕುಂ; ಕೆಲವೆಡೆಯೊಳ್ಜತ್ತಮಕ್ಕುಂ; ಕಿಱಿದೆಡೆಯೊಳ್ಸಂಖ್ಯೆಯಾಗೆ ಛತ್ತಮಕ್ಕುಂ.

1) Till here it is ಗದ್ಯಕಾವ್ಯಂ (S. 59) i. e. ⏑⏑⏑⏑ in its different forms.

ಪ್ರಯೋಗಂ.

ಚತ್ವಕ್ಕೆ—ನುಣ್ಚರದ ಬಿಣ್ಪು ಘನಘೋಷಗಭೀರಂ. ಇನ್ಚರದಿನಾಣತಿ ಮಾಡಿ ದುದುನ್ನಾದಾಳಿ.

ಜತ್ವಕ್ಕೆ—ಪೊಂಜುರಿಗೆ; ಮುಂಜೂರ್; ಮುಂಜೆಱಗು; ತಣ್ಜೊಡರ್.

ಛತ್ವಕ್ಕೆ—ಇರ್ಛಾಸಿರಂ; ನೂರ್ಛಾಸಿರಂ; ಪದಿನೆಣ್ಛಾಸಿರಂ ಲೋಹವಕ್ಕರೆಯ ಜಾತ್ಯಶ್ವಂಗಳಿರ್ಛಾಸಿರಂ ಮದವಂ ಮುಕ್ಕುಳಿಸಿರ್ದ ದಂತಿಘಟೆಗಳ್ ನೂರ್ಛಾಸಿರಂಗಳ ವೋಲಾಯ್ತು ರಥಕಡುವೇಗದಿಂ (cf. s. S. 14).

ಬಹುಳಮೆಂಬುದಱಿಂ ಕೆಲವೆಡೆಯೊಳಿಲ್ಲ—

ಕಣ್ಸೋಲಮುನಱಿಯಂ ಪರ
ವೆಣ್ಸುರವಧುಗೆಣೆಯೆನಿಪ್ಪೊಡಂ ತೊಡರ್ದಾತಂ |
ಮೆಣ್ಸುರನಗಕ್ಕಮುಚಲಪ
ವಣ್ಸರಿಕೇಲ್ಸರಿಗೆವಾರನಹಿತಕ್ಷತಾಂತಂ || ಕಂದಂ ||

ಬೆಳ್ಸರಿ; ಕಳ್ಸವಿಗೆ ಕುಡಿದು.

ಯಲರಹಿತಕ್ಕೆ—

ಬಾಯ್ಸವಿಗೆ; ಮೆಯ್ಸೊಬಗು; ಕಯ್ಸುರಿಗೆ; ಬಲ್ಸೋನೆ; ಕಲ್ಸೆರೆ; ಮೆಲ್ಸರಂ.
ಬಹುಳಮೆಂಬುದಱಿಂ ಸ್ವರಂಗಳ ಪರದಲ್ಲಿರ್ದ ಸಕಾರಕ್ಕಂ ಕೆಲವೆಡೆಗಳಲ್ಲಿ ಚಕಾರ ಜಕಾರಂಗಳಪ್ಪುವು—

ಮುಚ್ಚರೆ [M. A. ಮುಚ್ಚೆರೆ]; ಮುಚ್ಚಾಲ್; ತುಡುಜೊಡರ್.

ಸೂತ್ರಂ.

ಮೊದಲೊಳ್ ಹ್ರಸ್ವೈಕಸ್ವರ
ಮೊದವೆ ಪರಂ ಸ್ವರಮುದಾಗೆ ನಣಲಯಳಂಗ |
ಳ್ಗುದಯಿಸುಗುಂ ದ್ವಿತ್ವಂ ಪೂ
ರ್ವದೀರ್ಘಕವ್ಯಯಕೆ ವರ್ಣತತಿಗದ್ವಿತ್ವಂ || 69 ||

When the vowel of *monosyllabic* Nominal themes ending in ನ್, ಣ್, ಲ್, ಯ್, ಳ್ (cf. S. 48) is short, and such themes meet with an initial vowel, their end-consonant must be doubled (cf. S. 180). Particles (Adverbs) of such a description are excepted from this rule.

ಪದಚ್ಛೇದಂ.

ಮೊದಲೊಳ್ ಹ್ರಸ್ವೈಕಸ್ವರಂ ಒದವೆ, ಪರಂ ಸ್ವರಂ ಅದು ಆಗೆ, ನ ಣ ಲ ಯ ಳಂಗಳ್ಗೆ ಉದಯಿಸುಗುಂ ದ್ವಿತ್ವಂ; ಪೂರ್ವದೀರ್ಘಕೆ, ಅವ್ಯಯಕೆ, ವರ್ಣತತಿಗೆ ಅದ್ವಿತ್ವಂ.

ಅನ್ವಯಂ.

ಮೊದಲೊಳ್ ಹ್ರಸ್ವೈಕಸ್ವರಂ ಒದವೆ, ಸ್ವರಂ ಅದು ಪರಂ ಆಗೆ, ನ ಣ ಲ ಯ ಳಂಗಳ್ಗೆ ದ್ವಿತ್ವಂ ಉದಯಿಸುಗುಂ; ಪೂರ್ವದೀರ್ಘಕೆ, ಅವ್ಯಯಕೆ, ವರ್ಣತತಿಗೆ ಅದ್ವಿತ್ವಂ.

ಟೀಕು.

ಮೊದಲೊಳ್=ಆದಿಯಲ್ಲಿ; ಹ್ರಸ್ವ=ಹ್ರಸ್ವವಾದ; ಏಕ=ಒಂದು; ಸ್ವರಂ=ಸ್ವರಾಕ್ಷರಂ; ಒದವೆ=ಪ್ರಾಪ್ತಿಸೆ; ಸ್ವರಂ=ಸ್ವರಾಕ್ಷರಂ; ಅದು=ಅದು; ಪರಂ=ಮುಂದು; ಆಗೆ=ಆಗೆ; ನ ಣ ಲ ಯ ಳಂಗಳ್ಗೆ=ನಕಾರ ಣಕಾರ ಲಕಾರ ಯಕಾರ ಳಕಾರಂಗಳ್ಗೆ; ದ್ವಿತ್ವಂ=ದ್ವಿರ್ಭಾವಂ; ಉದಯಿಸುಗುಂ=ಹುಟ್ಟುವುದು; ಪೂರ್ವದೀರ್ಘಕೆ=ಆದಿದೀರ್ಘಕ್ಕೆ; ಅವ್ಯಯಕ್ಕೆ=ಅವ್ಯಯಶಬ್ದಂಗಳ್ಗೆ; ವರ್ಣತತಿಗೆ=ಅನೇಕಾಕ್ಷರಕ್ಕೆ; ಅದ್ವಿತ್ವಂ=ದ್ವಿತ್ವಮಿಲ್ಲ.

ವೃತ್ತಿ.

ಹ್ರಸ್ವಮಪ್ಪೇಕಸ್ವರಂ ಪೂರ್ವಮಾಗೆ, ಸ್ವರಂ ಪರಮಾಗೆ, ನಣಲಯಳಕಾರಂಗಳ್ಗೆ ದ್ವಿತ್ವಮುಂಟು; ಪೂರ್ವದೀರ್ಘಮಾದೊಡಂ ಅವ್ಯಯಮಾದೊಡಂ ಅನೇಕಾಕ್ಷರಮಾದೊಡಂ ದ್ವಿತ್ವಮಿಲ್ಲ.

ಪ್ರಯೋಗಂ.

ಆದಿಹ್ರಸ್ವಮಾಗೆ

ನಕಾರದ್ವಿರ್ಭಾವಕ್ಕೆ—ಬೆನ್ನಪ್ಪಳಿಸೆ.

ಣಕಾರಕ್ಕೆ—ಕಣ್ಣಿಂ; ಪೆಣ್ಣಿಂ; ಉಣ್ಣಾಳ್; ಪಣ್ಣಿಂ.

ಪೊನ್ನುಳ್ಳವನೆ ಕುಲೀನಂ
ಚೆನ್ನಂ ಕಲಿ ಸತ್ಯದಾರಿಯೆನಿಸುಗುವುದಱಿಂ |
ದಿನ್ನುಂ ಪೊನ್ನನೆ ಪಡೆವುದು
ಪೊನ್ನಿಂ ಸಮನಿಸುಗುಮಲ್ತೆ ಪೆಣ್ಣುಂ ಮಣ್ಣುಂ || ಕಂದಂ ||

ಲಕಾರಕ್ಕೆ—ಕಲ್ಲೆಲ್ಲಂ; ಪುಲ್ಲುಂ; ನೆಲ್ಲುಂ.

ಯಕಾರಕ್ಕೆ—ಮೆಯ್ಯಂ; ಕೆಯ್ಯಂ; ಪೊಯ್ಯೊ.

ಳಕಾರಕ್ಕೆ—ಮುಳ್ಳಾಗಿ; ಕಳ್ಳಾಟಂ; ಒಳ್ಳಾಳ್; ಎಳ್ಳಂ.

ಪೂರ್ವದೀರ್ಘಮಾಗೆ

ನಕಾರಕ್ಕೆ—ಮೀನಾಗಿಯುಂ; ತಾನೆಲ್ಲಂ; ಬಾನುದ್ದಂ; ಏನಾಯ್ತು.

ಣಕಾರಕ್ಕೆ—ಜಾಣಂ; ನಾಣಂ.

ಲಕಾರಕ್ಕೆ—ಕೇಲಂ; ಕೋಲಂ; ಕೀಲಂ; ನೂಲಂ.

ಯಕಾರಕ್ಕೆ—ತಾಯೊರ್ವಳ್; ಬಾಯಾರ್ವಳ್.

ಳಕಾರಕ್ಕೆ—ಆಳಾಳ್; ತೋಳಾಟಂ; ಬಾಳೊಪ್ಪಂ.

ಅವ್ಯಯಕ್ಕೆ—ಕಲಿ ದಲಿವಂ (=ಕಲಿ ದಲ್ ಇವಂ).
ಅನೇಕಾಕ್ಷರಕ್ಕೆ—ಶರಣರಾರು; ಪರಲೆಲ್ಲಂ; ತೊದಳುಂಟೆ; ಪವಣಿಲ್ಲಂ.

ಸೂತ್ರಂ.

Monosyllabic Verbal themes ending in ನ್, ಣ್, ಲ್, ಯ್, ಳ್ do not allow that doubling when the ಅಲ್ (Ss. 61; 234) or other such affixes are joined; with some ending in ಯ್, also when polysyllabic with long initials, it is optional; with other themes (ಉಯ್, 512, ನೆಯ್, 510, ಸುಯ್, 514, ಬಯ್, 508) it is obligatory, also in being conjugated.

ಧಾತುಗಳುಂ ಪರಮಾದೊಡ
ಜಾತಂ ದ್ವಿತ್ವಂ ಯಕಾರದಲ್ಲಿ ವಿಕಲ್ಪಂ |
ಮಾತೇನುಯ್ನೆಯ್ಸುಯ್ಬ
ಯ್ಧಾತುಗಳೊಳ್ದ್ವಿತ್ವಮಲ್ಲದಿಲ್ಲ ವಿಕಲ್ಪಂ || 70 ||

ಪದಚ್ಛೇದಂ.

ಧಾತುಗೆ ಅಲುಂ ಪರಂ ಆದೊಡೆ, ಅಜಾತಂ ದ್ವಿತ್ವಂ; ಯಕಾರದಲ್ಲಿ ವಿಕಲ್ಪಂ, ಮಾತೇಂ; ಉಯ್ ನೆಯ್ ಸುಯ್ ಬಯ್ ಧಾತುಗಳೊಳ್ ದ್ವಿತ್ವಂ ಅಲ್ಲದೆ ಇಲ್ಲ ವಿಕಲ್ಪಂ.

ಅನ್ವಯಂ.

ಧಾತುಗೆ ಅಲುಂ ಪರಂ ಆದೊಡೆ, ದ್ವಿತ್ವಂ ಅಜಾತಂ; ಯಕಾರದಲ್ಲಿ ವಿಕಲ್ಪಂ, ಮಾತೇಂ; ಉಯ್ನೆಯ್ಸುಯ್ಬಯ್ಧಾತುಗಳೊಳ್ ದ್ವಿತ್ವಂ ಅಲ್ಲದೆ ವಿಕಲ್ಪಂ ಇಲ್ಲ.

ಟೀಕು.

ಅನುವರ್ತನೆ--ನಣಲಯಳಕಾರಂಗಳಂತ್ಯವಾದ ಧಾತುಗೆ=ಧಾತುಗಳ್ಗೆ; ಅಲುಂ=ಅಲ್ ಎಂಬುದುಂ, ಉಂ ಎಂಬ ಸಮುಚ್ಚಯದಿಂದೆ ಏಕಾರಾದಿಸ್ವರಂಗಳುಂ; ಪರಂ=ಮುಂದು; ಆದೊಡೆ=ಆದರೆ; ದ್ವಿತ್ವಂ=ದ್ವಿಭಾರ್ವಂ; ಅಜಾತಂ=ಹುಟ್ಟದು; ಯಕಾರದಲ್ಲಿ=ಯಕಾರಾಂತಧಾತುವಿನಲ್ಲಿ; ವಿಕಲ್ಪಂ=ವಿಕಲ್ಪವಾಗಿ ಬರ್ಪುದು; ಮಾತೇಂ[1]=ಹೇಳ್ವುದೇಂ; ಉಯ್ನೆಯ್ಸುಯ್ಬಯ್ಧಾತುಗಳೊಳ್=ಉಯ್ || ನೆಯ್ || ಸುಯ್ || ಬಯ್ || ಎಂಬ ಧಾತುಗಳಲ್ಲಿ; ದ್ವಿತ್ವಮಲ್ಲದೆ=ದ್ವಿಭಾರ್ವಮಲ್ಲದೆ; ವಿಕಲ್ಪಂ=ವಿಕಲ್ಪಂ; ಇಲ್ಲ=ಉಂಟಾಗದು.

ವೃತ್ತಿ.

ನಣಲಯಳಕಾರಂಗಳಂತ್ಯಮಾದ ಧಾತುಗಲ್ಪರಮಾದೊಡಂ ದ್ವಿತ್ವಮಿಲ್ಲ; ಯಕಾರಾಂತದಲ್ಲಿ ವಿಕಲ್ಪಂ; ಉಯ್ ನೆಯ್ ಸುಯ್ ಬಯ್ ಎಂಬವರ್ಕೆ ಅಲ್ಪರಮಾದೊಡಂ ವಿಭಕ್ತಿಸ್ವರಂ ಪರಮಾದೊಡಂ ದ್ವಿತ್ವಂ ನಿತ್ಯಂ.

1) It is long for the metre, if it refers to S. 219.

## ಪ್ರಯೋಗಂ.

ಅದ್ವಿತ್ವಕ್ಕೆ—(ತಿನ್+ಅಲ್=ತಿನಲ್) ತಿನಲ್ಕೊಂದಂ; ಉಣಲ್ಬಂದಂ; ಮೆಲಲ್ಪೋದಂ; ಕೊಲಲ್ಬಗೆವಂ; ಕೊಳಲ್ಸಾರ್ದಂ; ಕಳಲ್ನೋಡಿದಂ.

ಯತ್ವಕ್ಕೆ—ಪೊಯಲುಂ, ಪೊಯ್ಯಲುಂ; ಕೊಯಲುಂ, ಕೊಯ್ಯಲುಂ.—ಆದಿ ದೀರ್ಘಮಾದೊಡಂ ಅನೇಕಾಕ್ಷರಮಾದೊಡಂ ವಿಭಕ್ತಿಸ್ವರಮುಂ ಪರಮಾದೊಡಂ ಆರಯ್ ಎಂಬ ಧಾತುಗೆ ದ್ವಿತ್ವವಿಕಲ್ಪಂ—ಆರಯಲುಂ, ಆರಯ್ಯಲುಂ; ಆರಯಿಂ, ಆರಯ್ಯಿಂ; ಆರಯೆ, ಆರಯ್ಯೆ ಎಂಬಂತೆ.

ಉಯ್ಯಾದಿನಿತ್ಯದ್ವಿತ್ವಕ್ಕೆ—ಉಯ್ಯಂ, ನೆಯ್ಯರ್, ಸುಯ್ಯಯ್, ಬಯ್ಯವು; ಉಯ್ಯಲುಂ, ನೆಯ್ಯಲುಂ ಎಂಬಂತೆ.—ಸಮುಚ್ಚಯವಶದಿಂದೆಕಾರಾದಿಸ್ವರಂ ಪರಮಾದೊಡಂ ದ್ವಿತ್ವಮಿಲ್ಲ—(ಎನ್+ಎ)=ಎನೆ; (ಕೊಲ್+ಎ) ಕೊಲೆ; ಉಣೞ್; ಉಣಲೊಡಂ, ಕಳಲೊಡಂ ಎಂಬಂತೆ.

## ಸೂತ್ರಂ.

The final ನ್, ಣ್, ಲ್, ಯ್, ಳ್ of all monosyllabic Verbal themes (only excepting ಕಳ್, 946), however, must be doubled in the Negative mood (S. 216).

ಪ್ರತಿಷೇಧದ ಧಾತುಗೆ ಮುಂ
ದೆ ತಱುಂಬೆ ವಿಭಕ್ತಿ ಪೂರ್ವಕಾಲಕ್ರಿಯೆಯೊಳ್ |
ಪ್ರತಿಷೇಧದದೆಂಬುದು ಮುಂ
ದೆ ತೋಱೆ ಮೇಣ್ ದ್ವಿತ್ವವೃತ್ತಿ ನಿತ್ಯಮೆನಿಕ್ಕುಂ || 71 ||

## ಪದಚ್ಛೇದಂ.

ಪ್ರತಿಷೇಧದ ಧಾತುಗೆ ಮುಂದೆ ತಱುಂಬೆ ವಿಭಕ್ತಿ, ಪೂರ್ವಕಾಲಕ್ರಿಯೆಯೊಳ್ ಪ್ರತಿಷೇಧದ ಅದೆ ಎಂಬುದು ಮುಂದೆ ತೋಱೆ ಮೇಣ್, ದ್ವಿತ್ವವೃತ್ತಿ ನಿತ್ಯಂ ಎನಿಕ್ಕುಂ.

## ಅನ್ವಯಂ.

ಪ್ರತಿಷೇಧದ ಧಾತುಗೆ ಮುಂದೆ ವಿಭಕ್ತಿ ತಱುಂಬೆ, ಮೇಣ್ ಪೂರ್ವಕಾಲಕ್ರಿಯೆಯೊಳ್ ಪ್ರತಿಷೇಧದ ಅದೆ ಎಂಬುದು ಮುಂದೆ ತೋಱೆ, ದ್ವಿತ್ವವೃತ್ತಿ ನಿತ್ಯಂ ಎನಿಕ್ಕುಂ.

## ಟೀಕು.

ಅನುವರ್ತನೆ—ನಣಲಯಳಕಾರಂಗಳಂತ್ಯವಾದ ಪ್ರತಿಷೇಧದ=ಪ್ರತಿಷೇಧಾರ್ಥದ; ಧಾತುಗೆ=ಧಾತುಗಳ್ಗೆ; ಮುಂದೆ=ಮುಂದುಗಡೆಯಲ್ಲಿ; ವಿಭಕ್ತಿ=ಪ್ರತ್ಯಯಂ; ತಱುಂಬೆ=ನಿಂದಿರೆ; ಮೇಣ್=ಅದಲ್ಲದೆ; ಪೂರ್ವಕಾಲಕ್ರಿಯೆಯೊಳ್=ಭೂತಕಾಲಕ್ರಿಯೆಯಲ್ಲಿ; ಪ್ರತಿಷೇಧದ=ಪ್ರತಿಷೇಧಾರ್ಥದ; ಅದೆ ಎಂಬುದು=ಅದೆ ಎಂಬುದು; ಮುಂದೆ=ಮುಂಗಡೆಯಲ್ಲಿ; ತೋಱೆ=ಕಾಣಿಸೆ; ದ್ವಿತ್ವವೃತ್ತಿ=ದ್ವಿರ್ಭಾವದ ವೃತ್ತಿ; ನಿತ್ಯಂ=ನಿತ್ಯಂ; ಎನಿಕ್ಕುಂ=ಎನಿಸುವುದು.

### ವೃತ್ತಿ.

ಪ್ರತಿಷೇಧದರ್ಥದೊಳೆ ಧಾತುವಿಂಗೆ ವಿಭಕ್ತಿ ಪರಮಾದೊಡಂ, ಭೂತಕಾಲ ಕ್ರಿಯೆಯೊಳ್ ಪ್ರತಿಷೇಧಮನುಸಿರ್ವ ಅದೆ ಎಂಬುದು ಪರಮಾದೊಡಂ, ನ ಣ ಲ ಯ ಳಂಗಳ್ಗೆ ದ್ವಿತ್ವಪ್ರವೃತ್ತಿ ನಿತ್ಯಂ.

### ಪ್ರಯೋಗಂ.

ವಿಭಕ್ತಿಗೆ—ಎನ್ನಂ, ಎನ್ನರ್; ಉಣ್ಣಂ, ಉಣ್ಣರ್; ಮೆಲ್ಲಯ್, ಮೆಲ್ಲರ್; ಬಯ್ಯೆನ್, ಬಯ್ಯೆವು; ಕೊಳ್ಳೆನ್, ಕೊಳ್ಳೆವು.

ಅದೆಗೆ—ಎನ್ನದೆ, ತಿನ್ನದೆ, ಉಣ್ಣದೆ, ಒಲ್ಲದೆ, ಬಯ್ಯದೆ, ಕೊಳ್ಳದೆ.

ಮೇಣೆಂಬುದಱಿಂ ಕಳ್ ಎಂಬ ಧಾತುವಿಂಗೆಲ್ಲಿಯುಂ ದ್ವಿತ್ವಮಿಲ್ಲ—ಕಳಲ್ವೋದಂ, ಕಳಲ್ಬಂದಂ, ಕಳದೆ ಬಂದಂ ಇಂತಱಿವುದು.

### ಗದ್ಯ.

ಇದು ಸಮಸ್ತಶಾಬ್ದಿಕಜನಮನೋಜನಿತಶಬ್ದಸಂದೇಹಶಲ್ಯಚಾರುಚುಂಬಕಾಯಮಾನಾನೂನಕರ್ಣಾಟಕಲಕ್ಷಣಶಿಕ್ಷಾಚಾರ್ಯಸುಕವಿಕೇಶಿರಾಜವಿರಚಿತಮಪ್ಪ ಶಬ್ದಮಣಿದರ್ಪಣದೊಳ್ ಸಂಧಿಕಾರ್ಯಮೆಂಬ ಪ್ರಥಮಸಂಧಿ ಸಂಪೂರ್ಣಂ.

೧ನೆಯ ಅಧ್ಯಾಯಂ ಸಮಾಪ್ತಂ.



# ೨ನೆಯ ಅಧ್ಯಾಯಂ. II. CHAPTER.

## ನಾಮಪ್ರಕರಣಂ.

ON NOUNS.

ಸೂತ್ರಂ.

Nominal themes (ಲಿಂಗಂ, S. 35)[1] are either primary Verbal forms (ಕೃತ್), or Secondary forms (ತದ್ಧಿತಂ, Chapter IV), or Compound forms (ಸಮಾಸಂ, Chapter III), or Ready nouns (ನಾಮಂ). Their Declension.

ಕ್ರಿಯೆಯಂ ನುಡಿಯದುದು ವಿಭ
ಕ್ತಿಯನಿಲ್ಲದುದರ್ಥಮುಳ್ಳುದಂತದು ಲಿಂಗಂ |
ನಿಯತಚತುರ್ಭೇದಮದಾ
ರಯೆ ಕೃತ್ತದ್ಧಿತಸಮಾಸನಾಮಸ್ಥಿತಿಯಿಂ || 72 ||

ಪದಚ್ಛೇದಂ.

ಕ್ರಿಯೆಯಂ ನುಡಿಯದುದು, ವಿಭಕ್ತಿಯಂ ಇಲ್ಲದುದು, ಅರ್ಥಂ ಉಳ್ಳುದು, ಅಂತು ಅದು ಲಿಂಗಂ; ನಿಯತಚತುರ್ಭೇದಂ, ಅದು ಆರಯೆ, ಕೃತ್ತದ್ಧಿತಸಮಾಸನಾಮಸ್ಥಿತಿಯಿಂ.

ಅನ್ವಯಂ.

ಕ್ರಿಯೆಯಂ ನುಡಿಯದುದು, ವಿಭಕ್ತಿಯಂ ಇಲ್ಲದುದು, ಅರ್ಥಂ ಉಳ್ಳುದು, ಅಂತು ಅದು ಲಿಂಗಂ; ಅದು ಆರಯೆ, ಕೃತ್ತದ್ಧಿತಸಮಾಸನಾಮಸ್ಥಿತಿಯಿಂ ನಿಯತಚತುರ್ಭೇದಂ.

ಟೀಕು.

ಕ್ರಿಯೆಯಂ=ಕ್ರಿಯಾರ್ಥವಂ; ನುಡಿಯದುದು=ಹೇಳದುದು; ವಿಭಕ್ತಿಯಂ=ಸಪ್ತವಿಭಕ್ತಿಗಳಂ; ಇಲ್ಲದುದು=ಇಲ್ಲದೆ ಇರ್ದುದು; ಅರ್ಥಂ=ಪುರುಳ್; ಉಳ್ಳುದು=ಉಂಟಾದುದು; ಅಂತು=ಹಾಂಗೆ; ಅದು=ಅದು; ಲಿಂಗಂ=ಲಿಂಗವೆನಿಸುವುದು; ಅದು=ಆ ಲಿಂಗಂ; ಆರಯೆ=ವಿಚಾರಿಸೆ; ಕೃತ್ತದ್ಧಿತಸಮಾಸನಾಮಂ=ಕೃಲ್ಲಿಂಗಮೆಂಬ, ತದ್ಧಿತಲಿಂಗಮೆಂಬ, ಸಮಾಸಲಿಂಗಮೆಂಬ ನಾಮಲಿಂಗಮೆಂಬ; ಸ್ಥಿತಿಯಿಂ=ಇರ್ಕೆಯಿಂದೆ; ನಿಯತ=ನಿಶ್ಚಿತವಾದ; ಚತುರ್ಭೇದಂ=ನಾಲ್ಕು ಭೇದವಾಗಿರ್ಪುದು.

1) In A. Weber's Indische Studien IV, p. 291 we have the following: ನಾಮ ತ್ರಿಪ್ರಕಾರಂ ಭವತಿ ಕೃತ್— ತದ್ಧಿತ— ಸಮಾಸಸಂಜ್ಞಾಭೇದೇನ.

ವೃತ್ತಿ.

ಕ್ರಿಯಾವಾಚಕವಾಗಿ ಸಲ್ಲದುದು, ಸಪ್ತವಿಭಕ್ತಿಗಳನಿಲ್ಲದುದು, ನಿರರ್ಥವಾಗಿ ಸಲ್ಲದುದು ಲಿಂಗಮೆನಿಸುಗುಂ; ಆ ಲಿಂಗಂ, ಕೃತ್ತೆಂದು, ತದ್ಧಿತವೆಂದು, ಸಮಾಸಮೆಂದು, ನಾಮಮೆಂದು, ನಾಲ್ಕು ತೆಱನಕ್ಕುಂ.

ಪ್ರಯೋಗಂ.

ನಾಮವಿಭಕ್ತಿ ಪತ್ತಿಸುವುದು

ಕೃತ್ತಿಂಗೆ—

ಮಾಡಿದ, ಬೇಡಿದ, ನೋಡಿದ ಕೂಡಿದ ಎಂದಿರಿಸಿ, ಕೃತ್ತನಱಿವುದು (S. 73); ತರುವಾಯಿಂ—ಮಾಡಿದಂ, ಮಾಡಿದನಂ, ಮಾಡಿದನಿಂ, ಮಾಡಿದಂಗೆ, ಮಾಡಿದನತ್ತಣಿಂ, ಮಾಡಿದನ, ಮಾಡಿದನೊಳ್ ಎಂದೀ ಪರಿ ವಿಭಕ್ತಿಮಾಲೆಯಕ್ಕುಂ. ತಣ್ಣನಿರ್ದ ಜಸದಿಂ ಬೆಳ್ದಿಂಗಳಂ ಮಾಡಿದಂ. ಬೇಡಿದನಿಪ್ಪವಂ (ಸುಲಿಪುದು) ಸಲಿಪುದು ಕರ್ಣಂಗೆ. ಜನ್ಮವ್ರತಂ ಕೂಡಿದಂಗೆರಡಂ ತಾ ಬಗೆವಾತನುಂ ನರಕದೊಳ್ ಬೀೞ್ಗುಲ್ಲಿಗೇಂ ಸಂದಯಂ.

ತದ್ಧಿತಕ್ಕೆ—

(ಅಡಪ+ವಳ, S. 198) ಅಡಪವಳ, (ಮಡಿ+ವಳ) ಮಡಿವಳ ಎಂದಿರಿಸಿ, ತದ್ಧಿತಮನಱಿವುದು; ತರುವಾಯಿಂ—ಅಡಪವಳಂ, ಅಡಪವಳನಂ, ಅಡಪವಳನಿಂ, ಅಡಪವಳಂಗೆ, ಅಡಪವಳನತ್ತಣಿಂ, ಅಡಪವಳನ, ಅಡಪವಳನೊಳ್ ಇಂತಕ್ಕುಂ.

ಷಟ್ಸಮಾಸಂಗಳ್ಗಂ[1] ಸಪ್ತವಿಭಕ್ತಿಯುಂ ಪತ್ತಿಸುವುದು

ಕನ್ನಡಸಮಾಸಕ್ಕೆ—

(ತೆಂ+ಗಾಳಿ) ತೆಂಗಾಳಿ, ತೆಂಗಾಳಿಯುಂ, ತೆಂಗಾಳಿಯಿಂ, ತೆಂಗಾಳಿಗೆ, ತೆಂಗಾಳಿಯತ್ತಣಿಂ, ತೆಂಗಾಳಿಯ, ತೆಂಗಾಳಿಯೊಳ್.—(ಇಮ್+ಮಾವು) ಇಮ್ಮಾವು; ಈರೈದು; ಕುಡುಮಿಲ್ಲಂ; ಮರಗಿಡುಬಳ್ಳಿ; ಪುಲ್ಪೊದಱ್; ಪಕ್ಕಿಮಿಗಂಗಳ್; ಮುಂಗಯ್.

ಸಂಸ್ಕೃತಸಮಾಸದಲ್ಲಿ—

ಪುರವನ, ನೀಲೋತ್ಪಲ, ತ್ರಿಶೂಲ, ಸದಯ, ತರುಲತೆ, ಜಿತಮದನ ಎಂಬಿವು ಮವಱಂತೆ ಲಿಂಗಂಗಳಪ್ಪುವು; ಇವರ್ಕಂ ವಿಭಕ್ತಿ ಪತ್ತಿಸುವುದು—ಪುರವನಂ, ಪುರವನಮುಂ, ಪುರವನದಿಂ, ಪುರವನಕೆ, ಪುರವನದತ್ತಣಿಂ, ಪುರವನದ, ಪುರವನದೊಳ್.

1) ಸಂಸ್ಕೃತದಲ್ಲಿ ದ್ವಂದ್ವಾದಿ 6 ಸಮಾಸಂಗಳಾಗುವವು.

ಆದವಿಷ್ಣು ಎಂಬ (ಕನ್ನಡದ) ಗಮಕಸಮಾಸಮುಂ (S. 168) ಪಿರಿದೀವ ಎಂಬ (ಕನ್ನಡದ) ಕ್ರಿಯಾಸಮಾಸಮುಂ (S. 167) ಕೃತ್ತ್ರವಿಪ್ಪಲಿಂಗಂಗಳ್; ಇವುಮವಱಂತೆ ಸಲ್ವುವು—ಜಲದನಿಭೋದಸ್ಥಲನಾದವಿಷ್ಣುವಿಜಯಾದಿತ್ಯಂ; ಪಿರಿದೀವಂ ನಿಲೆನುಡಿವಂ.

ನಾಮಲಿಂಗಕ್ಕೆ—

ಅರಸ, ಇಂದ್ರ, ವೊಲ, ವರಾಹ, ಹರಿಣ, ಮೂಷಕ ಎಂದಿರಿಸಿ, ಸಪ್ತವಿಭಕ್ತಿಯಂ ಪತ್ತಿಸುವುದು—ಅರಸಂ, ಅರಸನಂ, ಅರಸನಿಂ, ಅರಸಂಗೆ, ಅರಸನತ್ತಣಿಂ, ಅರಸನ, ಅರಸನೊಳ್. ಈ ಪರಿಯಿನಱಿವುದು. ಅರಸಂ ಮೂರ್ಖಂ; ಶಬರ್ ಸರಸ್ವತಿದ್ರೋಹರ್. ಅರಸನೆಂಬುದರ್ಕೆ ಅರಸು ಎಂದುಮುಂಟು. ಕ್ರಿಯಾರ್ಥಮಂ ನುಡಿವ ಧಾತು ಲಿಂಗಮಲ್ಲವು[1]—ನೋಡು, ಬೇಡು, ಇಸು, ಪಸು ಎಂಬಿವು ಮೊದಲಾದುವು.

ಸೂತ್ರಂ.

ಭೂತಭವಿಷ್ಯತ್ಕ್ರಿಯೆಗಳು
ಪೇತವಿಭಕ್ತಿಗಳನುಱಿಯೆ ಕೃತ್ತ್ರಪ್ಪವಸಂ |
ಭೂತಂ ಸಂಪ್ರತಿವಿಧಿಗಳೊ
ಳಾ ತೆಱದಿಂ ಮಧ್ಯಮೋತ್ತಮಕ್ರಿಯೆಗಳೊಳಂ || 73 ||

As a primary Verbal noun of a pure Canarese root is used the 3rd Person Singular of the Past and Future tenses with their Augment (ಆಗಮಂ, Ss. 221; 232), but without their Affixes (ವಿಭಕ್ತಿ). (In grammars of the present time these two forms are counted as Participles, and called by some "Relative Participles". Cf. Ss. 143; 168; 170; 171; 208; 213).

ಪದಚ್ಛೇದಂ.

ಭೂತಭವಿಷ್ಯತ್ಕ್ರಿಯೆಗಳ್ ಉಪೇತವಿಭಕ್ತಿಗಳಂ ಉಱಿಯೆ, ಕೃತ್ತು ಅಪ್ಪುವು; ಅಸಂಭೂತಂ ಸಂಪ್ರತಿ ವಿಧಿಗಳೊಳ್, ಆ ತೆಱದಿಂ ಮಧ್ಯಮೋತ್ತಮಕ್ರಿಯೆಗಳೊಳಂ.

ಅನ್ವಯಂ.

ಸಂಪ್ರತಿ ವಿಧಿಗಳೊಳ್, ಆ ತೆಱದಿಂ ಮಧ್ಯಮೋತ್ತಮಕ್ರಿಯೆಗಳೊಳಂ ಅಸಂಭೂತಂ. ಉಳಿದದು ಯಥಾನ್ವಯಂ.

ಟೀಕು.

ಭೂತ=ಭೂತಕಾಲದ; ಭವಿಷ್ಯತ್=ಭವಿಷ್ಯತ್ಕಾಲದ; ಕ್ರಿಯೆಗಳ್=ಕ್ರಿಯಾಪದಂಗಳ್; ಉಪೇತ=ತಮ್ಮಲ್ಲಿ ಕೂಡಿರ್ದ; ವಿಭಕ್ತಿಗಳಂ=ಕ್ರಿಯಾವಿಭಕ್ತಿಗಳಂ; ಉಱಿಯೆ=ಕಳಿಯೆ; ಕೃತ್ತು=ಕೃಲ್ಲಿಂ

1) Unaltered Verbal themes are, however, used as nominal themes (ತದ್ಧಿತಂ) when they are considered as not expressing the manner of verbal action (ಕ್ರಿಯಾರ್ಥಂ; see S. 213).

ಗಂ; ಅಪ್ಪುವು=ಆಗುವವು; ಸಂಪ್ರತಿ=ವರ್ತಮಾನಕಾಲಕ್ರಿಯೆಗಳಲ್ಲಿ; ವಿಧಿಗಳೊಳ್=ವಿಧಿಕ್ರಿಯೆಗಳಲ್ಲಿ; ಆ ತೆಱದಿಂ=ಆ ರೀತಿಯಿಂದೆ; ಮಧ್ಯಮ=ಮಧ್ಯಮಪುರುಷದ; ಉತ್ತಮ=ಉತ್ತಮಪುರುಷದ; ಕ್ರಿಯೆಗಳೊಳಂ=ಕ್ರಿಯೆಗಳಲ್ಲಿಯುಂ; ಅಸಂಭೂತಂ=ಕೃತ್ತು ಹುಟ್ಟದು.

## ವೃತ್ತಿ.

ಭೂತಕಾಲಕ್ರಿಯೆಯುಂ ಭವಿಷ್ಯಂತಿಯ ಕ್ರಿಯೆಯುಂ ತಮ್ಮ ತಮ್ಮಂತರ್ಗತಾಗಮಂಗಳಂ ಬೆರಸಿರ್ದು, ವಿಭಕ್ತಿಮಾತ್ರಮಂ ಕಳೆಯೆ, ಕೃಲ್ಲಿಂಗಮಪ್ಪುವು; ವರ್ತಮಾನಕ್ರಿಯೆಯುಂ ವಿಧಿಕ್ರಿಯೆಯುಂ ಮಧ್ಯಮಪುರುಷಕ್ರಿಯೆಯುಂ ಉತ್ತಮಪುರುಷಕ್ರಿಯೆಯುಂ ಕೃಲ್ಲಿಂಗಮಾಗವವರ್ಕೆ (ನಾಮ) ವಿಭಕ್ತಿಯುಂ ಪತ್ತಿಸಲಾಗದು.

## ಪ್ರಯೋಗಂ.

ಭೂತವತಿಯ ಕೃತ್ತಿಂಗೆ—ನಲಿದಂ ಎಂಬಲ್ಲಿ ಅಮ್ ಎಂಬ ವಿಭಕ್ತಿಯಂ ಕಳೆದು, ನಲಿದ ಎಂಬ ಕೃತ್ತನಿರಿಸಿ, ನಾಮವಿಭಕ್ತಿಯಂ ಪತ್ತಿಸಿ, ನಲಿದಂ, ನಲಿದನಂ, ನಲಿದನಿಂ ಎಂದು, ಮಾಳ್ಪುದು. ನಲಿದಂ; ಬಂದಂ ಇತ್ಯಾದಿ.

ಮದಗಜವೆರಡಱ ಬಾಲದ
ಮೊದಲಂ ಪಿಡಿದೆತ್ತಿಯೊತ್ತಿ ನುರ್ಗುತ್ತಿರೆಯಾ |
ಸ್ಯದಿನೊಗುವ ರಕ್ತಮುರಿಯೆನೆ
ತಿದಿಯೊತ್ತುವ ಕಮ್ಮಱಂಬೊಲಿರ್ದಂ ಭೀಮಂ || ಕಂದಂ ||

ಬಂದನೀಗಳ್ ಪೆಱನಲ್ಲಂ ದುರ್ಜಯಂ ಕೌರವಕುಳನಳಿನೀಕುಂಜರಂ ಭೀಮಸೇನಂ||

ಭವಿಷ್ಯಂತಿಯ ಕೃತ್ತಿಂಗೆ—ಬೇಡುವಂ, ಪೊಯ್ವಂ.

ಕೃತ್ತಾಗದವರ್ಕೆ—ನೋಡಿದಪಂ, ಮಾಡಿದಪಂ (Present tense); ಕುಡು, ತುಡು (Imperative); ಬೇಡಿದಯ್, ಬೇಡಿದಿರ್ (2nd Persons of the Past); ಪಾಡುವೆನ್, ಪಾಡುವೆವು (1st Persons of the Future) ಎಂಬಂತೆ.

## ಸೂತ್ರಂ.

ವಿನುತಕ್ರಿಯಾತ್ಮಕಂಗಳು
ಮೆನಿಸುವ ಸಂಸ್ಕೃತದ ಭಾವವಚನಂಗಳನಾ |
ಯ್ದನಿತರ್ಕಮಿಸುಪ್ರತ್ಯಯ
ವನೆ ಪತ್ತಿಸಿ ನಿಱಿಸೆ ಬರ್ಕುಮಾ ಕೃಲ್ಲಿಂಗಂ || 74 ||

S. 73 concerns also verbal roots formed of Saṇskṛt abstract Verbal nouns (ಭಾವವಚನಂ) by means of ಇಸು (S. 54).

## ಪದಚ್ಛೇದಂ.

ವಿನುತಕ್ರಿಯಾತ್ಮಕಂಗಳುಂ ಎನಿಸುವ ಸಂಸ್ಕೃತದ ಭಾವವಚನಂಗಳಂ ಆಯ್ದು, ಅನಿತರ್ಕಂ ಇಸುಪ್ರತ್ಯಯವನೆ ಪತ್ತಿಸಿ, ನಿಱಿಸೆ, ಬರ್ಕುಂ ಆ ಕೃಲ್ಲಿಂಗಂ.

## ಅನ್ವಯಂ.

ಆ ಕೃಲ್ಲಿಂಗಂ ಬರ್ಪುದು.—ಉಳಿದದ್ದು ಯಥಾನ್ವಯಂ.

## ಟೀಕು.

ವಿನುತ=ಕೊಂಡಾಡಲ್ಪಟ್ಟ; ಕ್ರಿಯಾತ್ಮಕಂಗಳುಂ=ಕ್ರಿಯಾಸ್ವರೂಪಂಗಳುಂ; ಎನಿಸುವ=ಎನಿಸುವ; ಸಂಸ್ಕೃತದ=ಸಕ್ಕದದ; ಭಾವವಚನಂಗಳಂ=ಭಾವವಾಚಿಗಳಂ; ಆಯ್ದು=ಆಯ್ದು ಕೊಂಡು; ಅನಿತರ್ಕಂ=ಅಷ್ಟರ್ಕೆಯುಂ; ಇಸುಪ್ರತ್ಯಯವನೆ=ಇಸು ಎಂಬ ಪ್ರತ್ಯಯವನೆ; ಪತ್ತಿಸಿ=ಪೊರ್ದುಗೆಯಂ ಮಾಡಿ; ನಿಱಿಸೆ=ನಿಱುಗೆ ಮಾಡೆ; ಆ ಕೃಲ್ಲಿಂಗಂ=ಆ ಹಿಂದೆ ಹೇಳ್ದ ಕೃಲ್ಲಿಂಗಂ; ಬರ್ಕುಂ=ಬರ್ಪುದು.—ಅದೆಂತೆಂದೊಡೆ—

## ವಿಚಾರಂ.

ಭಾವ ಭಂಗ ಭಾಗ ಭೋಗ ಧ್ಯಾನವೆಂಬಿವಾದಿಯಾದ ಭಾವವಾಚಿಗಳ ಮೇಲೆ ಇಸುಪ್ರತ್ಯಯಂ ಪತ್ತೆ, ಭಾವಿಸು ಭಂಗಿಸು ಭಾಗಿಸು ಭೋಗಿಸು ಧ್ಯಾನಿಸು ಎಂದು, ಕಂನಡಕ್ಕೆ ಧಾತುವಾದಲ್ಲಿ ಆಖ್ಯಾತದಲ್ಲಿ ಕ್ರಿಯಾಪದಂಗಳಾಗೆ, ಭೂತಭವಿಷ್ಯತ್ಕ್ರಿಯೆಗಳುಪೇತವಿಭಕ್ತಿಗಳನುಱಿಯೆ, ಕೃತ್ತಪ್ಪುವೆಂದಱಿವುದು.

## ವೃತ್ತಿ.

ಕನ್ನಡಕ್ಕೆ ಕ್ರಿಯಾತ್ಮಕಂಗಳಪ್ಪ ಸಂಸ್ಕೃತದ ಭಾವವಚನಂಗಳನಾಯ್ದು ಕೊಂಡು, ಇಸುಪ್ರತ್ಯಯಮಂ ಪತ್ತಿಸಿ, ಕೃಲ್ಲಿಂಗಮಂ ಮಾೞ್ಪುದು.

## ಪ್ರಯೋಗಂ.

ಭಾವಿಸಿದಂ, ಭಂಗಿಸಿದಂ, ಭಾಗಿಸಿದಂ, ರಂಗಿಸಿದಂ, ರಾಗಿಸಿದಂ, ಭೋಗಿಸಿದಂ, ಪ್ರೇರಿಸಿದಂ, ವರ್ಣಿಸಿದಂ, ವರ್ತಿಸಿದಂ, ತರ್ಜಿಸಿದಂ; ಚರಿಸಿದಂ, ಚರಯಿಸಿದಂ; ಧರಿಸಿದಂ, ಧರಯಿಸಿದಂ.

ಜಳನಿಧಿ ಜಳಚರಚಯಮಂ ರತ್ನಚಯಮುಮಂ ಧರಿಸುವ ವೊಲ್.

## ಸೂತ್ರಂ.

Also Sentences have been considered as nominal themes (cf. S. 61).

ಸಮುಪಾತ್ತಕ್ರಿಯೆಯುಂ ವಾ
ಕ್ಯಮಾಲೆಯುಂ ಸುಕವಿರಚಿತನಾಮಮದಾದಂ |
ದಮಗರ್ಪುಂ ಲಿಂಗಂ ಮಾರ್ಗ
ಕ್ರಮಮಂ ಕಾಣಲ್ಕೆ ಬರ್ಪುದಾದ್ಯರ ಕೃತಿಯೊಳ್ || 75 ||

### ಪದಚ್ಛೇದಂ.

ಸಮುಪಾತ್ತಕ್ರಿಯೆಯುಂ ವಾಕ್ಯಮಾಲೆಯುಂ ಸುಕವಿರಚಿತನಾಮಂ ಅದು ಆದ ಅಂದು ಅಮರ್ಗುಂ ಲಿಂಗಂ; ಮಾರ್ಗಕ್ರಮಮುಂ ಕಾಣಲ್ಕೆ ಬರ್ಪುದು ಆದ್ಯರ ಕೃತಿಯೊಳ್.

### ಅನ್ವಯಂ.

ಸಮುಪಾತ್ತಕ್ರಿಯೆಯುಂ ವಾಕ್ಯಮಾಲೆಯುಂ ಸುಕವಿರಚಿತನಾಮಂ ಅದು ಆದಂದು ಲಿಂಗಂ ಅಮರ್ಗುಂ; ಮಾರ್ಗಕ್ರಮಮುಂ ಆದ್ಯರ ಕೃತಿಯೊಳ್ ಕಾಣಲ್ಕೆ ಬರ್ಪುದು.

### ಟೀಕು.

ಸಂ=ಲೇಸಾಗಿ; ಉಪಾತ್ತ=ಎಯ್ದಲ್ಪಟ್ಟ; ಕ್ರಿಯೆಯುಂ=ಕ್ರಿಯೆಯುಂ; ವಾಕ್ಯಮಾಲೆಯುಂ=ವಾಕ್ಯಂಗಳ ಸಮೂಹಮುಂ; ಸುಕವಿ=ಸತ್ಕವೀಶ್ವರರಿಂದೆ; ರಚಿತ=ರಚಿಸಲ್ಪಟ್ಟ; ನಾಮಂ=ಪೆಸರ್; ಅದು=ಅದು; ಆದಂದು=ಆದ ಕಾಲದಲ್ಲಿ; ಲಿಂಗಂ=ಲಿಂಗವೆಂಬ ಸಂಜ್ಞೆ; ಅಮರ್ಗುಂ=ಪೊರ್ದುಗೆಯಪ್ಪುದು; ಮಾರ್ಗಕ್ರಮಮುಂ=ಅವಱ ಮಾರ್ಗದ ರೀತಿಯುಂ; ಆದ್ಯರ=ಪೂರ್ವಕವಿಗಳ; ಕೃತಿಯೊಳ್=ಕಾವ್ಯಂಗಳಲ್ಲಿ; ಕಾಣಲ್ಕೆ=ಕುರುಹಿಡಲ್ಕೆ; ಬರ್ಪುದು= ಬರ್ಪುದು.

### ವೃತ್ತಿ.

ಎಯ್ದಲ್ಪಟ್ಟ ಕ್ರಿಯೆಯುಂ ವಾಕ್ಯಮಾಲೆಯುಂ ಕವೀಶ್ವರರಿಂ ರಚಿತಮಾಗಿ ನಾಮಮಾದಲ್ಲಿ ಲಿಂಗಮಪ್ಪುವು; ಅವಱ ತೆಱಮುಂ ಪುರಾತನಕೃತಿಗಳಲ್ಲಿ ಕಾಣ ಬರ್ಪುದು.

### ಪ್ರಯೋಗಂ.

ಕ್ರಿಯೆಗೆ—ನಮೋಸ್ತುಗಳಿರ್ಪಂದದಿನಿರ್ದಂ (ಎಂಬಲ್ಲಿ) ನಮೋಸ್ತುಗಳೆಂದು ಸರ್ವಣ್ಗೆ ಪೆಸಱಾಯ್ತು.

ವಾಕ್ಯಮಾಲೆಗೆ—ಅಹಿಂಸಾ ಪರಮೋ ಧರ್ಮಮೆಂಬುದನೀ ತತ್ಸವಿತುರ್ವರೇಣ್ಯರಱಿದರ್, ತ್ರೈಲೋಕ್ಯಚೂಡಾಮಣೀ! (ಎಂಬಲ್ಲಿ) ತತ್ಸವಿತುರ್ವರೇಣ್ಯರೆಂದು ಶ್ರೋತ್ರಿಯರ್.

ತೋಳ್ಗೊಪ್ಪುವನಾಳ್ದರಕ್ಕೈದುವೊತ್ತರದೇವಂ (see s. S. 140); ಗುಣಕ್ಕೆನಲ್ಲಗಣೇಶಂ (s. S. 174). ಸೊರ್ಕಾನೆಗಳಾಕರಿ.

### ಸೂತ್ರಂ.

Ready nouns are: ಕ್ಷಿತಿಯೊಳೆ ರೂಢಾನ್ವರ್ಥಾ೦
1, such of which the ಕಿತಮೆಂದಾ ನಾಮಮಱಿಗೆ ಮೂದೆಱನಸಮಾ |

meaning is everywhere well known (but the etymological analysis of which is not apparent at the first sight, ರೂಢನಾಮಂ, ನಿಶ್ಚಿತನಾಮಂ, ಧಟದ ನಾಮಂ); 2, such the meaning of which is self-evident (ಅನ್ವರ್ಥನಾಮಂ); 3, such as are of mark i. e. proper-names (ಅಂಕಿತನಾಮಂ). Those of self-evident meaning are of two kinds: a., such as refer to properties (ಗುಣಾನುರೂಪಂ); b., such as refer to things (ಅರ್ಥಾನುರೂಪಂ).—(In a Canarese grammar of the Mangalore press ರೂಢನಾಮಂಗಳ್ bear the name "Appalative nouns," and ಅನ್ವರ್ಥನಾಮಂಗಳ್ the name "Denominative nouns").

ಸತೆಯೊಳ್ನೆಲಸಿರ್ಪುದು ನಿ
ಶ್ಚಿತನಾಮಂ ಪಂಚವರ್ಣಕೃತಪರಿಮಾಣಂ || 76 ||

## ಪದಚ್ಛೇದಂ.

ಕ್ಷಿತಿಯೊಳ್, ರೂಢಾನ್ವರ್ಥಾಂಕಿತಂ ಎಂದು, ಆ ನಾಮಂ, ಅಱಿಗೆ, ಮೂದೆಱಿಂ; ಅಸಮಾಸತೆಯೊಳ್ ನೆಲಸಿ ಇರ್ಪುದು ನಿಶ್ಚಿತನಾಮಂ ಪಂಚವರ್ಣಕೃತಪರಿಮಾಣಂ.

## ಅನ್ವಯಂ.

ಕ್ಷಿತಿಯೊಳ್, ರೂಢಾನ್ವರ್ಥಾಂಕಿತಂ ಎಂದು, ಆ ನಾಮಂ ಮೂದೆಱಿಂ, ಅಱಿಗೆ; ನಿಶ್ಚಿತನಾಮಂ ಪಂಚವರ್ಣಕೃತಪರಿಮಾಣಂ ಅಸಮಾಸತೆಯೊಳ್ ನೆಲಸಿರ್ಪುದು.

## ಟೀಕು.

ಕ್ಷಿತಿಯೊಳ್=ಭೂಲೋಕದಲ್ಲಿ; ರೂಢ=ರೂಢನಾಮಮೆಂದು; ಅನ್ವರ್ಥ=ಅನ್ವರ್ಥನಾಮಮೆಂದು; ಅಂಕಿತಂ=ಅಂಕಿತನಾಮಮೆಂದು; ಆ ನಾಮಂ=ಆ ಪಿಂದೆ ಪೇಳ್ದ ನಾಮಲಿಂಗಂ; ಮೂದೆಱಿಂ=ಮೂಱು ತೆಱನೆಂದು; ಅಱಿಗೆ=ತಿಳಿಗೆ; ನಿಶ್ಚಿತನಾಮಂ=ರೂಢನಾಮಂ; ಪಂಚವರ್ಣ=ಐದಕ್ಷರದಿಂದೆ; ಕೃತ=ಮಾಡಲ್ಪಟ್ಟ; ಪರಿಮಾಣಂ=ಪ್ರಮಾಣವನುಳ್ಳುದಾಗಿ; ಅಸಮಾಸತೆಯೊಳ್=ಸಮಾಸವಲ್ಲದುದಱಿಲ್ಲಿ; ನೆಲಸಿರ್ಪುದು=ನೆಲೆಗೊಂಡಿರ್ಪುದು.

## ವೃತ್ತಿ.

ರೂಢನಾಮಮೆಂದುಂ, ಅನ್ವರ್ಥನಾಮಮೆಂದುಂ, ಅಂಕಿತನಾಮಮೆಂದುಂ, ನಾಮಂ ಮೂದೆಱನಾಗಿರ್ಪುದು. ರೂಢನಾಮಂ[1] ಪ್ರಸಿದ್ಧ ತೆಱನಾಗಿರ್ಪುದು. ಅನ್ವರ್ಥನಾಮಂ ಗುಣಾನುರೂಪಮೆಂದುಂ ಅರ್ಥಾನುರೂಪಮೆಂದುಮಿರ್ತೆಱಮಾಗಿರ್ಪುದು. ಅಂಕಿತನಾಮಂ ಪೆಸಱಿಡುವ ನಿಪ್ಪದಿನೆಂತಾದೊಡಮಿರ್ಪುದು. ಧಿಟದ ನಾಮಂ (ನಿಶ್ಚಿತನಾಮಂ) ಸಮಾಸಮಿಲ್ಲದೊಂದಕ್ಕರಂ ಮೊದಲಾಗಿ ಐದ್ದಕ್ಕರಂಬರಮುಂಟು.

## ಪ್ರಯೋಗಂ.

ರೂಢನಾಮಕ್ಕೆ—ನೆಲಂ, ಪೊಲಂ, ಚಲಂ, ಜಲಂ ಎಂಬಂತೆ.

1) The contrary of ರೂಢಂ (ರೂಢಿ) is ಯೋಗಂ "etymology," "derivation of a word's meaning from its root", "the meaning of a word found by means of etymology" (Roth and Böhtlingk's Dictionary s. v. ಯೋಗ).

ಗುಣಾನುರೂಪಾನ್ವರ್ಥಕ್ಕೆ—ದಾನಿ ದಯಾಪರನತ್ಯಭಿ
ಮಾನಿ ಪರಾಕ್ರಮಿ ಯಶೋರ್ಥಿ ನೀತಿಜ್ಞಂ ವಿ|
ದ್ಯಾನಿಲಯನೆನಿಪ ನೃಪಂ || ಕಂದಭಾಗಂ ||

ಅರ್ಥಾನುರೂಪಾನ್ವರ್ಥಕ್ಕೆ—ಹೆಳೆಗಾಲಂ, ನಿಡಿಮೂಗಂ, ಕುಸಿಗೊರಲಂ, ಸವಟೆವಾಯಂ, ಗುಳ್ಳಿಗಂಣಂ, ಹಱಿದಲೆಯಂ ಎಂಬಂತೆ.

ಅಂಕಿತನಾಮಕ್ಕೆ—ಕಾಟಂ, ಕಸವಂ, ಮಾಚಂ, ಮಾರಂ ಎಂಬಿವು ಮೊದಲಾದುವು. ಸ್ವಾರ್ಥಕ್ರಮದವೆಲ್ಲಾ ಭಾಷೆಗಮಿಾ ತೆಱದೆ ಸಲ್ಲುದು.

ಧಿಟದ ನಾಮಂಗಳ ಅಕ್ಷರವೃತ್ತಿಗೆ-ಹೂ, ಮರಂ, ಹೊತ್ತಗೆ, ಕವಳಿಗೆ, ಕಟ್ಟವತ್ತಿಗೆ.

ಸೂತ್ರಂ.

ಒಳ್ಳಿತು ಮೆಲ್ಲಿತು ಬೆಟ್ಟಿತು
ತೆಳ್ಳಿತು ಬಸಿದಸಿದು ಕಡಿದು ನಿಡಿದಿನಿದೆಂಬಂ |
ತುಳ್ಳುವು ತುದುಕಡೆಯೆನೆ ಕೈ
ಕೊಳ್ಳಿಂ ಗುಣವಾಚಿ ಮೇಣ್ತುಕಾರಂ ದಿತ್ತಂ || 77 ||

A number of ready nouns is called Adjectives (ಗುಣವಚನಂ), among which several terminate in ತು and ದು. Those with final ತು may double the ತ of this syllable (cf. Ss. 147; 152; 153; 178; 179; 181; 184; 208; 219; 220; 300).

ಪದಚ್ಛೇದಂ.

ಒಳ್ಳಿತು ಮೆಲ್ಲಿತು ಬೆಟ್ಟಿತು ತೆಳ್ಳಿತು ಬಸಿದು ಅಸಿದು ಕಡಿದು ನಿಡಿದು ಇನಿದು ಎಂಬಂತೆ ಉಳ್ಳುವು || ತು || ದು || ಕಡೆ ಎನೆ, ಕೈಕೊಳ್ಳಿಂ ಗುಣವಾಚಿ; ಮೇಣ್ ತುಕಾರಂ ದಿತ್ವಂ.

ಅನ್ವಯಂ.

ಗುಣವಾಚಿ ಕೈಕೊಳ್ಳಿಂ; ಮೇಣ್ ತುಕಾರಂ ದ್ವಿತ್ವಂ. ಉಳಿದದು ಯಥಾನ್ವಯಂ.

ಟೀಕು.

ಒಳ್ಳಿತು=ಒಳ್ಳಿತೆಂದು; ಮೆಲ್ಲಿತು=ಮೆಲ್ಲಿತೆಂದು; ಬೆಟ್ಟಿತು=ಬೆಟ್ಟಿತೆಂದು; ತೆಳ್ಳಿತು=ತೆಳ್ಳಿತೆಂದು; ಬಸಿದು=ಬಸಿದೆಂದು; ಅಸಿದು=ಅಸಿದೆಂದು; ಕಡಿದು=ಕಡಿದೆಂದು; ನಿಡಿದು=ನಿಡಿದೆಂದು; ಇನಿದು=ಇನಿದೆಂದು; ಎಂಬಂತೆ=ಎಂಬ ಹಾಂಗೆ; ಉಳ್ಳುವು=ಉಂಟಾದ ಶಬ್ದಂಗಳ್; ತುದುಕಡೆಯೆನೆ=ತುಕಾರಾಂತ ದುಕಾರಾಂತವೆನೆ; ಗುಣವಾಚಿ=ಗುಣವಚನಂಗಳೆಂದು; ಕೈಕೊಳ್ಳಿಂ=ಒಡಂಬಡಿಂ; ಮೇಣ್=ವಿಕಲ್ಪದಿಂದೆ; ತುಕಾರಂ=ತುಕಾರಾಂತಂ; ದ್ವಿತ್ವಂ=ದ್ವಿಭಾರ್ವಂ.

## ವೃತ್ತಿ.

ತುಕಾರ ದುಕಾರಂಗಳೆ ಕಡೆಯಾಗಿ ಪಲವು ಗುಣವಚನಂಗಳೊಳವು; ಅವಱೊಳ್ತುಕಾರಾಂತಕ್ಕೆ ವಿಕಲ್ಪದಿಂ ದ್ವಿತ್ವಮುಂಟು.

## ಪ್ರಯೋಗಂ.

ಬೆಟ್ಟಿತು (ಬಟ್ಟಿತು), ಬೆಟ್ಟಿತ್ತು (s. S. 139); ದಟ್ಟಿತು, ದಟ್ಟಿತ್ತು; ಬಳ್ಳಿತು, ಬಳ್ಳಿತ್ತು; ಮೆಲ್ಲಿತು, ಮೆಲ್ಲಿತ್ತು; ತೆಳ್ಳಿತು, ತೆಳ್ಳಿತ್ತು; ತೋಱಿತ್ತು (s. S. 139); ನೇರಿತ್ತು (ನೇಱಿತ್ತು? s. Ss. 88; 139; 153; 220); ಕೂರಿತ್ತು[1]; ಉದ್ದಿತ್ತು; ನುಣ್ಣಿತ್ತು; ತಣ್ಣಿತ್ತು; ಬಿಣ್ಣಿತ್ತು; ಗುಂಡಿತ್ತು [M. A. ಗುಣ್ಣಿತ್ತು]; ಅಗಲಿತ್ತು; ದೊಡ್ಡಿತ್ತು ಎಂಬಂತೆ ನೋಡಿ ಕೊಳ್ವುದು.

ದುಕಾರಾಂತಕ್ಕೆ—ಬಸಿದು, ಅಸಿದು, ಕಡಿದು, ನಿಡಿದು, ಕರಿದು, ಬಿಳಿದು ಎಂಬಂತಱಿವುದು.

## ಸೂತ್ರಂ.

The ready nouns ಅದು, ಇದು, ಉದು, ಆವುದು, ಎಲ್ಲದು, ಪೆಱಿತು, ಏನ್, ಪೆಱಿದು are called Pronouns (ಸರ್ವನಾಮಂ), and (except ಏನ್, S. 79) conform to the 3 (principal) genders (see Ss. 138; 150; 151; 152; 208; 219; 220).

ಅದುವಿದುವುದುವಾವುದುವೆ
ಲ್ಲದು ಪೆಱತೇನ್ಪೆಱದೆನಿಪ್ಪ ಶಬ್ದಂಗಳ್ತ |
ಪ್ಪದೆ ಸರ್ವನಾಮಮಕ್ಕುಂ
ವಿದಗ್ಧರಿವನಱಿದು ನಿಱಿಕೆ ಲಿಂಗಸ್ಥಿತಿಯೊಳ್ || 78 ||

## ಪದಚ್ಛೇದಂ.

ಅದು ಇದು ಉದು ಆವುದು ಎಲ್ಲದು ಪೆಱಿತು ಏನ್ ಪೆಱಿದು ಎನಿಪ್ಪ ಶಬ್ದಂಗಳ್ ತಪ್ಪದೆ ಸರ್ವನಾಮಂ ಅಕ್ಕುಂ; ವಿದಗ್ಧರ್ ಇವಂ ಅಱಿದು, ನಿಱಿಕೆ ಲಿಂಗಸ್ಥಿತಿಯೊಳ್.

## ಅನ್ವಯಂ.

ವಿದಗ್ಧರ್ ಇವಂ ಅಱಿದು, ಲಿಂಗಸ್ಥಿತಿಯೊಳ್ ನಿಱಿಕೆ ಎಂಬುದನ್ವಯಂ.

## ಟೀಕು.

ಅದು=ಅದೆಂದು; ಇದು=ಇದೆಂದು; ಉದು=ಉದೆಂದು; ಆವುದು=ಆವುದೆಂದು; ಎಲ್ಲದು=ಎಲ್ಲದೆಂದು; ಪೆಱಿತು=ಪೆಱಿತೆಂದು; ಏನ್=ಏನ್ ಎಂದು; ಪೆಱಿದು=ಪೆಱಿದೆಂದು; ಎನಿಪ್ಪ ಶಬ್ದಂಗಳ್=ಎನಿಸುವ ಶಬ್ದಂಗಳ್; ತಪ್ಪದೆ=ತೊಲಗದೆ; ಸರ್ವನಾಮಂ=ಸರ್ವನಾಮಂಗಳ್; ಅಕ್ಕುಂ=

1) M. A. in these 3 instances has the ರ. M. B. concludes with ತೆಳ್ಳಿತ್ತು.

ಅಪ್ಪುವು; ವಿದಗ್ಧರ್=ವಿದ್ವಾಂಸರ್; ಇವಂ=ಈ ಸರ್ವನಾಮಂಗಳಂ; ಅಱಿದು=ತಿಳಿದು; ಲಿಂಗಸ್ಥಿತಿಯೊಳ್=ತ್ರಿವಿಧಲಿಂಗಸ್ಥಿತಿಯೊಳ್; ನಿಱಿಕೆ=ನಿಱಿಗೆ ಮಾಡುಗೆ.

### ವೃತ್ತಿ.

ಅದು, ಇದು, ಉದು, ಆವುದು, ಎಲ್ಲದು, ಪೆಱತು, ಏನ್, ಪೆಱದು (ಪಿಱದು) ಎನಿಪ್ಪ ಶಬ್ದಂಗಳ್ ಆದಿಯಾದವು ಸರ್ವನಾಮಂಗಳ್.

### ಸೂತ್ರಂ.

ಏನ್, however, is used, as it stands, for all the genders as well in the Singular as in the Plural (cf. S. 112).

ಏನೆಂಬ ಸರ್ವನಾಮಂ
ತಾನದು ದಲ್ಲಿಂಗದೇಕವಚನಂ ನಿಜದಿಂ |
ಪೀನಂ ಬಹುವಚನಾರ್ಥಮ
ನಾನಲ್ಸಾಲ್ದತ್ತು ಮತ್ತೆ ಕೃತಿಪದ್ಧತಿಯೊಳ್ || 79 ||

### ಪದಚ್ಛೇದಂ.

ಏನ್ ಎಂಬ ಸರ್ವನಾಮಂ ತಾಂ ಅದು ದಲ್ ಲಿಂಗದ ಏಕವಚನಂ ನಿಜದಿಂ; ಪೀನಂ ಬಹುವಚನಾರ್ಥಮಂ ಆನಲ್ ಸಾಲ್ದತ್ತು ಮತ್ತೆ ಕೃತಿಪದ್ಧತಿಯೊಳ್.

### ಅನ್ವಯಂ.

ಏನ್ ಎಂಬ ಸರ್ವನಾಮಂ ತಾಂ ಅದು ದಲ್ ನಿಜದಿಂ ಲಿಂಗದ ಏಕವಚನಂ; ಮತ್ತೆ ಕೃತಿಪದ್ಧತಿಯೊಳ್ ಪೀನಂ ಬಹುವಚನಾರ್ಥಮಂ ಆನಲ್ ಸಾಲ್ದತ್ತು.

### ಟೀಕು.

ಏನ್=ಏನೆಂದು; ಎಂಬ ಸರ್ವನಾಮಂ=ಎಂಬ ಸರ್ವನಾಮಶಬ್ದಂ; ತಾನದು=ಅದು ತಾಂ; ದಲ್=ನಿಶ್ಚಯವಾಗಿ; ನಿಜದಿಂ=ಸ್ವಭಾವದಿಂದೆ; ಲಿಂಗದ=ಲಿಂಗತ್ರಯದ; ಏಕಚವನಂ=ಏಕವಚನವೆನಿಪುದು; ಮತ್ತೆ=ಬಳಿಕಂ; ಕೃತಿಪದ್ಧತಿಯೊಳ್=ಕಾವ್ಯಪದ್ಧತಿಯಲ್ಲಿ; ಪೀನಂ=ವಿಶೇಷವಾಗಿ; ಬಹುವಚನಾರ್ಥಮಂ=ಬಹುವಚನದರ್ಥವಂ; ಆನಲ್=ಧರಿಸಲ್; ಸಾಲ್ದತ್ತು=ಸಲುವಳಿಯಾಯಿತು.

### ವೃತ್ತಿಪ್ರಯೋಗಂ.

ಏಕವಚನಕ್ಕೆ—ಅವನೇನ್, ಅವಳೇನ್, ಅದೇನ್.
ಬಹುವಚನಾರ್ಥಕ್ಕೆ—ತತ್ಪರಿಜನಾಲಾಪಂಗಳೇನ್.

### ಸೂತ್ರಂ.

Pure Sanskṛt crude nouns (ಪ್ರಕೃ

ಸಮುದಿತಸಂಖ್ಯಾವ್ಯಯರಹಿ
ತಮೆನಿಸಿ ವರ್ತಿಪ ನಿಘಂಟುವಿನ ನಾಮಪದೋ |

ತಿ) are used as nominal themes in Canarese, and are then called "perfect Sanskrt" (ಸಮಸಂಸ್ಕೃತಂ; ತತ್ಸಮಂ, S. 297). They (generally) cannot form compounds with pure Canarese words (cf. Ss. 174; 289 seq).

ತ್ತಮವರ್ಣಪ್ರಕೃತಿಗಳಂ
ಸಮಸಂಸ್ಕೃತವೆಸರಿನಿಟ್ಟು ಲಿಂಗಂ ಮಾಳ್ಪರ್ || 80 ||

ಪದಚ್ಛೇದಂ.

ಸಮುದಿತಸಂಖ್ಯಾವ್ಯಯರಹಿತಂ ಎನಿಸಿ ವರ್ತಿಪ ನಿಘಂಟುವಿನ ನಾಮಪದೋತ್ತಮವರ್ಣ ಪ್ರಕೃತಿಗಳಂ ಸಮಸಂಸ್ಕೃತವೆಸರಿಂ ಇಟ್ಟು, ಲಿಂಗಂ ಮಾಳ್ಪರ್.

ಯಥಾನ್ವಯಂ.

ಟೀಕು.

ಸಂ=ಲೇಸಾಗಿ; ಉದಿತ=ಉಂಟಾದ; ಸಂಖ್ಯಾ=ಸಂಖ್ಯಾವಾಚಿಗಳಿಂದೆ; ಅವ್ಯಯ=ಅವ್ಯಯ ಶಬ್ದಂಗಳಿಂದೆ; ರಹಿತಂ=ವಿರಹಿತಂ; ಎನಿಸಿ=ಎನಿಸಿ; ವರ್ತಿಪ=ವರ್ತಿಸುವ; ನಿಘಂಟುವಿನ=ಅಮರ ಸಿಂಹಮೊದಲಾದ ಸಂಸ್ಕೃತನಿಘಂಟುಗಳ; ನಾಮಪದ=ಅಭಿಧಾನಪದಂಗಳಾದ; ಉತ್ತಮವರ್ಣ= ಸುಲಲಿತಾಕ್ಷರಂಗಳಾದ; ಪ್ರಕೃತಿಗಳಂ=ವಿಭಕ್ತಿರಹಿತವಾದ ಶಬ್ದಂಗಳಂ; ಸಮಸಂಸ್ಕೃತವೆಸರಿ ನಿಟ್ಟು=ಸಮಸಂಸ್ಕೃತವೆಂಬ ಹೆಸರಿಟ್ಟು; ಲಿಂಗಂ ಮಾಳ್ಪರ್=ಶಬ್ದಜ್ಞರ್ ಲಿಂಗವಂ ಮಾಡುವರ್.

ವೃತ್ತಿ.

ಸಂಖ್ಯಾವ್ಯಯಂಗಳಂ ಕಳೆದುಳಿದ ನಿಘಂಟುವಿನ ಸುಲಲಿತಾಕ್ಷರಂಗಳಪ್ಪ ನಾಮಪ್ರಕೃತಿಗಳಂ ಕನ್ನಡಕ್ಕೆ ಸರಿ ಮಾಡಿ, ಸಮಸಂಸ್ಕೃತಮೆಂಬ ಪೆಸರಿನಿಟ್ಟು, ಶಬ್ದಜ್ಞರ್ ಲಿಂಗಮಂ ಮಾಳ್ಪರ್.

ಪ್ರಯೋಗಂ.

(ಕಾಮ) ಕಾಮಂ, (ಭೀಮ) ಭೀಮಂ, (ರಾಮ) ರಾಮಂ, (ಸೋಮ) ಸೋಮಂ, (ನಾರದ) ನಾರದಂ, (ನಾರಾಯಣ) ನಾರಾಯಣಂ ಎಂಬಂತೆ.

ಆ ಸಮಸಂಸ್ಕೃತಂಗಳನಚ್ಚಗನ್ನಡದೊಳ್ಬೆರಸಿ ಸಮಾಸಂ ಮಾಡಲಾಗದು; ಅದರ್ಕ್ಕುದಾಹರಣಂ—

ಅರಸುಕುಮಾರನನಾಯತ
ತರಗಡೆಗಣ್ಣಿಂದೆ ನೋಡಿ ಕೆಳದಿಸಮೇತಂ |
ಪರಿಗತನಗೆಯಿಂದಿರ್ದಂ
ಗುರುನಾಣಾಭರದಿನೆಱಗಿ ಮುಖತಾವರೆಯಂ || ಕಂದಂ ||

ಕಣ್ಕಮಲಮೆಂಬಂತೆ.

ಸೂತ್ರಂ.

Sanskrt Adverbs, Pronouns and Participles with final ಅತ್, when not being parts of compounds, cannot form declinable themes in Canarese.

ವಿದಿತಮೆನಿಪ್ಪವ್ಯಯಮುಂ
ತ್ಯದಾದಿಯುಂ ಶತೃ ಇಾಂತಮುಂ ಸಂಸ್ಕೃತದೊಳ್ |
ಪದವಿಧಿಯಂ ನೆಱೆ ತಳೆದ
ಲ್ಲದೆ ಕನ್ನಡದಲ್ಲಿ ಲಿಂಗಮಾಗವು ನಿಜದಿಂ || 81 ||

ಪದಚ್ಛೇದಂ.

ವಿದಿತಂ ಎನಿಪ್ಪ ಅವ್ಯಯಮುಂ ತ್ಯದಾದಿಯುಂ ಶತೃ ಇಾಂತಮುಂ ಸಂಸ್ಕೃತದೊಳ್ ಪದವಿಧಿಯಂ ನೆಱೆ ತಳೆದು, ಅಲ್ಲದೆ ಕನ್ನಡದಲ್ಲಿ ಲಿಂಗಂ ಆಗವು ನಿಜದಿಂ.

ಅನ್ವಯಂ.

ಕನ್ನಡದಲ್ಲಿ ನಿಜದಿಂ ಲಿಂಗಂ ಆಗವು. ಉಳಿದದು ಯಥಾನ್ವಯಂ.

ಟೀಕು.

ವಿದಿತಂ=ಪ್ರಸಿದ್ಧಂ; ಎನಿಪ್ಪ=ಎನಿಸುವ; ಅವ್ಯಯಮುಂ=ಅವ್ಯಯಶಬ್ದಂಗಳುಂ; ತ್ಯದಾದಿಯುಂ=ತ್ಯತ್ ಎಂಬುದಾದಿಯಾದ ಸರ್ವನಾಮಶಬ್ದಂಗಳುಂ; ಶತೃ ಇಾಂತಮುಂ=ಶತೃ ಇಾಂತಶಬ್ದಮುಂ; ಸಂಸ್ಕೃತದೊಳ್=ಸಂಸ್ಕೃತದಲ್ಲಿ; ಪದವಿಧಿಯಂ=ಸಮಾಸವಿಧಿಯಂ; ನೆಱೆ=ಚನ್ನಾಗಿ; ತಳೆದಲ್ಲದೆ=ಧರಿಸಿದಲ್ಲದೆ; ಕನ್ನಡದಲ್ಲಿ=ಕರ್ಣಾಟಕದಲ್ಲಿ; ನಿಜದಿಂ=ಸ್ವಭಾವದಿಂದೆ; ಲಿಂಗಂ=ಲಿಂಗಂಗಳ್; ಆಗವು=ಸಲುವಳಿಯಾಗವು.

ವೃತ್ತಿ.

ಪ್ರಸಿದ್ಧಮಪ್ಪವ್ಯಯಂಗಳುಂ ತ್ಯದಾದಿಯುಂ ಶತೃ ಇಾಂತಮುಂ ಸಂಸ್ಕೃತದೊಳ್ಸಮಾಸಮಂ ಪಡೆದಲ್ಲದೆ ಕನ್ನಡದೊಳ್ಸಭಾವದಿಂ ಲಿಂಗಮಾಗವು.

ಪ್ರಯೋಗಂ.

ಅವ್ಯಯಕ್ಕೆ—ಅಂತರ್, ಬಹಿರ್, ಉಚ್ಚೈಸ್, ನೀಚೈಸ್, ಮುಹುರ್, ಪುನರ್, ಅಹಸ್, ಈಷತ್, ಯುಗಪತ್, ಪೃಥಕ್ ಇವು ಮೊದಲಾದ ಸಹಜಾವ್ಯಯಂಗಳನಿರಿಸಿ, ವಿಭಕ್ತಿಯಂ ಪತ್ತಿಸಲಾಗದು.

ಅವ್ಯಯಸಮಾಸಕ್ಕೆ—ಅಂತರ್ಮುಖ, ಬಹಿರಂಗ, ಉಚ್ಚೈರ್ಧ್ಯಾನ, ನೀಚೈರ್ಗತ, ಮುಹುರ್ನಿರೀಕ್ಷಣ, ಪುನಃಪಾಕ, ಪ್ರಾತಃಕಾಲ, ಅಹರ್ನಿಶ, ಈಷದ್ಭೇದ, ಯುಗಪತ್ಸಂಭ್ರಮ, ಪೃಥಕ್ಚರಿತ್ರ ಎಂದು, ಸಮಾಸಂ ಮಾಡಿ—ಅಂತರ್ಮುಖಂ, ಅಂತ

ರ್ಮುಖನಂ, ಅಂತರ್ಮುಖನಿಂ, ಅಂತರ್ಮುಖಂಗೆ, ಅಂತರ್ಮುಖನತ್ತಣಿಂ, ಅಂತರ್ಮುಖನ, ಅಂತರ್ಮುಖನೊಳ್ ಎಂಬಂತೆಲ್ಲಕ್ಕಂ ವಿಭಕ್ತಿಯುಂ ಪತ್ತಿಸುವದು.

ತ್ಯದಾದಿಯಾದ ಸರ್ವನಾಮಂಗಳ್ಗೆ—ತ್ಯದ್, ತದ್, ಯದ್, ಏತದ್, ಇದಮ್, ಅದಸ್, ಯುಷ್ಮದ್, ಅಸ್ಮದ್, ಭವತ್, ಕಿಂ ಎಂದೀ ತ್ಯದಾದಿಶಬ್ದಂಗಳನಿರಿಸಿ, ವಿಭಕ್ತಿಯುಂ ಕುಡದೆ,

ಇವಱ ಸಮಾಸಕ್ಕೆ—ತ್ಯತ್ಕಥನ; ತದ್ವಚನ; ಯತ್ಸುಖ; ಏತತ್ಸೌಖ್ಯ; ಇದನ್ನಿಮಿತ್ತ; ಅದಃಪುತ್ರ, ಅದಃಪುತ್ರನೆಂದೀತನ ಪುತ್ರನೆಂಬುದರ್ಥಂ; ಇದಂದೇವ, ಇದಂ ದೇವನೆಂದೀತನೆ ದೇವನೆಂಬರ್ಥಂ; ಯುಷ್ಮದ್ಗುಣ; ಅಸ್ಮದ್ದೌಹಿತ್ರ; ಭವದ್ರಾಜ್ಯ; ಕಿಂವಾರ್ತೆಯೆಂದಾರ ವಾರ್ತೆಯೆಂಬರ್ಥಂ; ಈ ತೆಱದಿಂ ಸಮಾಸಮಂ ಮಾಡಿ, ವಿಭಕ್ತಿಯುಂ ಪತ್ತಿಸುವದು—ತ್ಯತ್ಕಥನಂ, ತ್ಯತ್ಕಥನಮಂ, ತ್ಯತ್ಕಥನದಿಂ ಎಂಬಂತಱಿವುದು.

ಶತೃಇಾಂತಕ್ಕೆ[1]—ಕ್ವಣತ್, ಝುಣತ್, ಭ್ರಮತ್, ರಟತ್, ಚಳತ್, ದಳತ್, ಮಿಳತ್, ಲಸತ್ ಮುಂಚತ್, ಚಂಚತ್, ಘೋಷ್ಯತ್ ಎಂಬೀ ಶತೃಇಾಂತಗಳ್ಗೆ ವಿಭಕ್ತಿಯುಂ ಪತ್ತಿಸದೆ,

ಇವಱ ಸಮಾಸಕ್ಕೆ—ಕ್ವಣತ್ಕಂಕಣ, ಝುಣನ್ನೂಪುರ, ಭ್ರಮದ್ಭ್ರಮರ, ರಟತ್ಕೋಕಿಲ, ಚಳತ್ಕುಂತಳ, ದಳತ್ಕೈರವ, ಮಿಳದ್ದಿಷ್ಟರ, ಲಸದ್ವಚನ, ಮುಂಚತ್ಕಂಚುಕ, ಚಂಚದ್ರೂಪ, ಗರ್ಜನ್ಮೇಘ, ಘೋಷ್ಯದರ್ಣವ ಎಂದು, ಸಮಾಸಮಂ ಮಾಡಿ, ಎಲ್ಲಕ್ಕಂ ವಿಭಕ್ತಿಯುಂ ಪತ್ತಿಸುವುದು—ಕ್ವಣತ್ಕಂಕಣಂ, ಕ್ವಣತ್ಕಂಕಣಮಂ, ಕ್ವಣತ್ಕಂಕಣದಿಂ, ಕ್ವಣತ್ಕಂಕಣಕ್ಕೆ, ಕ್ವಣತ್ಕಂಕಣದತ್ತಣಿಂ, ಕ್ವಣತ್ಕಂಕಣದ, ಕ್ವಣತ್ಕಂಕಣದೊಳ್.

ಸೂತ್ರಂ.

ಏಕದ್ವಿತ್ರ್ಯಾದಿ ಸಮಾ
ಸಾಕೃತಿಯಿಂ ಪ್ರತ್ಯಯಾಂತದಿಂದಿರೆ ಲಘುವ |
ಪ್ಪೇಕಾರಮನತ್ವಮನಿರ
ದಾಕಾರಂ ಬಹುಳದಿಂದೆ ತಳೆದಿರೆ ಲಿಂಗಂ || 82 ||

Further the Sanskṛt Numbers up to ten are indeclinables in Canarese, unless they form parts of compounds or are in conjunction with secondary noun-affixes (ಪ್ರತ್ಯಯಂ), here ತಯ, ಕ, ಮ. — To form Canarese declinable themes of Feminine Sanskṛt nouns ending in ಆ, this ಆ is changed mostly into ಎ, seldom into ಅ.

1) ಶತೃ or ಶತೃ denotes, according to Pâṇini, the Kṛt or Affix ಅತ್.

### ಪದಚ್ಛೇದಂ.

ಏಕದ್ವಿತ್ರ್ಯಾದಿ ಸಮಾಸಾಕೃತಿಯಿಂ ಪ್ರತ್ಯಯಾಂತದಿಂದೆ ಇರೆ, ಲಘುವಪ್ಪ ಏಕಾರಮಂ ಅತ್ವಮಂ, ಇರದೆ ಆಕಾರಂ, ಬಹುಳದಿಂದೆ ತಳೆದು ಇರೆ, ಲಿಂಗಂ.

### ಅನ್ವಯಂ.

ಆಕಾರಂ ಲಘುವಪ್ಪೇಕಾರಮಂ ಅತ್ವಮಂ, (ತಾನ್) ಇರದೆ, ಬಹುಳದಿಂದೆ ತಳೆದಿರೆ, ಲಿಂಗಂ ಎಂಬುದನ್ವಯಂ.

### ಟೀಕು.

ಏಕದ್ವಿತ್ರ್ಯಾದಿ=ಏಕ, ದ್ವಿ, ತ್ರಿ ಎಂಬಿವಾದಿಯಾದ ಸಂಖ್ಯಾವಾಚಿಶಬ್ದಂ; ಸಮಾಸಾಕೃತಿಯಿಂ=ಸಮಾಸಾಕಾರದಿಂದೆ; ಪ್ರತ್ಯಯಾಂತದಿಂದೆ=ತಯಪ್ರತ್ಯಯಂ ಮೊದಲಾದ ಪ್ರತ್ಯಯಾಂತದಿಂದೆ; ಇರೆ=ಇರೆ ಲಿಂಗಮಪ್ಪುವು; ಆಕಾರಂ=ಆಕಾರಾಂತಶಬ್ದಂ; ಲಘುವಪ್ಪೇಕಾರಮಂ=ಲಘುವಾದೇಕಾರಮಂ; ಅತ್ವಮಂ=ಅಕಾರಮಂ; ಇರದೆ=ನಿಲ್ಲದೆ; ಬಹುಳದಿಂದೆ=ಬಹುಳದಿಂದೆ; ತಳೆದು=ಧರಿಸಿ, ಇರೆ=ಇರೆ; ಲಿಂಗಂ=ಕನ್ನಡಕ್ಕೆ ಲಿಂಗಮಪ್ಪುವು.

### ವೃತ್ತಿ.

ಏಕ, ದ್ವಿ, ತ್ರಿ, ಚತುರ್, ಪಂಚ, ಷಟ್, ಸಪ್ತ, ಅಷ್ಟ, ನವ, ದಶ ಎಂಬಿವು ಸಹಜದಿಂ ಲಿಂಗಮಾಗವು; ಸಮಾಸಮುಂ ಮೇಣ್ಪ್ರತ್ಯಯಾಂತಮುಂ ಮಾಡೆ, ಲಿಂಗಮಕ್ಕುಂ. ಆಕಾರಾಂತಂ ಹ್ರಸ್ವಮಪ್ಪೇತ್ವಮುಂ ಪಡೆದೊಡಂ ಅಕಾರಾಂತತೆಯುಂ ಪಡೆದೊಡಂ ಲಿಂಗಮಕ್ಕುಂ.

### ಪ್ರಯೋಗಂ.

ಸಂಖ್ಯಾವಾಚಿಸಮಾಸಕ್ಕೆ—ಏಕಾಂಗ, ದ್ವಿಮುಖ, ತ್ರಿಲೋಕ, ಚತುರ್ವೇದ, ಪಂಚಭೂತ, ಷಟ್ಕರ್ಮ, ಸಪ್ತದ್ವೀಪ, ಅಷ್ಟಭುಜ, ನವನಿಧಿ, ದಶವ್ಯಾಕರಣ ಎಂದು, ಸಮಾಸಮಾಗಲೊಡಂ—

ಸಂಖ್ಯಾವಾಚಿಪ್ರತ್ಯಯಾಂತಕ್ಕೆ—ಮೇಣ್ ದ್ವಿತಯ, ತ್ರಿತಯ, ಚತುಷ್ಕ, ಪಂಚಕ, ಷಟ್ಕ, ಸಪ್ತಕ, ಅಷ್ಟಕ, ನವಮ, ದಶಮ ಎಂದು, ಪ್ರತ್ಯಯಂ ಪತ್ತಲೊಡಂ—ಎಲ್ಲಕ್ಕಂ ವಿಭಕ್ತಿಯುಂ ಪತ್ತಿಸುವದು.

ಆಕಾರಮೆಕಾರಮಾದುದರ್ಕೆ—ಮಾಲಾ, ಬಾಲಾ, ಶಾಲಾ, ಏಲಾ, ಲೀಲಾ, ಜ್ವಾಲಾ, ಅಳಕಾ, ಅಳಿಕಾ, ಯಾತ್ರಾ, ಮಾತ್ರಾ, ನಿದ್ರಾ, ಮುದ್ರಾ, ಶಾಖಾ, ರೇಖಾ, ಭಾಷಾ, ದ್ರಾಕ್ಷಾ, ಲಾಕ್ಷಾ ಎಂಬಿವು ಮೊದಲಾದುವು ಏಕಾರಾಂತಮುಂ ಪಡೆಯಲೊಡೆ ವಿಭಕ್ತಿ ಪತ್ತುಗುಂ; ಮಾಲೆ, ಬಾಲೆ, ಲೀಲೆ, ಭಾಷೆ, ಯಾತ್ರೆ ಎಂಬಂತೆ.

ಆಕಾರಮೆಕಾರಮುಮ್ ಅಕಾರಮುಮಾದುದರ್ಕೆ—ಗ್ರೀವಾ ಭಿಕ್ಷಾ ಎಂಬೆರಡು ಶಬ್ದಂಗಳ್ ಗ್ರೀವ, ಗ್ರೀವೆ; ಭಿಕ್ಷ, ಭಿಕ್ಷೆ ಎಂಬಂತೆ ಲಿಂಗಮಪ್ಪುವು.

ಆಕಾರಮ್ ಅಕಾರಮಾದುದರ್ಕೆ—ಕಂಧರಾ, ಉಪತ್ಯಕಾ, ಕರುಣಾ, ಆದಿತ್ಯಕಾ, ದಂಷ್ಟ್ರಕಾ, ವಾಲುಕಾ ಎಂಬಿವು ಮೊದಲಾದುವು—ಕಂಧರ, ಉಪತ್ಯಕ, ಕರುಣ ಎಂದು, ಅಕಾರಾಂತಂ ಪಡೆಯಲೊಡಂ ವಿಭಕ್ತಿ ಪತ್ತುಗುಂ, ಲಿಂಗಮಾಗಿ.

ಸೂತ್ರಂ.

ಆದಂ ಹ್ರಸ್ವೈದಂತಮ
ದಾದತ್ವಂಹ್ರಸ್ವಮೆನಿಸಿದೀದೂದಂತಂ |
ಜ್ಯಾದಿಸಮಸ್ತೈಕಾಕ್ಷರ
ಮಾದವಿಕೃತಿಶಬ್ದಮುಕ್ತಿವಿದರಿಂ ಲಿಂಗಂ || 83 ||

Further in forming Canarese nominal themes of Sanskṛt nouns ending in ಅ, this ಅ also is sometimes changed into ಎ (cf. S. 278); Sanskṛt final ಈ and ಊ become short; monosyllables remain as they are.

ಪದಚ್ಛೇದಂ.

ಆದಂ ಹ್ರಸ್ವೈದಂತಂ ಅದು ಆದ ಅತ್ವಂ, ಹೃಸ್ವಂ ಎನಿಸಿದ ಈದೂದಂತಂ, ಜ್ಯಾದಿಸಮಸ್ತೈಕಾಕ್ಷರಂ ಆದ ಅವಿಕೃತಿಶಬ್ದಂ ಉಕ್ತಿವಿದರಿಂ ಲಿಂಗಂ.

ಯಥಾನ್ವಯಂ.

ಟೀಕು.

ಆದಂ=ಪೀನ ಗ್ರಹಣದಿಂದೆ; ಹ್ರಸ್ವೈದಂತಂ=ಕನ್ನಡಕ್ಕೆ ಹ್ರಸ್ವವಾದ ಏಕಾರಾಂತಮುಂ; ಅದು=ಅದು; ಆದತ್ವಂ=ಆದಕಾರಾಂತಶಬ್ದಮುಂ; ಹ್ರಸ್ವಂ=ಕನ್ನಡಕ್ಕೆ ಹ್ರಸ್ವಂ; ಎನಿಸಿದೀದೂದಂತಂ=ಎನಿಸಿದ ಈಕಾರಾಂತ ಊಕಾರಾಂತಂ; ಜ್ಯಾದಿ=ಜ್ಯಾ ಎಂಬ ಶಬ್ದವಾದಿಯಾದ; ಸಮಸ್ತ=ಬಹುಳವಾದ; ಏಕಾಕ್ಷರಮಾದ=ಏಕಾಕ್ಷರವಾದ; ಅವಿಕೃತಿಶಬ್ದಂ=ವಿಕಾರವಿಲ್ಲದ ಶಬ್ದಂಗಳ್; ಉಕ್ತಿವಿದರಿಂ=ವಾಕ್ಯವಿದರಿಂದೆ; ಲಿಂಗಂ=ಲಿಂಗಮಪ್ಪುವು.

ವೃತ್ತಿ.

ಆದವೆಂಬ ಬಹುಳಗ್ರಹಣದಿಂದಾಕಾರಾಂತಮಲ್ಲದಕಾರಾಂತಮುಂ ಹ್ರಸ್ವಮಪ್ಪೇತ್ವಮಂ ಪಡೆದೊಡಂ ಲಿಂಗಮಕ್ಕುಂ; ಈಕಾರಾಂತ ಊಕಾರಾಂತಂಗಳ್ ಹ್ರಸ್ವಮಾದೊಡಂ ಲಿಂಗಮಕ್ಕುಂ; ಜ್ಯಾಶಬ್ದಂ ಮೊದಲಾದೇಕಾಕ್ಷರಶಬ್ದಂಗಳಿರ್ದ ತೆಱದಿಂ ಲಿಂಗಮಪ್ಪುವು.

ಪ್ರಯೋಗಂ.

ಅಕಾರಾಂತಕ್ಕೆ—ವಧ, ಅಭಿಲಾಪ, ಉದಾಹರಣ, ದರ್ಭ, ಪ್ರಶ್ನ, ಊಹ, ಅಳಕ ಎಂಬಿವು ವಧೆ, ಅಭಿಲಾಪೆ ಎಂಬಂತೆ ಎತ್ವಮಂ ಪಡೆದೊಡಂ ಲಿಂಗಮಪ್ಪುವು.

ಈಕಾರಾಂತಕ್ಕೆ—ಲಕ್ಷ್ಮೀ, ಗೌರೀ, ಸರಸ್ವತೀ, ಶಚೀ, ಭಾಮಿನೀ, ಗೋಮಿನೀ, ಕಾಮಿನೀ, ನಾರೀ, ಕುಮಾರೀ, ಕಾವೇರೀ, ಗೋದಾವರೀ, ಗಾಂಧಾರೀ ಎಂಬೀಕಾರಾಂತಕ್ಕೆ ಲಕ್ಷ್ಮಿ, ಗೌರಿ, ಸರಸ್ವತಿ ಎಂಬಂತೆ ಹ್ರಸ್ವಮಾದೊಡಂ,

ಊಕಾರಾಂತಕ್ಕೆ—ಸರಯೂ, ಕಂಡೂ, ಖರ್ಜೂ, ಕುಹೂ, ಜಂಬೂ, ಸ್ವಯಂಭೂ, ಖಲಪೂ, ಅಲಾಬೂ, ಅಭ್ರಮೂ, ಚಮೂ ಎಂಬೂಕಾರಾಂತಂಗಳ್ ಸರಯು, ಕಂಡು ಎಂಬಂತೆ ಹ್ರಸ್ವಮಾದೊಡಂ, ಲಿಂಗಮಕ್ಕುಂ.

ಏಕಾಕ್ಷರಕ್ಕೆ—ಜ್ಯಾ, ಮಾ, ಶ್ರೀ, ಸ್ತ್ರೀ, ಭೀ, ಭ್ರೂ, ಕೂ ಎಂಬಿವು ಮೊದಲಾದ ಏಕಾಕ್ಷರಶಬ್ದಂಗಳಿರ್ದ ತೆಱದಿಂ ವಿಭಕ್ತಿಯಂ ಪಡೆವುವು.

ಸೂತ್ರಂ.

Sanskṛt nouns with final ಅ, ಇ, ಉ and ಋ (generally, cf. Ss. 83; 278; 279) remain as they are in Canarese; but final ಋ is sometimes changed.

ಅತ್ವಾಂತಮುಮಿತ್ವಾಂತಮು
ಮುತ್ವಾಂತಮುಮಾ ಋದಂತಮುಂ ನಿಜಲಿಂಗಂ |
ಋತ್ವಕ್ಕಾರಾದೇಶಂ
ತತ್ವಂ ಪೀನಂ ವಿಧಾತೃಶಬ್ದಂ ರಾಂತಂ || 84 ||

ಪದಚ್ಛೇದಂ.

ಅತ್ವಾಂತಮುಂ ಇತ್ವಾಂತಮುಂ ಉತ್ವಾಂತಮುಂ ಆ ಋದಂತಮುಂ ನಿಜಲಿಂಗಂ; ಋತ್ವಕ್ಕೆ ಆರಾದೇಶಂ, ತತ್ವಂ ಪೀನಂ; ವಿಧಾತೃಶಬ್ದಂ ರಾಂತಂ.

ಯಥಾನ್ವಯಂ.

ಟೀಕು.

ಅತ್ವಾಂತಮುಂ=ಅಕಾರಾಂತಶಬ್ದಮುಂ; ಇತ್ವಾಂತಮುಂ=ಇಕಾರಾಂತಶಬ್ದಮುಂ; ಉತ್ವಾಂತಮುಂ=ಉಕಾರಾಂತಶಬ್ದಮುಂ; ಆ ಋದಂತಮುಂ=ಆ ಋಕಾರಾಂತಶಬ್ದಮುಂ; ನಿಜಲಿಂಗಂ=ನಿಜದಿ ಲಿಂಗಮಪ್ಪುವು, ಇರ್ದ ಹಾಂಗೆ ಲಿಂಗವಪ್ಪುದೆಂಬರ್ಥಂ; ಋತ್ವಕ್ಕೆ=ಋಕಾರಾಂತಕ್ಕೆ; ಆರಾದೇಶಂ=ಆರ ಎಂಬಾದೇಶವಪ್ಪುದು; ತತ್ವಂ=ತಕಾರಾಂತವಪ್ಪುದು; ಪೀನಂ=ವಿಶೇಷವಾಗಿ; ವಿಧಾತೃಶಬ್ದಂ=ವಿಧಾತೃವೆಂಬ ಶಬ್ದಂ; ರಾಂತಂ=ರೇಫಾಂತವಪ್ಪುದು.

ವೃತ್ತಿ.

ಅಕಾರಾಂತಮುಮಿಕಾರಾಂತಮುಮುಕಾರಾಂತಮುಂ ಋಕಾರಾಂತಮುಂ ಸ್ವಭಾವದಿಂ ಲಿಂಗಮಪ್ಪುವು; ಪೀನಗ್ರಹಣದಿಂ ಋಕಾರಾಂತಕ್ಕೆ ಆರಾದೇಶಮೊರ್ಮೆಯುಂಟು; ಧಾತೃಶಬ್ದಕ್ಕೆ ತಕಾರಮುಂ ವಿಧಾತೃಶಬ್ದಕ್ಕೆ ರೇಫಮುಮಕ್ಕುಂ.

## ಪ್ರಯೋಗಂ.

ಅಕಾರಾಂತಕ್ಕೆ—ಭುವನ, ಭವನ, ನಳಿನ, ಶಯನ, ನಯನ, ಕುಲಿಶ, ಕಲಶ, ಕರಣ, ಚರಣ, ದೇಶ, ಕೋಶ, ಧ್ಯಾನ, ಮೌನ.

ಇಕಾರಾಂತಕ್ಕೆ—ಶ್ರುತಿ, ಸ್ಮೃತಿ, ಧೃತಿ, ಕೃತಿ, ಗತಿ, ಪತಿ, ಯತಿ, ಮತಿ, ಶುದ್ಧಿ, ಸಿದ್ಧಿ, ಬುದ್ಧಿ, ವೃದ್ಧಿ, ಕವಿ, ರವಿ, ಪವಿ, ಅರಿ, ಗಿರಿ, ಹರಿ, ಲಿಪಿ, ಕಪಿ, ಧ್ವನಿ, ಮುನಿ.

ಉಕಾರಾಂತಕ್ಕೆ—ಪಶು, ಶಿಶು, ರಿಪು, ಭಾನು, ಧೇನು, ಸಾನು, ಸೇತು, ಕೇತು, ಬಂಧು, ಸಿಂಧು, ದಾರು, ಭೀರು.

ಋಕಾರಾಂತಕ್ಕೆ—ಪಿತೃ, ಸವಿತೃ ನಪ್ತೃ, ಕರ್ತೃ, ನೇತೃ, ಹೋತೃ, ಜಾಮಾತೃ, ದುಹಿತೃ, ಭರ್ತೃ, ನನಾಂದೃ, ಯಾತೃ, ಮಾತೃ, ಧಾತೃ.

ಅರಾದೇಶಕ್ಕೆ—ಸವಿತಾರ, ಕರ್ತಾರ, ನೇತಾರ, ಹೋತಾರ, ದುಹಿತಾರ, ಭರ್ತಾರ.

ಧಾತೃಶಬ್ದದ ತಕಾರಕ್ಕೆ—ಧಾತ, ಮಾಂಧಾತ.—ಭೀತನ ಧಾತನ ಸತ್ಯೋಪೇತನ. ಮಾಂಧಾತದೊರೆಯಪ್ಪ ವೀರರುಂ ಚಾಗಿಗಳುಂ.

ವಿಧಾತೃಶಬ್ದದ ರಾಂತಕ್ಕೆ—ವಿಧಾತ್ರ. ಭೀತನಿಕಾಯಕ್ಕೆ ವಿಧಾತ್ರನುಂಡಿಗೆಜವಂಗೊಟ್ಟೊಲೆ.

## ಸೂತ್ರಂ.

For ಪಿತೃ and ಸಖಿ are substituted ಪಿತರ and ಸಖ.

ಪಿತೃಶಬ್ದದೆಡೆಗರಾದೇ
ಶತೆ ಸಖಿಶಬ್ದಕ್ಕೆ ನೆಟ್ಟನತ್ವಾದೇಶ |
ಸ್ಥಿತಿಯಾಗೆ ಲಿಂಗಮಕ್ಕುಂ
ವಿತರ್ಕಮೇಂ ಪೇೞ್ ಸ್ವರಾಂತಮಿವು ಲಿಂಗಂಗಳ್ || 85 ||

## ಪದಚ್ಛೇದಂ.

ಪಿತೃಶಬ್ದದ ಎಡೆಗೆ ಅರಾದೇಶತೆ, ಸಖಿಶಬ್ದಕ್ಕೆ ನೆಟ್ಟನೆ ಅತ್ವಾದೇಶಸ್ಥಿತಿ ಆಗೆ, ಲಿಂಗಂ ಅಕ್ಕುಂ. ವಿತರ್ಕಂ ಏಂ? ಪೇೞ್! ಸ್ವರಾಂತಂ ಇವು ಲಿಂಗಂಗಳ್.

## ಅನ್ವಯಂ.

ಲಿಂಗಂಗಳಿವು ಸ್ವರಾಂತಂ. ಉಳಿದದು ಯಥಾನ್ವಯಂ.

## ಟೀಕು.

ಪಿತೃಶಬ್ದದ=ಪಿತೃ ಎಂಬ ಶಬ್ದದ; ಎಡೆಗೆ=ಸ್ಥಾನಕ್ಕೆ; ಅರಾದೇಶತೆ=ಅರ ಎಂಬಾದೇಶತ್ವಂ; ಸಖಿಶಬ್ದಕ್ಕೆ=ಸಖಿಯೆಂಬ ಶಬ್ದಕ್ಕೆ; ನೆಟ್ಟನೆ=ವ್ಯಕ್ತವಾಗಿ; ಅತ್ವಾದೇಶಸ್ಥಿತಿ=ಅಕಾರಾದೇಶಸ್ಥಿತಿ; ಆಗೆ=

ಆಗೆ; ಲಿಂಗಂ=ಲಿಂಗಂ; ಅಕ್ಕುಂ=ಅಪ್ಪುದು; ವಿತರ್ಕಮೇಂ=ವಿವಾದವೇಂ; ಪೇಲ್=ಹೇಳ್; ಲಿಂಗಂಗಳ್=ಲಿಂಗಂಗಳ್; ಇವು=ಈ ಪೇಳ್ದವು; ಸ್ವರಾಂತಂ=ಸ್ವರಾಂತಲಿಂಗಂಗಳ್ ಅಪ್ಪುವು.

ವೃತ್ತಿ.

ಸ್ವರ್ಗಸ್ಥರಪ್ಪ ಪಿತೃಗಳ್ಗರಾದೇಶಮುಂ ಸಖಿಶಬ್ದದಿಕಾರಕ್ಕಕಾರಮುಮಾಗೆ, ಲಿಂಗಮಕ್ಕುಂ.

ಪ್ರಯೋಗಂ.

ಪಿತೃಶಬ್ದಕ್ಕೆ—ಪಿತರಂ, ಪಿತರರ್.
ಸಖಿಶಬ್ದಕ್ಕೆ—ಸಖಂ ಎಂಬಂತೆ.

ಇವು ಸಂಸ್ಕೃತಸ್ವರಾಂತಲಿಂಗಂಗಳ್.

ಸೂತ್ರಂ.

Sanskṛt nominal themes ending in consonants are, in Canarese, made to end in ಅ, or in ಉ with doubling of the final consonant; or their final consonant is dropped.

ಜನಮುಲಿವ ಸಂಸ್ಕೃತವ್ಯಂ
ಜನಾಂತಲಿಂಗಂಗಳತ್ವಮುಂ ದ್ವಿತ್ವದಿನು |
ತ್ವನಿಯೋಗಮನಂತ್ಯಾದ
ರ್ಶನಮುಂ ಮೇಣ್ತಾಳ್ದು ಕನ್ನಡಕ್ಕಿವು ಲಿಂಗಂ || 86 ||

ಪದಚ್ಛೇದಂ.

ಜನಂ ಉಲಿವ ಸಂಸ್ಕೃತವ್ಯಂಜನಾಂತಲಿಂಗಂಗಳ್ ಅತ್ವಮಂ ದ್ವಿತ್ವದಿಂ ಉತ್ವನಿಯೋಗಮಂ ಅಂತ್ಯಾದರ್ಶನಮಂ ಮೇಣ್ ತಾಳ್ದು, ಕನ್ನಡಕ್ಕೆ ಇವು ಲಿಂಗಂ.

ಯಥಾನ್ವಯಂ.

ಟೀಕು.

ಜನಂ=ವಿದ್ವಜ್ಜನಂ; ಉಲಿವ=ಪೇಳ್ವ; ಸಂಸ್ಕೃತ=ಸಂಸ್ಕೃತದ; ವ್ಯಂಜನಾಂತ=ವ್ಯಂಜನಾಂತಂಗಳಾದ; ಲಿಂಗಂಗಳ್=ಪ್ರಕೃತಿಸಂಜ್ಞೆಯುಳ್ಳ ಲಿಂಗಂಗಳ್; ಅತ್ವಮಂ=ಅಕಾರಮಂ; ದ್ವಿತ್ವದಿಂ=ದ್ವಿರ್ಭಾವದೊಡನೆ; ಉತ್ವನಿಯೋಗಮಂ=ಉಕಾರದ ನಿಯೋಗಮಂ; ಅಂತ್ಯ=ಕಡೆಯಕ್ಷರದ; ಅದರ್ಶನಮಂ=ಲೋಪಮಂ; ಮೇಣ್=ವಿಕಲ್ಪದಿಂದೆ; ತಾಳ್ದು=ಧರಿಸಿ; ಕನ್ನಡಕ್ಕೆ=ಕರ್ಣಾಟಕಕ್ಕೆ; ಇವು=ಈ ಪೇಳ್ದವು; ಲಿಂಗಂ=ಲಿಂಗಮಪ್ಪುವು.

ವಿಚಾರಂ.

ಇಲ್ಲಿ ವಿಚಾರಮುಂಟು—ಸಕಾರಾಂತಪ್ರಕೃತಿಗಳ್ಗೆ ದ್ವಿತ್ವದಿಂ ಉತ್ವಮುಮಂತ್ಯಲೋಪಮುಂ ವಿಕಲ್ಪದಿಂದಕ್ಕುಂ. ಶಬ್ದಾನುಶಾಸನದಲ್ಲಿ ಸೂತ್ರಂ (2, 34) || ಉಗಬಾದೀನಾಂ || ವೃತ್ತಿ || ಅಬಾ

ದೀನಾಂ ಶಬ್ದಾನಾಂ ಉಗಾಗಮೋ ಭವತಿ || ಎಂದುದಾಗಿ, ಅಬಾದಿಗಳ್ಗೆ (ಅಪ್ ಮುಂತಾದ ಶಬ್ದಂಗಳ್ಗೆ) ಉಗಾಗಮಂ ಬರ್ಪುದು; ಉಗಾಗಮಂ ಬಂದಲ್ಲಿ ದ್ವಿತ್ವಮುಂಟು. ಅಪ್, ವಿಯತ್, ಸಂಯತ್, ವಿದ್ಯುತ್, ಜಗತ್, ದ್ಯುತ್, ಪುರಿತತ್, ಅಗ್ನಿಚಿತ್, ಯಜುಸ್, ಸದಸ್, ತಟಿತ್ ಇವಾದಿಯಾದುವು ಅಬಾದ್ಯಾಕೃತಿಗಣಂ; ಇವರ್ಕೆ ದ್ವಿತ್ವದಿಂ ಉತ್ವಮುಂಟು. ಸೂತ್ರಂ (2, 35) || ವಾಗಾದೀನಾಂ ಸ್ವಂತವಚ್ಚ || ವೃತ್ತಿ || ವಾಚ್ ಇತ್ಯ ಏವಮ್ ಆದೀನಾಂ ಶಬ್ದಾನಾಂ ಸ್ವಂತವತ್ ಪ್ರಥಮೈಕವಚನವದ್ ರೂಪಮ್ ಅತಿದಿಶ್ಯತೇ ಉಗಾಗಮಶ್ ಚ ಭವತಿ || ಎಂದುದಾಗಿ, ವಾಗಾದಿಗಣಕ್ಕೆ ಸಂಸ್ಕೃತಪ್ರಥಮೈಕವಚನದ ಮೇಲೆ ದ್ವಿತ್ವದಿನುತ್ವಮಕ್ಕುಂ; ವಾಕ್ಕು, ದಿಕ್ಕು, ತ್ವಕ್ಕು, ಋಕ್ಕು, ಉಷ್ಣಿಕ್ಕು, ಕ್ಷುತ್ತು, ಪ್ರತಿಪತ್ತು, ಪರಿಷತ್ತು ಎಂಬಂತೆ. ವಾಚ್, ತ್ವಚ್, ಕ್ಷುಧ್, ವಿರುದ್, ಸಂವಿದ್, ಸಂಪದ್, ಪ್ರತಿಪದ್, ಪರಿಷದ್, ವಿಪದ್, ಉಷ್ಣಿಹ್(-ಕ್), ಋಚ್, ಸ್ರಜ್, ದಿಶ್, ವಿಶ್ ಇವಾದಿಯಾದುವು ವಾಗಾದ್ಯಾಕೃತಿಗಣಂ. ಸೂತ್ರಂ (2, 36) ||ಮಹದಾದೀನಾಮ್ ಅಪಿ|| || ವೃತ್ತಿ || ಮಹದಾದೀನಾಂ ಶಬ್ದಾನಾಂ ಸ್ವಂತವದ್ ರೂಪಮ್ ಅತಿದಿಶ್ಯತೇ ಉಗಾಗಮಶ್ ಚ ಭವತಿ ನಪುಂಸಕಲಿಂಗವಿಷಯೇ || ಎಂದುದಾಗಿ, ಮಹದಾದಿಗಣಕ್ಕೆ ನಪುಂಸಕಲಿಂಗದಲ್ಲಿ ಪ್ರಥಮೈಕವಚನದ ಮೇಲೆ ದ್ವಿತ್ವದಿಂ ಉತ್ವಮಕ್ಕುಂ. ಮಹತ್ತು, ಬೃಹತ್ತು, ಸಮ್ಯಕ್ಕು ಎಂಬಂತೆ; ಪುಲ್ಲಿಂಗದಲ್ಲಿ ಮಹಂತಂ, ಬೃಹಂತಂ, ಸಮ್ಯಂಚಂ ಎಂದಕ್ಕುಂ. ಮಹತ್, ಬೃಹತ್, ಪ್ರಾಂಚ್ (ಪ್ರಾಚ್), ಅವಾಂಚ್ (ಅವಾಚ್), ಪ್ರತ್ಯಂಚ್ (ಪ್ರತ್ಯಚ್), ಉದಂಚ್ (ಉದಚ್), ತಿರ್ಯಂಚ್ (ತಿರ್ಯಚ್), ವಿಷ್ವಚ್, ನ್ಯಚ್, ಅಮುದ್ರ್ಯಚ್ (ಅಮುದ್ರ್ಯಚ್), ಅದದ್ರ್ಯಚ್, ಅಮುಮುಯಚ್, ಅದಮುಯಚ್, ಸಧ್ರ್ಯಚ್, ಸಮ್ಯಚ್ ಇವಾದಿಯಾದುವು ಮಹದಾದ್ಯಾಕೃತಿಗಣಂ.

## ವೃತ್ತಿ.

ಸಂಸ್ಕೃತವ್ಯಂಜನಾಂತಲಿಂಗಂಗಳತ್ತಮುಂ ಪಡೆದುಂ ದ್ವಿತ್ತಂ ಬೆರಸಿದುತ್ತಮುಂ ಪಡೆದುಂ ಅಂತ್ಯಲೋಪಮುಂ ಮೇಣ್ಪಡೆದುಂ ಲಿಂಗಮಕ್ಕುಂ.

## ಪ್ರಯೋಗಂ.

ದಿವ್, ಸ್ರಜ್, ಚತುರ್, ಮರುತ್, ಗರ್ದಭ್, ಬುಧ್, ಕಕುಭ್, ವೇದವಿದ್, ಪುರ್, ಮುದ್, ಸಮವಯಸ್, ಗುಣಭಾಜನ್, ವಿಹಾಯಸ್, ಸಂಪದ್ ಇವು ಮೊದಲಾದ ವ್ಯಂಜನಾಂತಕ್ಕೆ ದಿವ, ಸ್ರಜ, ಚತುರ ಎಂಬಂತತ್ತಮಾದೊಡಂ—

ರಜ್, ಅಪ್, ಕ್ಷುತ್, ಪ್ರತಿಪತ್, ಋಕ್, ಯಜುಸ್, ವಿದ್ಯುತ್, ದ್ವಿಟ್, ಪ್ರಾವೃಟ್, ವಾಕ್ ಇವು ಮೊದಲಾದುವರ್ಕೆ ಉತ್ತಂ ಬೆರಸಿ ದ್ವಿಭರ್ಾವಮಾಗಿ ರಜ್ಜು, ಅಪ್ಪು, ಕ್ಷುತ್ತು ಎಂಬಂತಾದೊಡಂ—

ರಾಜನ್, ಮೂರ್ಧನ್, ಪೂಷನ್, ಅರ್ಯಮನ್, ಮಘವನ್, ಕರಿನ್, ಪಂಡನ್, ಧಾಮನ್, ಸೀಮನ್, ಊಷ್ಮನ್, ಕರ್ಮನ್, ಚರ್ಮನ್, ಬ್ರಹ್ಮನ್, ಪುರೂರವನ್, ಅಧ್ವನ್, ಯುವನ್ ಇವು ಮೊದಲಾದ ಶಬ್ದಂಗಳಂತ್ಯಲೋಪಮಾಗಿ

ರಾಜ, ಪೂಷ, ಮೂರ್ಧ ಎಂಬಿಂತಾದೊಡಂ ಲಿಂಗಮಪ್ಪುವು; ಸೀಮೋಷ್ಮಂಗಳದಂ ತತೆಗೆ, ಸೀಮೆ ಊಷ್ಮೆ ಎಂದು, ಎತ್ವಮುಮುಂಟು.

ಮೇಣೆಂಬ ವಿಕಲ್ಪಾರ್ಥದಿಂ ಸಕಾರಾಂತದಲ್ಲಿ—ಯಶ, ಯಶಸ್ಸು; ತೇಜ, ತೇಜಸ್ಸು; ವಯ, ವಯಸ್ಸು; ಪಯ, ಪಯಸ್ಸು; ಮನ, ಮನಸ್ಸು; ಶ್ರೇಯ, ಶ್ರೇಯಸ್ಸು ಎಂದು, ಸಲ್ಲುದು.

ಮೇಣೆಂಬುದಱಿಂ ಸಹ ವ್ಯಂಜನಮಾಗಿಯೆ ಕೆಲವಿರ್ಪುವು—ವಾರ್ (ವಾಕ್), ಗೀರ್; ಮೇಣೆಂಬುದಱಿಂ ಗೀರ್ ಎಂಬುದರ್ಕೆ ಗಿರೆ ಎಂದೆತ್ತಮುಮುಂಟು.

ಸೂತ್ರಂ.

The Nominative Plural of certain Sanskrt words, after having dropped its Visarga, is used as a nominal theme in Canarese.

ಪ್ರಚುರತೆಯಿಂ ಪ್ರಥಮಾಬಹು
ವಚನಂಗಳವೇಕವಚನಕೃತಲಿಂಗಂಗಳ್ |
ನಿಚಿತವಿಸರ್ಗಮನುೞಿದಂ
ದುಚಿತಜ್ಞರ್ತಿಳಿವುದಿವನುದಾಹೃತಿಮುಖದಿಂ || 87 ||

ಪದಚ್ಛೇದಂ.

ಪ್ರಚುರತೆಯಿಂ ಪ್ರಥಮಾಬಹುವಚನಂಗಳ್ ಅವು ಏಕವಚನಕೃತಲಿಂಗಂಗಳ್, ನಿಚಿತವಿಸರ್ಗಮುಂ ಉೞಿದ ಅಂದು; ಉಚಿತಜ್ಞರ್ ತಿಳಿವುದು ಇವಂ ಉದಾಹೃತಿಮುಖದಿಂ.

ಅನ್ವಯಂ.

ಪ್ರಚುರತೆಯಿಂ ಪ್ರಥಮಾಬಹುವಚನಂಗಳ್, ಅವು ನಿಚಿತವಿಸರ್ಗಮುಂ ಉೞಿದಂದು, ಏಕವಚನಕೃತಲಿಂಗಂಗಳ್; ಉಚಿತಜ್ಞರ್ ಇವಂ ಉದಾಹೃತಿಮುಖದಿಂ ತಿಳಿವುದು.

ಟೀಕು.

ಪ್ರಚುರತೆಯಿಂ=ಪ್ರಸಿದ್ಧಿಯಿಂದೆ; ಪ್ರಥಮಾಬಹುವಚನಂಗಳ್=ಸಂಸ್ಕೃತದ ಪ್ರಥಮಾವಿಭಕ್ತಿಯ ಬಹುವಚನಂಗಳ್; ಅವು=ಅವು; ನಿಚಿತವಿಸರ್ಗಮುಂ=ನಿಶ್ಚಯಿಸಲ್ಪಟ್ಟ ವಿಸರ್ಜನೀಯವಂ; ಉೞಿದಂದು=ಬಿಟ್ಟಂದು; ಏಕವಚನ=ಏಕವಚನವಾಗಿ; ಕೃತ=ಮಾಡಲ್ಪಟ್ಟ; ಲಿಂಗಂಗಳ್=ಲಿಂಗಂಗಳೆನಿಸುವುವು; ಉಚಿತಜ್ಞರ್=ಇಂಗಿತಜ್ಞರ್; ಇವಂ=ಈ ಶಬ್ದಂಗಳಂ; ಉದಾಹೃತಿಮುಖದಿಂ=ಉದಾಹರಣೆಯ ಮುಖದಿಂದೆ; ತಿಳಿವುದು=ಅಱಿವುದು.

ವೃತ್ತಿ.

ಸಂಸ್ಕೃತದ ಪ್ರಥಮಾಬಹುವಚನಂಗಳ್ತಂಮ ವಿಸರ್ಗಮುಂ ಕಳೆಯೆ, ಕನ್ನಡದೊಳೇಕವಚನಮಾಗಿ, ಲಿಂಗಮಪ್ಪುವು.

### ಪ್ರಯೋಗಂ.

ಶ್ವಾನ, ಯುವಾನ, ಅಧ್ವಾನ, ಸಖಾಯ, ಜ್ಯಾಯಾಂಸ, ಕನೀಯಾಂಸ, ವಿದ್ವಾಂಸ, ಭಾಸ್ವಂತ, ಶ್ರೀಮಂತ, ಹನುಮಂತ ಇವು ಮೊದಲಾದುವು.

### ಸೂತ್ರಂ.

One may say that there are 9 different genders in Canarese.

ನೀನಱಿ ಕರ್ಣಾಟಕದೊ
ಳ್ಪೀನಂ ಸ್ತ್ರೀಪುಂನಪುಂಸಕೋಭಯಪುಂಸ್ತ್ರೀ |
ಸ್ತ್ರೀನಪ್ಸಮಸ್ತವಾಚ್ಯಾ
ನೂನಾವ್ಯಯಮೆಂದು ಲಿಂಗವೊಂಬತ್ತು ತೆಱಿಂ || 88 ||

### ಪದಚ್ಛೇದಂ.

ನೀಂ ಅಱಿ ಕರ್ಣಾಟಕದೊಳ್ ಪೀನಂ, ಸ್ತ್ರೀಪುಂನಪುಂಸಕೋಭಯಪುಂಸ್ತ್ರೀಸ್ತ್ರೀನಪ್ಸಮಸ್ತವಾಚ್ಯಾನೂನಾವ್ಯಯಂ ಎಂದು, ಲಿಂಗಂ ಒಂಬತ್ತು ತೆಱಿಂ!

### ಅನ್ವಯಂ.

ಲಿಂಗಂ ಒಂಬತ್ತು ತೆಱಿಂ ನೀಂ ಅಱಿ! ಉಳಿದದು ಯಥಾನ್ವಯಂ.

### ಟೀಕು.

ಕರ್ಣಾಟಕದೊಳ್=ಕನ್ನಡದಲ್ಲಿ; ಪೀನಂ=ವೆಗ್ಗಳವಾಗಿ; ಸ್ತ್ರೀ=ಸ್ತ್ರೀಲಿಂಗವೆಂದು; ಪುಂ=ಪುಲ್ಲಿಂಗವೆಂದು; ನಪುಂಸಕ=ನಪುಂಸಕಲಿಂಗವೆಂದು; ಉಭಯ=ಪುಂನಪುಂಸಕಲಿಂಗವೆಂದು; ಪುಂಸ್ತ್ರೀ=ಪುಂಸ್ತ್ರೀಲಿಂಗವೆಂದು; ಸ್ತ್ರೀನಪ್=ಸ್ತ್ರೀನಪುಂಸಕಲಿಂಗವೆಂದು; ಸಮಸ್ತ=ತ್ರಿವಿಧಲಿಂಗವೆಂದು; ವಾಚ್ಯ=ವಿಶೇಷ್ಯಾಧೀನಲಿಂಗವೆಂದು; ಅನೂನ=ಕೊರತೆಯಿಲ್ಲದ; ಅವ್ಯಯಂ=ಅವ್ಯಯಲಿಂಗಮೆಂದು; ಲಿಂಗಂ=ಲಿಂಗಂಗಳ್; ಒಂಬತ್ತು ತೆಱಿಂ=ಒಂಬತ್ತು ಪ್ರಕಾರವೆಂದು; ನೀಂ=ನೀಂ; ಅಱಿ=ತಿಳಿ.

### ವೃತ್ತಿ.

ಕನ್ನಡದೊಳ್ ಪಿರಿದುಂ ಸ್ತ್ರೀಲಿಂಗಮೆಂದುಂ, ಪುಲ್ಲಿಂಗಮೆಂದುಂ, ನಪುಂಸಕಲಿಂಗಮೆಂದುಂ, ಪುಂಸ್ತ್ರೀಲಿಂಗಮೆಂದುಂ, ಸ್ತ್ರೀನಪುಂಸಕಲಿಂಗಮೆಂದುಂ, ಪುಂನಪುಂಸಕಲಿಂಗಮೆಂದುಂ, ತ್ರಿವಿಧಲಿಂಗಮೆಂದುಂ, ವಿಶೇಷ್ಯಾಧೀನಲಿಂಗಮೆಂದುಂ, ಅವ್ಯಯಲಿಂಗಮೆಂದುಂ, ಲಿಂಗಮೊಂಬತ್ತು ತೆಱಿಂ.

### ಪ್ರಯೋಗಂ.

ಸ್ತ್ರೀಲಿಂಗಕ್ಕೆ—ಅರಸಿ, ದೇವಿ.
ಪುಲ್ಲಿಂಗಕ್ಕೆ—ಅರಸಂ, ದೇವಂ, ನರಂ, ಸುರಂ.

ನಪುಂಸಕಲಿಂಗಕ್ಕೆ—ಕನ್ನಡಿ, ಕಳಸಂ, ಜೆಡೆ, ಕೊಡೆ.

ಪುಂನಪುಂಸಕಲಿಂಗಕ್ಕೆ—ರವಿ ಮೂಡಿದಂ, ರವಿ ಮೂಡಿದುದು; ವಿಧುವಿವಂ, ವಿಧುವಿದು; ಇವಱಂತೆ ಮಂಗಳಬುಧಬೃಹಸ್ಪತ್ಯಾದಿನವಗ್ರಹಗಳೆಲ್ಲಂ ಪುಂನಪುಂಸಕಲಿಂಗಂಗಳ್; ಆಳಿವಂ, ಆಳಿದು; ಬಸಂತಂ ಬಂದ, ಬಸಂತಂ ಬಂದುದು; ಮಲಯಾನಿಲಂ ತೀಡಿದಂ, ಮಲಯಾನಿಲಂ ತೀಡಿದುದು; ಕಾಮಂಗೆಯುಂ ಕಾಮಕ್ಕಮೇಕತ್ವಮುಳ್ಳುದಱಿಂ ಕಾಮನೆಚ್ಚಂ, ಕಾಮಂ ಪೆರ್ಚಿದುದು. ಇವೆಲ್ಲಂ ಪುಂನಪುಂಸಕಂ.

ಪುಂಸ್ತ್ರೀಲಿಂಗಕ್ಕೆ—ಇವರ್ ಪುರುಷರ್, ಇವರ್ ಸ್ತ್ರೀಯರ್; ಅವರ್ ಗಂಡರ್, ಅವರ್ ಪೆಂಡಿರ್; ಉವರ್ ದೇವರ್, ಉವರ್ ದೇವಿಯರ್. ತೋಱಿತ್ತೆಂಬುದುಮಂತೆ—ಇವಂ ದೇವರ ತೋಱಿತ್ತು, ಇವಳ್ದೇವರ ತೋಱಿತ್ತು.

ಸ್ತ್ರೀನಪುಂಸಕಕ್ಕೆ—ಆ ಪೆಣ್ಜಾಣೆ, ಆ ಪೆಣ್ಬಂದುದು; ಆ ಕನ್ನಿಕೆ ಸಲ್ಲಕ್ಷಣೆ, ಆ ಕನ್ನಿಕೆ ಪೊಲ್ಲದು. ಸಿರಿ ಸರಸ್ವತಿದೇವತೆ ಎಂಬಿವುಮಂತೆ—ಸಿರಿವೊಲ್ವಳೆ ಹೃದ್ಯವಿದ್ಯರಂ; ಸಿರಿಯೊಂದಾಗದೊಡೆದೆನೆ ಸುಜನೋತ್ತಂಸಂ (—ದೊಡನೆನೊ ಸುಜನೋತ್ತಂಸಾ; M. B. ಸಿರಿಯೊಂದೊಡಮೆನೊ | ಸುಜನೋತ್ತಂಸ); ಸರಸ್ವತಿ ಕಯ್ಮೆರವಾಗಿ (ಕಯ್ನೆರವಾಗಿ) ಪೇೞ್ದಪಳ್; ಪರಮಜನೇನ್ದ್ರ ವಾಣಿಯೆ ಸರಸ್ವತಿ ಬೆರದು ಪೆಣ್ರೂಪಮುಮಂ ಧರಿಸಿ ನಿಂದುದಲ್ತದುವೆ; ದೇವತೆಯರ್ ಮೆಚ್ಚಿ ವರಮುನರಸಂಗಿತ್ತರ್ (ಬರ—); ಬಾರಿಸಿದುವು ಬಿಡದೆ ಜಡೆದು ವನದೇವತೆಗಳ್. ಅವಳ್ ಸಜ್ಜನವೆಣ್, ಅದು ಸಜ್ಜನವೆಣ್.

ತ್ರಿಲಿಂಗಕ್ಕೆ—ನೀನರಸಂ, ನೀನರಸಿ, ನೀಂ ಪಶು; ತಾನ್, ಆನ್, ಏತರ್ಕೆ, ಅದರ್ಕೆ, ಶಿಸು, ಹಸುಳೆ, ಮಗುವು, ಕೂಸು, ಸೊಂದಿ, ಪಗೆ, ಕೆಳೆ, ಅರಸು, ತರುವಲಿ ಎಂಬಿವೆಲ್ಲಮಂತೆ.

ವಾಚ್ಯಲಿಂಗಮೆಂದು ವಿಶೇಷ್ಯಾಧೀನಲಿಂಗಕ್ಕೆ—[1]ನೇಱಿದನಿವಂ, ನೇಱಿದಳಿವಳ್; ನೇಱಿತ್ತಿದು (cf. S. 77); ಅಭಿಮಾನಿ, ದಾನಿ, ಸಾಧು, ಪಟು, ಹಡಣ, ಚಂಡಿ, ರಾಗಿ, ಭೋಗಿ, ಸುಖಿ, ಹೇಡಿ, ಕಲಿ, ಗುರು, ಲಘು ಇವುಮಾ ತೆಱದೆ ಸಲ್ವುವು.

ಅವ್ಯಯಲಿಂಗಕ್ಕೆ—ಕಂಮಿದಂ, ಕಂಮಿದಳ್, ಕಂಮಿತು (cf. S. 300); ಭೋಂಕನೆ (S. 305) ಬಂದಂ, ಭೋಂಕನೆ ಬಂದಳ್, ಭೋಂಕನೆ ಬಂದುದು; ತೊಟ್ಟನೆ, ಮೆಲ್ಲನೆ, ಕಮ್ಮನೆ, ಇಮ್ಮನೆ, ಸುಮ್ಮನೆ (S. 317), ಸಿಯ್ಯನೆ, ಕೆಚ್ಚನೆ, ಪಚ್ಚನೆ, ತೆಳ್ಳನೆ, ಬೆಳ್ಪಳಂ (S. 311), ಚೆಚ್ಚರಂ (S. 305) ಇವಾದಿಯಾಗಱಿವುದು. [Two Manu-

1) ವಿಶೇಷಣಂ (also ವಿಶೇಷಂ) is that which particularizes the ವಿಶೇಷ್ಯಂ i. e. that which is particularized. ವಿಶೇಷಣಂ=Adjective, Apposition; ವಿಶೇಷ್ಯಂ=Substantive.

scripts have also ಸೋಡಂಬಾಡಂ (S. 309), ಬಱಿದೆ (S. 317; M. B. ಸೋಡಂ ಬಾಡವೆಂದು ಬರಿದೆಂಬರ್ಥಂ), ಅಂತೆವೋಲ್ (S. 316), ಮಿಗೆ (S. 304), ದಲ್ (S. 306), ವಲಂ (S. 306), ತೆಱಂ, ಕೆಂನಂ (S. 304), ಮತ್ತೆ (S. 312), ಬಲ್ಮೆ].

ಸೂತ್ರಂ.

The 6 classes of words of dependent gender (ವಾಚ್ಯಲಿಂಗಂ, ವಿಶೇಷ್ಯಾಧೀನಲಿಂಗಂ): Pronouns, Adjectives, Relative Compounds (ಬಹುವ್ರೀಹಿ, Ss. 165; 185; 186), primary Verbal nouns, Secondary nouns, and Numbers.

ಬಗೆ ನೀನಾನಾನ್ತಾನೆಂಬು
ಕ್ತಿಗಳುಂ ಗುಣವಚನಸರ್ವನಾಮಬಹುವ್ರೀ |
ಹಿಗಳುಂ ಕೃತ್ತದ್ಧಿತಸಂ
ಖ್ಯೆಗಳುಂ ಸಲೆ ವಾಚ್ಯಲಿಂಗಮೆಂದೀ ಕ್ರಮದಿಂ || 89 ||

ಪದಚ್ಛೇದಂ.

ಬಗೆ, ನೀನ್ ಆನ್ ತಾನ್ ಎಂಬ ಉಕ್ತಿಗಳುಂ ಗುಣವಚನ ಸರ್ವನಾಮ ಬಹುವ್ರೀಹಿಗಳುಂ ಕೃತ್‌ತದ್ಧಿತ ಸಂಖ್ಯೆಗಳುಂ ಸಲೆ ವಾಚ್ಯಲಿಂಗಂ ಎಂದು, ಈ ಕ್ರಮದಿಂ!

ಅನ್ವಯಂ.

ವಾಚ್ಯಲಿಂಗಂ ಎಂದು, ಈ ಕ್ರಮದಿಂ ಬಗೆ ಎಂಬುದನ್ವಯಂ.

ಟೀಕು.

ನೀಂ=ನೀನೆಂದು; ಆಂ=ಆನೆಂದು; ತಾಂ=ತಾನೆಂದು; ಎಂಬುಕ್ತಿಗಳುಂ=ಎಂಬ ವಾಕ್ಯಂಗಳುಂ; ಗುಣವಚನ=ಗುಣವಚನಂಗಳುಂ; ಸರ್ವನಾಮ=ಸರ್ವನಾಮಂಗಳುಂ; ಬಹುವ್ರೀಹಿಗಳುಂ=ಬಹುವ್ರೀಹಿಶಬ್ದಂಗಳುಂ; ಕೃತ್=ಕೃತ್ತುಗಳುಂ; ತದ್ಧಿತ=ತದ್ಧಿತಂಗಳುಂ; ಸಂಖ್ಯೆಗಳುಂ=ಸಂಖ್ಯಾವಾಚಿಗಳುಂ; ಸಲೆ=ಚನ್ನಾಗಿ; ವಾಚ್ಯಲಿಂಗಂ=ವಿಶೇಷ್ಯಾಧೀನಲಿಂಗಮೆಂದು; ಈ ಕ್ರಮದಿಂ=ಈ ರೀತಿಯಿಂದೆ; ಬಗೆ=ಭಾವಿಸು.

ವೃತ್ತಿ.

ನೀನ್, ಆನ್, ತಾನ್ ಎಂಬಿವುಂ ಗುಣವಚನಮುಂ ಸರ್ವನಾಮಮುಂ ಬಹುವ್ರೀಹಿಯುಂ ಕೃತ್ತುಂ ತದ್ಧಿತಮುಂ ಸಂಖ್ಯೆಯುಂ ವಿಶೇಷ್ಯಾಧೀನಲಿಂಗಮೆಂದಱಿವುದು.

ಪ್ರಯೋಗಂ.

ನೀನ್ ಆನ್ ತಾನ್ ಎಂಬಿವರ್ಕೆ—ನೀಂ ಕಾಮಂ, ನೀಂ ರತಿ, ನೀಂ ಗಿಳಿ; ಆಂ ಶಿವಂ, ಆಂ ಗೌರಿ, ಆಂ ನಂದಿ; ತಾನವಂ, ತಾನವಳ್, ತಾನದು.

ಗುಣವಚನಕ್ಕೆ—ಇನಿಯಂ, ಇನಿಯಳ್, ಇನಿದು.

ಸರ್ವನಾಮಕ್ಕೆ—ಪೆಱಂ, ಪೆಱಳ್, ಪೆಱತು.

ಬಹುವ್ರೀಹಿಗೆ—ಅವಂ ವಿಮಲಮತಿ, ಅವಳ್ ವಿಮಲಮತಿ, ಅದು ವಿಮಲ ಮತಿ.

ಕೃತ್ತಿಂಗೆ—ಪಾಡಿದಂ, ಪಾಡಿದಳ್, ಪಾಡಿದುದು.

ತದ್ಧಿತಕ್ಕೆ—ಓದಾಳಿ ಇವಂ, ಓದಾಳಿ ಇವಳ್, ಓದಾಳಿ ಇದು.

ಸಂಖ್ಯೆಗೆ—ಸಾಯಿರ ಗಂಡರ್, ಸಾಯಿರ ಪೆಂಡಿರ್, ಸಾಯಿರ ಮನೆಗಳ್.

ಸೂತ್ರಂ.

Particles (Indeclinables), though unchangeable, adjust themselves, as it were, to cases, number and gender.

ದೊರೆವಡೆದವ್ಯಯಲಿಂಗಂ
ಸರಿ ಸರ್ವವಿಭಕ್ತಿಗಂ ತ್ರಿಲಿಂಗಕ್ಕಂ ತಾಂ |
ಸರಿ ವಚನತ್ರಿತಯಕ್ಕಂ
ಸರಿಯೆನಿಸಿ ವಿಕಾರಮಿಲ್ಲದರ್ಥಮನೀಗುಂ || 90 ||

ಪದಚ್ಛೇದಂ.

ದೊರೆವಡೆದ ಅವ್ಯಯಲಿಂಗಂ ಸರಿ ಸರ್ವವಿಭಕ್ತಿಗಂ, ತ್ರಿಲಿಂಗಕ್ಕಂ ತಾಂ ಸರಿ, ವಚನತ್ರಿತಯಕ್ಕಂ ಸರಿ ಎನಿಸಿ, ವಿಕಾರಂ ಇಲ್ಲದೆ, ಅರ್ಥಮಂ ಈಗುಂ.

ಅನ್ವಯಂ.

ದೊರೆವಡೆದವ್ಯಯಲಿಂಗಂ ಸರ್ವವಿಭಕ್ತಿಗಂ ಸರಿ, ತ್ರಿಲಿಂಗಕ್ಕಂ ತಾಂ ಸರಿ, ವಚನತ್ರಿತಯಕ್ಕಂ ಸರಿ ಎನಿಸಿ, ವಿಕಾರಂ ಇಲ್ಲದೆ, ಅರ್ಥಮಂ ಈಗುಂ.

ಟೀಕು.

ದೊರೆವಡೆದ=ಪ್ರಸಿದ್ಧವಡೆದ; ಅವ್ಯಯಲಿಂಗಂ=ಅವ್ಯಯಲಿಂಗಂಗಳ್; ಸರ್ವವಿಭಕ್ತಿಗಂ=ಸಪ್ತ ವಿಭಕ್ತಿಗೆಯುಂ; ಸರಿ=ಸಮಾನಂ; ತ್ರಿಲಿಂಗಕ್ಕಂ=ಮೂಱು ಲಿಂಗಕ್ಕೆಯುಂ; ತಾಂ=ತಾಂ; ಸರಿ=ಸಮಾನಂ; ವಚನತ್ರಿತಯಕ್ಕಂ=ಏಕವಚನ ದ್ವಿವಚನ ಬಹುವಚನಂಗಳ್ಗೆಯುಂ; ಸರಿಯೆನಿಸಿ=ಸಮಾನವೆನಿಸಿ; ವಿಕಾರಮಿಲ್ಲದೆ=ರೂಪಾಂತರವನೆಯ್ದದೆ; ಅರ್ಥಮಂ=ಅರ್ಥವಂ; ಈಗುಂ=ಕೊಡುವುವು.

ವೃತ್ತಿ.

ಅವ್ಯಯಲಿಂಗಂ ಸಪ್ತವಿಭಕ್ತಿಗಂ ಲಿಂಗತ್ರಯಕ್ಕಂ ವಚನತ್ರಯಕ್ಕಂ ಸರಿಯಾಗಿ ದರ್ ತೆಱದಿನರ್ಥಮಂ ಕುಡುಗುಂ.

ಪ್ರಯೋಗಂ.

ಪ್ರಥಮಾವಿಭಕ್ತಿಗೆ—ನಿರ್ನರಂ (S. 301) ಬಂದನೆಂಬಲ್ಲಿ ನಿರ್ನಿಮಿತ್ತಂ ಬಂದನೆಂಬ ಪ್ರಥಮೆಯನಱಿವುದು.

ಸುರ-ತರು-ನಂದನಂಗಳಿರ ರತ್ನ-ಪಿನದ್ಧ-ವಿಮಾನ-ಕುಟ್ಟಿಮಾಂ
ತರ-ಸುರಸಾಲಯಂಗಳಿರ ಚಾರು-ವಿಲೋಲ-ಕಟಾಕ್ಷ-ಪಾತ-ಸುಂ
ದರ-ಪರಿವಾರ-ದೇವಿಯರಿರಾ ಕಡುಕೈದು ಕೃತಾಂತನಿಂತು ನಿ
ರ್ದಯಮೆಱೆದೊಯ್ಯೆ ಬಾರಿಸದೆ ಕೆಮ್ಮನುಪೇಕ್ಷಿಸಿ (ಕಮ್ಮ—) ನೋಡುತಿರ್ಪರೇ
|| ಚಂಪಕಮಾಲಾವೃತ್ತಂ[1] ||

ದ್ವಿತೀಯಾವಿಭಕ್ತಿಗೆ—(ಚಟ್ಟರಂ) ಚಟ್ಟರಂ (S. 305) ನುಡಿದನೆಂಬಲ್ಲಿ ಚಟ್ಟರ ಮಂ ನುಡಿದನೆಂಬ ದ್ವಿತೀಯೆಯನಱಿವುದು.

ತೃತೀಯಾವಿಭಕ್ತಿಗೆ—ಅವರ್ಕೆ ಅಂತಱಿಂದೆಂಬಿವಱಲ್ಲಿ (S. 317) ಪರಿವಿಡಿಯಿಂ ಅದಱಿಂದೆ ಎಂಬ ತೃತೀಯೆಯನಱಿವುದು.

ಚತುರ್ಥಿಗೆ—ಅವರ್ಕೆಯ್ದೆ ಕವಲ್ಕವಲ್ತು ಪಲವುಂ ಕೊಂಬಾದುವೊಳ್ಗೊಂಬು ಮಂ [ಗೊಂಬುಗಳ್]; ಅಂತಱಿಂದವರನಾ ಪೊಱಲೊಳ್ ಕಾಣಲ್ಬಂತು ಚಿಂತಿಸಿ ಮುಪಾಯಮಂ; ಪಚ್ಚನೆ ಕೆಚ್ಚನೆ ಬಗೆಯನೆಂಬಲ್ಲಿ ಚತುರ್ಥಿ.

ಷಷ್ಠಿಗೆ—ಮತ್ತಿನ (S. 306) ಎಂಬಲ್ಲಿ ಷಷ್ಠಿ. ಮತ್ತಿನ ಮತ್ತಿವು (M. B. ಮತ್ತಿ) ಬೇರ್ಗಳ ಬಿತ್ತುಗಳಾವೆಡೆಯೊಳೇನೊ ಸುಜನೋತ್ತಂಸಾ (see s. S.108).

ತ್ರಿಲಿಂಗಕ್ಕೆ—ಮಿಗೆ (S. 304) ಬಟ್ಟಂ, ಮಿಗೆ ಬಟ್ಟಳ್, ಮಿಗೆ ಬಟ್ಟುದು; ಮತ್ತೆ (S. 312) ನೋಡಿದಂ, ಮತ್ತೆ ನೋಡಿದಳ್, ಮತ್ತೆ ನೋಡಿದುದು.

ವಚನತ್ರಯಕ್ಕೆ—ಭೋಂಕನೋರ್ವಂ ಬಂದಂ, ಮೆಲ್ಲನೀರ್ವರ್ ನುಡಿದರ್, ನೆಟ್ಟ ನೆಲ್ಲರುಂ ಪೋದರ್ (S. 307).

ಸೂತ್ರಂ.

Only 3 genders are used in Canarese.

ಪುರುಷರೆ ಪುಲ್ಲಿಂಗಂ ಸ್ತ್ರೀ
ಯರೆ ತಾಂ ಸ್ತ್ರೀಲಿಂಗಮುಳಿದುವೆಲ್ಲಂ ನಪ್ಪಾ |
ಗಿರೆ ಸಲ್ಗುಂ ಕನ್ನಡದೊಳ್
ಪರಿವರ್ತಿಸವುಳಿದ ಲಿಂಗಮೊಳವಾಗಿರ್ದುಂ || 91 ||

ಪದಚ್ಛೇದಂ.

ಪುರುಷರೆ ಪುಲ್ಲಿಂಗಂ, ಸ್ತ್ರೀಯರೆ ತಾಂ ಸ್ತ್ರೀಲಿಂಗಂ, ಉಳಿದುವು ಎಲ್ಲಂ ನಪ್ಪು ಆಗಿ ಇರೆ, ಸಲ್ಗುಂ ಕನ್ನಡದೊಳ್; ಪರಿವರ್ತಿಸವು ಉಳಿದ ಲಿಂಗಂ, ಒಳವು ಆಗಿ ಇರ್ದುಂ.

ಅನ್ವಯಂ.

ಉಳಿದ ಲಿಂಗಂ ಒಳವಾಗಿ ಇರ್ದುಂ, ಪರಿವರ್ತಿಸವು. ಉಳಿದದು ಯಥಾನ್ವಯಂ.

1) 4 Times: ⏑⏑⏑|⏑—⏑|—⏑⏑|⏑—⏑|⏑—⏑|⏑—⏑|—⏑—||

### ಟೀಕು.

ಪುರುಷರೆ=ಪುರುಷರಂ ಪೇಳ್ವ ಶಬ್ದಂಗಳೆ; ಪುಲ್ಲಿಂಗಂ=ಪುಲ್ಲಿಂಗವೆನಿಪುವು; ಸ್ತ್ರೀಯರೆ=ಸ್ತ್ರೀಯರಂ ಪೇಳ್ವ ಶಬ್ದಂಗಳೆ; ತಾಂ=ತಾಂ; ಸ್ತ್ರೀಲಿಂಗಂ=ಸ್ತ್ರೀಲಿಂಗವೆನಿಪುವು; ಉೞಿದುವು=ಪುರುಷರಂ ಸ್ತ್ರೀಯರಂ ಪೇಳದೆ ಉಳಿದ ಶಬ್ದಂಗಳ್; ಎಲ್ಲಂ=ಎಲ್ಲವು; ನಪ್ಪಾಗಿರೆ=ನಪುಂಸಕಲಿಂಗವಾಗಿರೆ; ಸಲ್ಗುಂ=ಸಲ್ಲುವವು; ಕನ್ನಡದೊಳ್=ಕರ್ಣಾಟಕ ಶಬ್ದದಲ್ಲಿ; ಉಳಿದ ಲಿಂಗಂ=ಮಿಕ್ಕ ಲಿಂಗಂಗಳ್; ಒಳವಾಗಿರ್ದುಂ=ಉಂಟಾಗಿರ್ದುಂ; ಪರಿವರ್ತಿಸವು=ಪ್ರವರ್ತಿಸವು.

### ವೃತ್ತಿ.

ಪುರುಷರಂ ಪೇೞ್ವ ಶಬ್ದಂಗಳ್ಪುಲ್ಲಿಂಗಂಗಳ್; ಸ್ತ್ರೀಯರಂ ಪೇೞ್ವ ಶಬ್ದಂಗಳ್ ಸ್ತ್ರೀಲಿಂಗಂಗಳ್; ಉೞಿದುವೆಲ್ಲಂ ನಪುಂಸಕಲಿಂಗಂಗಳ್.

### ಪ್ರಯೋಗಂ.

ಪುಲ್ಲಿಂಗಕ್ಕೆ—ಶಿವ, ಶಂಕರ, ರಾಮ, ಅರಸ ಇವು ಮೊದಲಾದುವು.

ಸ್ತ್ರೀಲಿಂಗಕ್ಕೆ—ಗೌರಿ, ಪಾರ್ವತಿ, ಲಕ್ಷ್ಮಿ, ಸರಸ್ವತಿ, ಶಚಿ, ರೋಹಿಣಿ, ಕಾಮಿನಿ, ಭಾಮಿನಿ, ರಮಣಿ ಇವು ಮೊದಲಾದುವು.

ನಪುಂಸಕಲಿಂಗಕ್ಕೆ—ಮರ, ಗಿಡ, ಬಳ್ಳಿ, ಪುಲ್, ಪೊದಱ್, ಪುಲಿ, ಕರಡಿ, ಗಟ್ಟ, ಬೆಟ್ಟ, ಜೆಡೆ, ಕೊಡೆ, ಕನ್ನಡಿ, ಕಳಸ.—ತಿರ್ಯಗ್ಜೀವಂಗಳಪ್ಪ ಚೇತನಾಚೇತನವಸ್ತುಗಳೆಲ್ಲಂ ನಪುಂಸಕಮೆ.

ಇಂತು ಲಿಂಗತ್ರಯಂ ಕನ್ನಡದೊಳ್ ಪ್ರಸಿದ್ಧಂ, ಮಿಕ್ಕ ಲಿಂಗಂಗಳೆಲ್ಲ ಕ್ವಚಿತ್ಪ್ರಯೋಗಂಗಳೆ.

### ಸೂತ್ರಂ.

ಜನ and ಮಹಾಜನ are Neuters; ದುರ್ಜನ, ಸಜ್ಜನ (cf. S. 155) and ಸುಜನ Masculines.

ಜನಶಬ್ದಮದು ನಪುಂಸಕ
ಮೆನಿಕುಂ ದುಸ್ಸತ್ಸುಕಾರಮವು ಪೆಱಗಿರೆ ನೆ |
ಟ್ಟನೆ ಪುಲ್ಲಿಂಗಂ ಮತ್ತಾ
ಜನಂ ಮಹಾಚ್ಛಬ್ದಮಿರೆ ನಪುಂಸಕಮಕ್ಕುಂ || 92 ||

### ಪದಚ್ಛೇದಂ.

ಜನಶಬ್ದಂ ಅದು ನಪುಂಸಕಂ ಎನಿಕುಂ; ದುಸ್ಸತ್ಸುಕಾರಂ ಅವು ಪೆಱಗೆ ಇರೆ, ನೆಟ್ಟನೆ ಪುಲ್ಲಿಂಗಂ; ಮತ್ತೆ ಆ ಜನಂ, ಮಹಚ್ಛಬ್ದಂ ಇರೆ, ನಪುಂಸಕಂ ಅಕ್ಕುಂ.

### ಯಥಾನ್ವಯಂ.

### ಟೀಕು.

ಜನಶಬ್ದಂ=ಜನವೆಂಬ ಶಬ್ದಂ; ಅದು=ಅದು; ನಪುಂಸಕಂ=ನಪುಂಸಕಲಿಂಗಂ; ಎನಿಕುಂ=ಎನಿ

ಸುವದು; ದುಸ್ ಸತ್ ಸುಕಾರಂ=ದುಃ ಎಂಬುದುಂ, ಸತ್ ಎಂಬುದುಂ, ಸು ಎಂಬುದುಂ; ಅವು=ಅವು; ಪೆಱಗೆ=ಪಿಂದೆ; ಇರೆ=ಇರೆ; ನೆಟ್ಟನೆ=ವ್ಯಕ್ತವಾಗಿ; ಪುಲ್ಲಿಂಗಂ=ಪುಲ್ಲಿಂಗಂ ಎನಿಸುವದು; ಮತ್ತೆ=ಅದಲ್ಲದೆ; ಆ ಜನಂ=ಆ ಜನಶಬ್ದಂ; ಮಹಚ್ಛಬ್ದಂ=ಮಹತ್ ಎಂಬ ಶಬ್ದಂ; ಇರೆ=ಪಿಂದಿರೆ; ನಪುಂಸಕಂ=ನಪುಂಸಕಲಿಂಗಂ; ಅಕ್ಕುಂ=ಅಪ್ಪುದು.

### ವೃತ್ತಿ.

ಜನಶಬ್ದಂ ನಿಜದಿಂ ನಪುಂಸಕಂ; ದುಸ್ ಎಂಬುದುಂ ಸತ್ ಎಂಬುದುಂ ಸು ಎಂಬುದುಂ ಪೆಱಗಿರೆ, ಪುಲ್ಲಿಂಗಮಕ್ಕುಂ; ಮಹಚ್ಛಬ್ದಂ ಪೆಱಗಿರ್ದೊಡಂ, ಮಹಾಜನಮೆಂದು, ನಪುಂಸಕಮಕ್ಕುಂ.

### ಪ್ರಯೋಗಂ.

ಪುಲ್ಲಿಂಗಕ್ಕೆ—ದುರ್ಜನಂ, ಸಜ್ಜನಂ, ಸುಜನಂ.
ನಪುಂಸಕಕ್ಕೆ—ಜನಂ, ಮಹಾಜನಂ.

### ಸೂತ್ರಂ.

The 7 Cases (cf. Ss. 72; 81). Declension of the Singular of a Neuter ending in ಅ.

ಸಂದಿಸಿ ಮಮಿಂಕೆಯದದೊಳೆ
ಯೆಂದಿರ್ಪುವು ಸಪ್ತವಿಧವಿಭಕ್ತಿಗಳವು ಮಾ |
ರ್ಗಂದಪ್ಪದರ್ಥವಶದಿಂ
ಪಿಂದೆಣಿಸಿದ ವಿವಿಧವಿಧದ ಲಿಂಗಕ್ಕೆಲ್ಲಂ || 93 ||

### ಪದಚ್ಛೇದಂ.

ಸಂದಿಸಿ || ಮ್ || ಅಂ || ಇಂ || ಕೆ || ಅದ್ || ಅದ್ || ಒಳೆ || ಎಂದು, ಇರ್ಪುವು ಸಪ್ತವಿಧವಿಭಕ್ತಿಗಳ್; ಅವು, ಮಾರ್ಗಂದಪ್ಪದೆ, ಅರ್ಥವಶದಿಂ ಪಿಂದೆ ಎಣಿಸಿದ ವಿವಿಧವಿಧದ ಲಿಂಗಕ್ಕೆ ಎಲ್ಲಂ.

### ಅನ್ವಯಂ.

ಪಿಂದೆ ಎಣಿಸಿದ ವಿವಿಧವಿಧದ ಲಿಂಗಕ್ಕೆ ಸಪ್ತವಿಧವಿಭಕ್ತಿಗಳ್; ಅವು ಎಲ್ಲಂ, ಮಾರ್ಗಂದಪ್ಪದೆ, ಅರ್ಥವಶದಿಂ ಸಂದಿಸಿ, ಮಮಿಂ ಕೆ ಅದದೊಳೆ ಎಂದು, ಇರ್ಪುವು.

### ಟೀಕು.

ಪಿಂದೆ=ಹಿಂದೆ; ಎಣಿಸಿದ ವಿವಿಧವಿಧದ=ಹೇಳಿದ ನಾನಾ ಪ್ರಕಾರದ; ಲಿಂಗಕ್ಕೆ=ಲಿಂಗಂಗಳ್ಗೆ; ಸಪ್ತವಿಧ=ಏಳು ತೆಱನಾದ; ವಿಭಕ್ತಿಗಳ್=ಪ್ರತ್ಯಯಂಗಳ್; ಅವು=ಅವು; ಎಲ್ಲಂ=ಎಲ್ಲವು; ಮಾರ್ಗಂದಪ್ಪದೆ=ಕವಿಮಾರ್ಗಂ ತಪ್ಪದೆ; ಅರ್ಥವಶದಿಂ=ಅರ್ಥವಶದಿಂದೆ; ಸಂದಿಸಿ=ಪೊರ್ದುಗೆಯಾಗಿ; ಮಮಿಂಕೆಯದದೊಳೆ=ಮ್, ಅಮ್, ಇಮ್, ಕೆ, ಅತ್, ಅತ್, ಒಳ್ ಎಂಬಿವೆ; ಎಂದು=ಹೀಗೆಂದು; ಇರ್ಪುವು=ಇರ್ಪುವು.

### ವೃತ್ತಿ.

ಪಿಂತೆ ಪೇಳ್ದ ನಾನಾ ತೆಱದ ಲಿಂಗಂಗಳ್ಗೆ ಪರಮಾಗಿ ನಾಮವಿಭಕ್ತಿಗಳ್, ಮ್ (S. 105), ಅಮ್ (Ss. 104; 106), ಇಮ್ (S. 107), ಕೆ (Ss. 113; 114), ಅತ್ (Ss. 106; 116), ಅತ್ (Ss. 106; 117), ಒಳ್ (S. 119) ಎಂದು[1], ಪ್ರಥಮೆಗಂ ದ್ವಿತೀಯೆಗಂ ತೃತೀಯೆಗಂ ಚತುರ್ಥಿಗಂ ಪಂಚಮಿಗಂ ಷಷ್ಠಿಗಂ ಸಪ್ತಮಿಗಂ ಏೞಾಗಿ, ಕಾರಕವಶದಿಂ ಪತ್ತುಗುಂ. ಆ ಕಾರಕಮೆಂಬುದು (i. e. the relation which, in a sentence, a noun bears to the verb, Ss. 137 seq.) ಕ್ರಿಯಾನಿಮಿತ್ತಂ; ಅದು ಕರ್ತೃವೆಂದುಂ (agent), ಕರ್ಮಮೆಂದುಂ (object), ಕರಣಮೆಂದುಂ (instrument), ಸಂಪ್ರದಾನಮೆಂದುಂ (bestowing), ಅಪಾದಾನಮೆಂದುಂ (taking away), ಅಧಿಕರಣಮೆಂದುಂ (relation to site), ಷಡ್ವಿಧಮಾಗಿರ್ಪುದು; ಷಷ್ಠಿಯೆಂದು, ಸಂಬಂಧಾರ್ಥಂ (connexion). (cf. Ss. 126—133).

### ಪ್ರಯೋಗಂ.

ಮರಂ, ಮರನಂ (or ಮರಮಂ), ಮರದಿಂ, ಮರಕ್ಕೆ, ಮರದತ್ತಣಿಂ, ಮರದ, ಮರದೊಳ್, (ಮರನೆ, voc.) ಇಂತರ್ಥವಶದಿಂ ವಿಭಕ್ತಿ ಪರಿಣಾಮಿಪ್ಪುವು. ವಿಭಕ್ತಿ ಕಾರಕಮನೆಯ್ದುವುದಱಿಂ ಪದಂ ನಾನಾರೂಪಮಪ್ಪುದು.

ಮರನಿರ್ದುದು. ಮರನಂ ಕಡಿ!
ಮರದಿಂ ಮಾಡಾನೆಯುಂ! ಮರಕ್ಕೆಱೆ ನೀರಂ! |
ಮರದತ್ತಣಿನೆಲೆಯುದಿರ್ದುದು.
ಮರದದು ಪಣ್. ಮರದೊಳ್ ಸಲೆ ತಳಿರ್! ತಿರ್ಮರನೇ![2] || ಕಂದಂ ||

### ಸೂತ್ರಂ.

There are 2 Numbers in Canarese: Singular and Plural. The thought of a Dual is allowed.

ಏಕದ್ವಿತ್ವಬಹುತ್ವಮ
ನೇಕದ್ವಿಬಹುತ್ವವಸ್ತುಗಳೊಳಾಚರಿಪರ್ |
ಸ್ವೀಕಾರಂ ಕನ್ನಡದೊಳ
ಗೇಕಬಹುತ್ವಂ ದ್ವಿವಚನಮುಚಿತದೆ ಬರ್ಕುಂ || 94 ||

### ಪದಚ್ಛೇದಂ.

ಏಕದ್ವಿತ್ವಬಹುತ್ವಮಂ ಏಕದ್ವಿಬಹುತ್ವವಸ್ತುಗಳೊಳ್ ಆಚರಿಪರ್; ಸ್ವೀಕಾರಂ ಕನ್ನಡದೊಳಗೆ ಏಕಬಹುತ್ವಂ, ದ್ವಿವಚನಂ ಉಚಿತದೆ ಬರ್ಕುಂ.

1) For these augments and terminations the Sûtras marked in the brackets must be read.
2) ಶಿಥಿಲತ್ವಂ regarding ಉದಿರ್ದುದು and the end of ತಳಿರ್.

### ಅನ್ವಯಂ.

ಏಕದ್ವಿಬಹುತ್ವವಸ್ತುಗಳೊಳ್ ಏಕದ್ವಿತ್ವಬಹುತ್ವಮಂ ಆಚರಿಪರ್; ಕನ್ನಡದೊಳಗೆ ಏಕಬಹುತ್ವಂ ಸ್ವೀಕಾರಂ, ದ್ವಿವಚನಂ ಉಚಿತದೆ ಬರ್ಕುಂ.

### ಟೀಕು.

ಏಕದ್ವಿಬಹುತ್ವವಸ್ತುಗಳೊಳ್=ಏಕವಸ್ತು ದ್ವಿವಸ್ತು ಬಹುವಸ್ತುಗಳಲ್ಲಿ; ಏಕದ್ವಿತ್ವಬಹುತ್ವಮಂ=ಏಕವಚನ ದ್ವಿವಚನ ಬಹುವಚನಮಂ; ಆಚರಿಪರ್=ಪೇಳ್ವರ್; ಕನ್ನಡದಲ್ಲಿ=ಕರ್ಣಾಟಭಾಷೆಯಲ್ಲಿ; ಏಕಬಹುತ್ವಂ=ಏಕವಚನ ಬಹುವಚನಂಗಳ್; ಸ್ವೀಕಾರಂ=ಅಂಗೀಕಾರಂ; ದ್ವಿವಚನಂ=ದ್ವಿವಚನಂ; ಉಚಿತದೆ=ಉಚಿತದಿಂದೆ; ಬರ್ಕುಂ=ಬರ್ಪುದು.

### ವೃತ್ತಿ.

ಒಂದೆರಡು ಮೂಱಿಂದು, ಪದಾರ್ಥಮನ್ನೆಣಿಸುವೆಡೆಯೊಳ್ ಏಕವಚನ ದ್ವಿವಚನ ಬಹುವಚನಂಗಳಂ ಸ್ವೀಕರಿಸುವರ್; ಏಕವಚನ ಬಹುವಚನಂಗಳ್ಕನ್ನಡದೊಳತಿವ್ಯಕ್ತಂಗಳ್; ದ್ವಿವಚನಮನೌಚಿತ್ಯದಿನಱಿವುದು.

### ಪ್ರಯೋಗಂ.

ಏಕದ್ವಿಬಹುತ್ವಂಗಳ್ಗೆ—ಮೇರುವಿದು; ಕಣ್ಗಳಿವು; ಕುರುಳ್ಗಳಿವು; ಕವಿಯಿವಂ; ಕವಿಗಳಿವರ್.

ಔಚಿತ್ಯದ ದ್ವಿವಚನಕ್ಕೆ—ಭೀಮಾರ್ಜುನರ್, ರಾಮಲಕ್ಷ್ಮಣರ್, ನಕುಲಸಹದೇವರ್ ಎಂಬಂತಱಿವುದು.

### ಸೂತ್ರಂ.

Formation of the Nominative Dual and Plural with ಗಳ್ (cf. S. 42) in (here Neuter) themes, excepting (Neuter) Pronouns and Adjectives in which ಅವು is substituted for ಗಳ್. (For Masculines and Feminines with ಗಳ್ see, for instance, Ss. 101; 103; 122[a]).

ಸಮನಿಸುಗುಮಾ ವಿಭಕ್ತಿಗ
ಳ ಮೊದಲೊಳಾದಂ ಗಳಾಗಮಂ ದ್ವಿತ್ವಬಹು |
ತ್ವಮದಾಗೆ ಗಳಾಗಮಕವು
ಸಮನಿಸುಗುಂ ಸರ್ವನಾಮಗುಣವಚನದೊಳಂ || 95 ||

### ಪದಚ್ಛೇದಂ.

ಸಮನಿಸುಗುಂ ಆ ವಿಭಕ್ತಿಗಳ ಮೊದಲೊಳ್ ಆದಂ ಗಳಾಗಮಂ, ದ್ವಿತ್ವಬಹುತ್ವಂ ಅದು ಆಗೆ; ಗಳಾಗಮಕೆ ಅವು ಸಮನಿಸುಗುಂ ಸರ್ವನಾಮಗುಣವಚನದೊಳಂ.

### ಅನ್ವಯಂ.

ದ್ವಿತ್ವಬಹುತ್ವಂ ಅದು ಆಗೆ, ಆ ವಿಭಕ್ತಿಗಳ ಮೊದಲೊಳ್ ಆದಂ ಗಳಾಗಮಂ ಸಮನಿಸುಗುಂ; ಸರ್ವನಾಮಗುಣವಚನದೊಳಂ ಗಳಾಗಮಕೆ ಅವು ಸಮನಿಸುಗುಂ.

### ಟೀಕು.

ದ್ವಿತ್ವಬಹುತ್ವಂ=ದ್ವಿವಚನ ಬಹುವಚನಂ; ಅದು=ಅದು; ಆಗೆ=ಆಗೆ; ಆ ವಿಭಕ್ತಿಗಳ=ಆ ಸಪ್ತ ವಿಭಕ್ತಿಗಳ; ಮೊದಲೊಳ್=ಆದಿಯಲ್ಲಿ; ಆದಂ=ಆದಮೆಂಬ ವಿಶೇಷದಿಂದೆ; ಗಳಾಗಮಂ=ಗಳ್ ಎಂಬಾಗಮಂ; ಸಮನಿಸುಗುಂ=ಪ್ರಾಪ್ತಿಸುವದು; ಸರ್ವನಾಮಗುಣವಚನದೊಳಂ=ಸರ್ವನಾಮ ಗುಣವಚನಂಗಳಲ್ಲಿ; ಗಳಾಗಮಕೆ=ಗಳೆಂಬಾಗಮಕ್ಕೆ; ಅವು=ಅವು (ಉವು) ಎಂಬಾಗಮಂ; ಸಮನಿಸುಗುಂ=ಪ್ರಾಪ್ತಿಸುವದು.

### ವೃತ್ತಿ.

ದ್ವಿವಚನಬಹುವಚನವಿವಕ್ಷೆಯಾದೊಡೆ ವಿಭಕ್ತಿಗಳ ಮೊದಲೊಳ್ಗಳಾಗಮಮಕ್ಕುಂ; ಸರ್ವನಾಮ ಗುಣವಚನಂಗಳೊಳ್ಗಳಾಗಮಕ್ಕಾದೇಶಮಾಗವುಮಕ್ಕುಂ.

### ಪ್ರಯೋಗಂ.

ದ್ವಿವಚನಕ್ಕೆ—ತೊಡೆಗಳ್, ಕಣ್ಗಳ್, ತೋಳ್ಗಳ್.

ತೊಡೆಗಳ್ ರಂಭಾಸ್ತಂಭ<br>
ಕ್ಕೆಡೆಗಳ್ ಕಣ್ಗಳ್ ಮನೋಜವೀರನ ಗೆಣ್ಗಳ್ |<br>
ನಿಡಿದೋಳ್ಗಳ್ ದಿಕ್ಕರಿಕರ<br>
ದೊಡನಾಡಿಗ(ದ)ಳೆನಿಸಿ ಮೆಱೆವುದಾತನ ರೂಪಂ || ಕಂದಂ ||

ಬಹುವಚನಕ್ಕೆ—ಕೊಳಂಗಳ್, ಅಬ್ಜಂಗಳ್, ಮಧುಗಳ್.

ಸರ್ವನಾಮದ ಅವುವಿಂಗೆ—ಅವು, ಇವು, ಉವು.

ಅವು ಪಿರಿಯವು ಭಾವಿಪೊಡಿಂ<br>
ತಿವು ಕಿಱಿಯವೆನಿಪ್ಪುದಿದುವೆ ಭೇದಂ ನಿಮಗಾ |<br>
ವುವು ಮನಕೇಱುವುವಕ್ಕಱಿ<br>
ನವನಾಯ್ಕುಳಿಗೊಳ್ಳಿಮೆಂದು ನವರತ್ನಮುಮಂ || ಕಂದಂ ||

ಗುಣವಚನಂಗಳ್ಗೆ—ಇನಿಯವು, ಮೆಲ್ಲಿದುವು, ಬೆಟ್ಟಿದುವು (S. 97).

ಇನಿಯವು ವಿಷಯಸುಖಂ ಸಂಜೀವನಸವಿವೋಲ್ (ನಂಜಿನ ಸವಿವೋಲ್ ಎಂದು ಪಾಠಾಂತರಂ).

ಮೆಲ್ಲಿದುವಪ್ಪ ಕಾಲ ತಳಮುಂ ಕಡುವೆಟ್ಟಿದುವಪ್ಪ ಹಸ್ತಮುಂ.

### ಸೂತ್ರಂ.

In joining the ಅವು (S. 95) to the themes of the *Pronouns* mentioned in S. 78, the last syllable of them and the first of ಅವು suffer elision (ಲೋಪಂ). (The examples presuppose S. 110). The *Adjectives* with final ದು (S. 77) drop this syllable.

ಸಂಗಡಿಸಿ ಸರ್ವನಾಮದ
ಲಿಂಗಾಂತ್ಯಾಕ್ಷರಕಮವುವಿನಾದ್ಯಕ್ಷರಕಂ |
ಪಿಂಗದೆ ಲೋಪಂ ಗುಣವಚ
ನಂಗಳೊಳಂತ್ಯಂ ದುಕಾರಮಾದೊಡೆ ಲೋಪಂ || 96 ||

### ಪದಚ್ಛೇದಂ.

ಸಂಗಡಿಸಿ ಸರ್ವನಾಮದ ಲಿಂಗಾಂತ್ಯಾಕ್ಷರಕಂ ಅವುವಿನ ಆದ್ಯಕ್ಷರಕಂ ಪಿಂಗದೆ ಲೋಪಂ; ಗುಣವಚನಂಗಳೊಳ್ ಅಂತ್ಯಂ ದುಕಾರಂ ಆದೊಡೆ ಲೋಪಂ.

### ಅನ್ವಯಂ.

ಸರ್ವನಾಮದ ಲಿಂಗಾಂತ್ಯಾಕ್ಷರಕಂ ಅವುವಿನ ಆದ್ಯಕ್ಷರಕಂ ಸಂಗಡಿಸಿ ಪಿಂಗದೆ ಲೋಪಂ; ಗುಣವಚನಂಗಳೊಳ್ ಅಂತ್ಯಂ ದುಕಾರಂ ಆದೊಡೆ ಲೋಪಂ.

### ಟೀಕು.

ಸರ್ವನಾಮದ=ಸರ್ವನಾಮಶಬ್ದದ; ಲಿಂಗ=ಲಿಂಗದ; ಅಂತ್ಯ=ಕಡೆಯಣ; ಅಕ್ಷರಕಂ=ಅಕ್ಕರಕ್ಕೆಯುಂ; ಅವುವಿನ=ಅವು ಎಂಬಾಗಮದ; ಆದಿ=ಮೊದಲ; ಅಕ್ಷರಕಂ=ಅಕ್ಕರಕ್ಕೆಯುಂ; ಸಂಗಡಿಸಿ=ಒಂದಾಗಿ; ಪಿಂಗದೆ=ತೊಲಗದೆ; ಲೋಪಂ=ಅದರ್ಶನಮಪ್ಪುದು; ಗುಣವಚನಂಗಳೊಳ್=ಗುಣವಚನಂಗಳಲ್ಲಿ; ಅಂತ್ಯಂ=ಕಡೆಯಕ್ಕರಂ; ದುಕಾರಂ=ದುತ್ವಂ; ಆದೊಡೆ=ಆದೊಡೆ; ಲೋಪಂ=ಅದರ್ಶನಮಪ್ಪುದು.

### ವೃತ್ತಿ.

ಸರ್ವನಾಮಶಬ್ದದ ಲಿಂಗದ ಕಡೆಯಕ್ಕರಕ್ಕಂ ಪರದ ಅವುವಿನ ಮೊದಲಕ್ಕರಕ್ಕಂ ಸಂಗಡದಿಂ ಲೋಪಮಕ್ಕುಂ; ದುಕಾರಾಂತಮಾದ ಗುಣವಚನದ ಕಡೆಗೆ ಲೋಪಂ.

### ಪ್ರಯೋಗಂ.

ಸರ್ವನಾಮಕ್ಕೆ—ಪೆಱವಱ, ಪೆಱವಱೊಳ್, ಎಲ್ಲವಱ (S. 110).

ಪೆಱವಱ ಧರ್ಮಂಗಳನೇ
ತೆಱದಿಂದಂ ತಂದು ಪೆಱವಱೊಳ್ ಪತ್ತಿಸಿ ಕ |
ಣ್ದೆಱೆದು ಚತುರೋಕ್ತಿಕೃತಿಯೊಳ್
ನೆಱೆದಿರೆ ಪೇೞ್ವುದು ಸಮಾಧಿಯೆನೆ ಪೆಸರ್ವಡೆಗುಂ || ಕಂದಂ ||

ಗುಣವಚನಕ್ಕೆ—ಕರಿಯವು, ಪಿರಿಯವು, ಅಸಿಯವು.

ಬಿರಯಿಗಳ ಸುಯ್ಗಳೊಡನೆಯೆ
ಪಿರಿಯವು ದಿವಸಂಗಳಾದುವವರವರೆಲೆ ವಿ |
ಸ್ಫುರಿತಂಗಳೊಡನೆ ಕುಂದಿದು
ವಿರುಳ್ಗಳುಮಂ ಮುಂಚಿ ಬಂದ ಜಲದಾಗಮದೊಳ್ ||ಕಂದಂ||

ಸೂತ್ರಂ.

ಅಕ್ಕುಂ ಕೂಡೆ ತುಕಾರಾಂ
ತಕ್ಕೆ ತೃತೀಯತ್ವಮವುವಿನಾದಿಗೆ ಲೋಪಂ |
ಮಿಕ್ಕಾ ಸ್ತ್ರೀಪುಲ್ಲಿಂಗದೊ
ಳಕ್ಕುಮಿರರ್ದಿರ್ವಿರೆಂದು ಲೋಕೋಕ್ತಿಗಳೊಳ್ || 97 ||

Further in joining the ಅವು to Adjectives ending in ತು (S. 77), this ತು becomes ದು, and partial elision (S. 96) takes place. Formation of the Nominative Plural of Feminines and Masculines with ಇರ್, ಅರ್, ದಿರ್, ವಿರ್, these being substitutes of ಗಳ್ (S. 95).

ಪದಚ್ಛೇದಂ.

ಅಕ್ಕುಂ ಕೂಡೆ ತುಕಾರಾಂತಕ್ಕೆ ತೃತೀಯತ್ವಂ, ಅವುವಿನ ಆದಿಗೆ ಲೋಪಂ; ಮಿಕ್ಕ ಆ ಸ್ತ್ರೀ ಪುಲ್ಲಿಂಗದೊಳ್ ಅಕ್ಕುಂ, ಇರ್, ಅರ್, ದಿರ್, ವಿರ್ ಎಂದು, ಲೋಕೋಕ್ತಿಗಳೊಳ್.

ಅನ್ವಯಂ.

ತುಕಾರಾಂತಕ್ಕೆ ತೃತೀಯತ್ವಂ, ಅವುವಿನ ಆದಿಗೆ ಲೋಪಂ ಕೂಡೆ; ಮಿಕ್ಕಾ ಸ್ತ್ರೀಪುಲ್ಲಿಂಗ ದೊಳ್ ಲೋಕೋಕ್ತಿಗಳೊಳ್, ಇರರ್ದಿರ್ವಿರ್ ಎಂದು, ಅಕ್ಕುಂ.

ಟೀಕು.

ತುಕಾರಾಂತಕ್ಕೆ=ಗುಣವಚನಂಗಳಲ್ಲಿ ತುಕಾರಾಂತಕ್ಕೆ; ತೃತೀಯತ್ವಂ=ಮೂರನೆಯಕ್ಷರದ ಭಾವಂ; ಅವುವಿನ=ಅವಾಗಮದ; ಆದಿಗೆ=ಮೊದಲಕ್ಷರಕ್ಕೆ; ಲೋಪಂ=ಅದರ್ಶನಂ; ಕೂಡೆ=ಒಡನೆ ಆಗುವದು; ಮಿಕ್ಕಾ=(ನಪುಂಸಕಲಿಂಗದ) ಸರ್ವನಾಮಗುಣವಚನಂಗಳಲ್ಲದುಳಿದ ಆ; ಸ್ತ್ರೀಪುಲ್ಲಿಂಗದೊಳ್=ಸ್ತ್ರೀಪುಲ್ಲಿಂಗಂಗಳಲ್ಲಿ; ಇರರ್ದಿರ್ವಿರೆಂದು=ಇರ್, ಅರ್, ದಿರ್, ವಿರ್ ಎಂದು; ಲೋಕೋಕ್ತಿಗಳೊಳ್=ಜನವಾಕ್ಯಂಗಳಲ್ಲಿ; ಅಕ್ಕುಂ=ಅಪ್ಪುದು.

ವೃತ್ತಿ.

ಗುಣವಚನದ ತುಕಾರಾಂತಕ್ಕೆ (ವರ್ಗದ) ತೃತೀಯತ್ವಮುಮವುವಿನಾದಿಗೆ ಲೋಪಮುಮಕ್ಕುಂ; (ಪಿಂತೆ ಸೂಚಿಸಿರ್ದ ನಪುಂಸಕಲಿಂಗದ) ಸರ್ವನಾಮ ಗುಣವಚನಂಗಳಲ್ಲದ ಸ್ತ್ರೀಲಿಂಗಪುಲ್ಲಿಂಗದೊಳ್ ಗಳ್ ಎಂಬುದಕಾದೇಶಮಾಗಿ ಇರ್ ಅರ್ ದಿರ್ ವಿರ್ ಎಂದಕ್ಕುಂ.

## ಪ್ರಯೋಗಂ.

ತೃತೀಯತ್ತಕ್ಕಂ ಅವುವಿನ ಲೋಪಕ್ಕಂ—ಒಳ್ಳಿದುವು, ತೆಳ್ಳಿದುವು, ದಟ್ಟಿದುವು, ಬೆಟ್ಟಿದುವು.

ಇರ್ಗೆ—ಪೆಂಡಿರ್, ತೊೞ್ತಿರ್.

ಅರ್ಗೆ—ದೇವರ್, ನಂಟರ್, ನಲ್ಲರ್.

ದಿರ್ಗೆ—ಇವಳ್ದಿರ್, ಇವಂದಿರ್, ಅವಂದಿರ್.

ವಿರ್ಗೆ—ತಂದೆವಿರ್, ತಾಯ್ವಿರ್, ಸೊಸೆವಿರ್.

## ಸೂತ್ರಂ.

The ಅರ್ (S. 97; cf. S. 220) is affixed to all themes of Feminines and Masculines in the Plural, with the necessary elision, (after which the affixes for the other cases are joined).

ಬರೆ ಪುಂಸ್ತ್ರೀಲಿಂಗಮುಮಮ
ರ್ದಿರೆ ಸಂಖ್ಯಾಸರ್ವನಾಮಕೃದ್ಗುಣವಚನ |
ಸ್ಫುರದುರುತದ್ಧಿತಮುಂ ಮುಂ
ದರುವಕ್ಕುಮದಂತಲಿಂಗದೊಳ್ವಿಧಿಲೋಪಂ || 98 ||

## ಪದಚ್ಛೇದಂ.

ಬರೆ ಪುಂಸ್ತ್ರೀಲಿಂಗಮುಂ, ಅಮರ್ದು ಇರೆ ಸಂಖ್ಯಾಸರ್ವನಾಮಕೃದ್ಗುಣವಚನಸ್ಫುರದುರು ತದ್ಧಿತಮುಂ, ಮುಂದೆ ಅರು ಅಕ್ಕುಂ; ಅದಂತಲಿಂಗದೊಳ್ ವಿಧಿಲೋಪಂ.

## ಅನ್ವಯಂ.

ಪುಂಸ್ತ್ರೀಲಿಂಗಮುಂ ಬರೆ, ಸಂಖ್ಯಾಸರ್ವನಾಮಕೃದ್ಗುಣವಚನಸ್ಫುರದುರುತದ್ಧಿತಮುಂ ಅಮರ್ದು ಇರೆ, ಮುಂದೆ ಅರು ಅಕ್ಕುಂ; ಅದಂತಲಿಂಗದೊಳ್ ವಿಧಿಲೋಪಂ.

## ಟೀಕು.

ಪುಂಸ್ತ್ರೀಲಿಂಗಮುಂ=ಪುಲ್ಲಿಂಗ ಸ್ತ್ರೀಲಿಂಗಂಗಳುಂ; ಬರೆ=ಬರೆ; ಸಂಖ್ಯಾ=ಸಂಖ್ಯಾವಾಚಿಗಳುಂ; ಸರ್ವನಾಮ=ಸರ್ವನಾಮಂಗಳುಂ; ಕೃತ್=ಕೃತ್ತುಗಳುಂ; ಗುಣವಚನ=ಗುಣವಚನಂಗಳುಂ; ಸ್ಫುರತ್=ಪ್ರಕಾಶಿಸಲ್ಪಟ್ಟ; ಉರು=ಉನ್ನತವಾದ; ತದ್ಧಿತಮುಂ=ತದ್ಧಿತಂಗಳುಂ; ಅಮರ್ದಿರೆ=ಆ ಪುಂಸ್ತ್ರೀಲಿಂಗಂಗಳಲ್ಲಿ ಪೊರ್ದುಗೆಯಾಗಿರೆ; ಮುಂದೆ=ಅಗ್ರದಲ್ಲಿ; ಅರು=ಗಳಾಗಮಕ್ಕಾದೇಶವಾಗಿ ಅರ್ ಎಂಬಾಗಮಂ; ಅಕ್ಕುಂ=ಆಗುವದು; ಅದಂತಲಿಂಗದೊಳ್=ಅಕಾರಾಂತಲಿಂಗಂಗಳಲ್ಲಿ; ವಿಧಿಲೋಪಂ=ಹಿಂದೆ ಪೇಳ್ದ ವಿಧಿಗೆ ಲೋಪಂ ಅಕ್ಕುಂ.—ಮುಂದರಕ್ಕುಮತ್ವಾಂತಲಿಂಗದೊಳ್ವಿಧಿಲೋಪಂ ಎಂದು, ಪಾಠಾಂತರಂ. ಅರ್=ಅರಾಗಮಂ; ಅಕ್ಕುಂ=ಆಗುವದು; ಅತ್ವಾಂತಲಿಂಗದೊಳ್=ಅಕಾರಾಂತಲಿಂಗದಲ್ಲಿ; ವಿಧಿಲೋಪಂ=ಪಿಂದೆ ಪೇಳ್ದ ವಿಧಿಗೆ ಲೋಪಂ ಅಕ್ಕುಂ.

ವೃತ್ತಿ.

ಪುಲ್ಲಿಂಗಮುಂ ಸ್ತ್ರೀಲಿಂಗಮುಂ ಪೆಱಗೆವರೆ, ಅರುವಕ್ಕುಂ; ಆ ಪುಂಸ್ತ್ರೀಲಿಂಗದೊಳಮರ್ದ ಸಂಖ್ಯೆಯುಂ ಸರ್ವನಾಮಮುಂ ಕೃತ್ತುಂ ಗುಣವಚನಮುಂ ತದ್ಧಿತಮಿದೆರ್ೊಡಂ ಪರದೊಳರುವಕ್ಕುಂ.

ಪ್ರಯೋಗಂ.

ಪುಲ್ಲಿಂಗಕ್ಕೆ—ಅರಸರ್, ಸಾಮಂತರ್, ಕೋವಿದರ್, ನಂದನರ್.

ಸ್ತ್ರೀಲಿಂಗಕ್ಕೆ—ದೇವಿಯರ್, ಕಾಂತೆಯರ್.

ಸಂಖ್ಯೆಗೆ—ಈರ್ವರ್, ಪಯಿಂಛಾಸಿರ್ವರ್ (see s. S. 99).

ಸರ್ವನಾಮಕ್ಕೆ—ಪೆಱರ್ (S. 152), ಅವರ್, ಇವರ್, ಉವರ್ (S. 150).

ಕೃತ್ತಿಂಗೆ—ಮಾಡಿದರ್, ಬೇಡಿದರ್, ಕೊಂದರ್, ನುಡಿವರ್.

ನುಡಿಗೆಲ್ಲಂ ಸಲ್ಲದ ಕಂ
ನಡದೊಳ್ ಜತ್ತ್ರಾಣಮುಂ ಬೆದಂಡೆಯುಮೆಂದೀ |
ಗಡಿನ ನೆಗಱ್ತೆಯ ಕಬ್ಬದೊ
ಳೊಡಂಬಡಂ ಮಾಡಿದರ್ ಪುರಾತನಕವಿಗಳ್ || ಕಂದಂ ||

ಗುಣವಚನಕ್ಕೆ—ಒಳ್ಳಿದರ್, ಬಲ್ಲಿದರ್.

ತದ್ಧಿತಕ್ಕೆ—ಮಣಿಗಾಱರ್, ಕಂಚುಗಾಱರ್, ಒಱೆಗಾಱರ್.

ಪುಲ್ಲಿಂಗಮಪ್ಪದಂತಕ್ಕೆಲ್ಲಿಯುಂ ವಿಧಿಲೋಪಂ—ಸುರರ್, ನರರ್, ಚದುರರ್, ಪಾರ್ವರ್ ಎಂಬಂತೆ (cf. S. 52).

ಸೂತ್ರಂ.

ಪವಣೊಳಮಾ ಸಂಖ್ಯೆಯೊಳಂ
ವ್ಯವಹರಿಕುಂ ವತ್ತಮಲ್ಲಿ ಬಶ್ರುತಿಯುಂ ಸಂ |
ಭವಿಕುಮದಂತಂ ನಿಲೆ ಬಿಂ
ದುವಿಕಲ್ಪಂ ಬತ್ತಮೊರ್ಮೆ ಲೋಪಮನಾಳ್ಗುಂ || 99 ||

In masculine and feminine themes of Pronouns denoting quantity (ಪವಣ್) and of Numbers ವರ್, ಬರ್, ಂಬರ್, or, with elision of ಬ್, ಅರ್ occur (instead of the simple ಅರ್) in the Nominative Plural.

ಪದಚ್ಛೇದಂ.

ಪವಣೊಳಂ ಆ ಸಂಖ್ಯೆಯೊಳಂ ವ್ಯವಹರಿಕುಂ ವತ್ವಂ; ಅಲ್ಲಿ ಬಶ್ರುತಿಯುಂ ಸಂಭವಿಕುಂ; ಅದಂತಂ ನಿಲೆ, ಬಿಂದುವಿಕಲ್ಪಂ; ಬತ್ವಂ ಒರ್ಮೆ ಲೋಪಮಂ ಆಳ್ಗುಂ.

ಅನ್ವಯಂ.

ಪವಣೊಳಂ ಆ ಸಂಖ್ಯೆಯೊಳಂ ವತ್ವಂ ವ್ಯವಹರಿಕುಂ. ಉಳಿದದು ಯಥಾನ್ವಯಂ.

ಟೀಕು.

ಪವರ್ಣದೊಳಂ=ಆ ಪುಂಸ್ತ್ರೀಲಿಂಗದೊಳಮರ್ದ ಪ್ರಮಾಣವಾಚಿಗಳಲ್ಲಿಯುಂ; ಆ ಸಂಖ್ಯೆಯೊಳಂ=ಆ ಸಂಖ್ಯಾವಾಚಿಗಳಲ್ಲಿಯುಂ; ವತ್ವಂ=ವಕಾರಂ; ವ್ಯವಹರಿಕುಂ=ವ್ಯವಹರಿಪುದು, ಬರ್ಪುದೆಂಬರ್ಥಂ; ಅಲ್ಲಿ=ಆ ಪುಂಸ್ತ್ರೀಲಿಂಗವಿಷಯವಾಗಿ ಬಂದ ವಕಾರದಲ್ಲಿ; ಬಶ್ರುತಿಯುಂ=ಬಕಾರದ ಶ್ರವಣಮುಂ; ಸಂಭವಿಕುಂ=ಹುಟ್ಟುವದು; ಅದಂತಂ=ಅಕಾರಾಂತಂ; ನಿಲೆ=ನೆಲಸೆ; ಬಿಂದು=ಸೊಂನೆ; ವಿಕಲ್ಪಂ=ವಿಕಲ್ಪವಾಗಿ ಬರ್ಪುದು; ಬತ್ವಂ=ಬಕಾರಂ; ಒರ್ಮೆ=ಒಂದು ಬಾರಿ; ಲೋಪಮುಂ=ಅದರ್ಶನಮಂ; ಆಳ್ಗುಂ=ತಾಳ್ವುದು.

ವೃತ್ತಿ.

ಆ ಪುಂಸ್ತ್ರೀಲಿಂಗವಿಷಯವಪ್ಪ ಪವರ್ಣದೊಳಂ ಸಂಖ್ಯೆಯೊಳಂ ವತ್ತ್ವಮಕ್ಕುಂ; ಆ ವತ್ತ್ವಕ್ಕೊರ್ಮೆ ಬಕಾರಮಕ್ಕುಂ; ಅಕಾರಾಂತಮಾದೆಡೆಯೊಳ್ ಬಿಂದು ವಿಕಲ್ಪದಿಂದಕ್ಕುಂ; ಬಕಾರಕ್ಕೊರ್ಮೆ ಲೋಪಮಕ್ಕುಂ.

ಪ್ರಯೋಗಂ.

ಪವರ್ಣದೊಳ್ತಕಾರಕ್ಕೆ—ಎಲ್ಲವರ್ (The Neuter form s. S. 96).

ಸಂಖ್ಯೆಗೆ—ಮೂವತ್ತುಮೂವರ್, ಈರ್ವರ್, ನೂರ್ವರ್ (cf. S. 98; 100).

ಬಕಾರಕ್ಕೆ—ಅನಿಬರ್, ಇನಿಬರ್, ಎನಿಬರ್, (cf. S. 100), ಒರ್ಬಂ, ಇರ್ಬರ್. ನೆರೆದರಸುಗಳನಿಬರುಮಂ ಕಾದಿ ಗೆಲ್ದನೊರ್ಬನೆ ಪಾರ್ಥಂ.

ಅಕಾರಾಂತಬಿಂದುಗೆ ವಿಕಲ್ಪಂ—ಪಲಂಬರ್, ಪಲಬರ್; ಕೆಲಂಬರ್, ಕೆಲಬರ್ (cf. S.100).

ಬಕಾರಲೋಪಕ್ಕೆ—ಪಲರ್, ಕೆಲರ್.

ಸೂತ್ರಂ.

ಪವರ್ಣಂ ಸೂಚಿಪ ಸಂಖ್ಯೆಯ
ನವಿಶೇಷದಿನುಸಿರ್ವ ರೂಢಿಯನಿತಿನಿತೆನಿತೆ |
ಲ್ಲವು ಕೆಲವು ಪಲವು ತಾಮಂ
ತ್ಯವರ್ಣಲೋಪಮನೆ ವತ್ತ್ವಮೊದವಿರೆ ಪಡೆಗುಂ || 100 ||

When in the classes of words mentioned in S. 99 the ವರ್ (ಬರ್) is put to ಅನಿತು, ಇನಿತು, ಎನಿತು, ಎಲ್ಲವು which express an indefinite quantity (ನಿರ್ವಿಶೇಷಶಬ್ದಂ), or to ಹಲವು, ಕೆಲವು which express a number (ಸಂಖ್ಯಾವಾಚಿ), their last syllable is elided.

ಪದಚ್ಛೇದಂ.

ಪವರ್ಣಂ ಸೂಚಿಪ ಸಂಖ್ಯೆಯಂ ಅವಿಶೇಷದಿಂ ಉಸಿರ್ವ ರೂಢಿಯ ಅನಿತು ಇನಿತು ಎನಿತು ಎಲ್ಲವು ಕೆಲವು ಪಲವು ತಾಂ ಅಂತ್ಯವರ್ಣಲೋಪಮನೆ, ವತ್ವಂ ಒದವಿರೆ, ಪಡೆಗುಂ.

ಅನ್ವಯಂ.

ವತ್ವಂ ಒದವಿ ಇರೆ, ಪವಣಂ ಸೂಚಿಪ ಸಂಖ್ಯೆಯುಂ ಅವಿಶೇಷದಿಂ ಉಸಿರ್ವ ರೂಢಿಯ ಅನಿತು ಇನಿತು ಎನಿತು ಎಲ್ಲವು ಕೆಲವು ಪಲವು ತಾಂ ಅಂತ್ಯವರ್ಣಲೋಪಮನೆ ಪಡೆಗುಂ.

ಟೀಕು.

ವತ್ವಂ=ವಕಾರಂ; ಒದವಿರೆ=ಪ್ರಾಪ್ತಿಸಿರೆ; ಪವಣಂ=ಪ್ರಮಾಣಂ; ಸೂಚಿಪ ಸಂಖ್ಯೆಯುಂ=ಸೂಚಿಸುವ ಲೆಕ್ಕವಂ; ಅವಿಶೇಷದಿಂ=ವಿಶೇಷವಲ್ಲದುದಱಿಂದೆ; ಉಸಿರ್ವ=ಪೇಳ್ವ; ರೂಢಿಯ=ಪ್ರಸಿದ್ಧಿಯ; ಅನಿತು=ಅನಿತೆಂಬುದು; ಇನಿತು=ಇನಿತೆಂಬುದು; ಎನಿತು=ಎನಿತೆಂಬುದು; ಎಲ್ಲವು=ಎಲ್ಲವೆಂಬುದು; ಕೆಲವು=ಕೆಲವೆಂಬುದು; ಪಲವು=ಪಲವೆಂಬುದು; ತಾಂ=ತಾಂ; ಅಂತ್ಯ=ಕಡೆಯಣ; ವರ್ಣ=ಅಕ್ಷರದ; ಲೋಪಮನೆ=ಅದರ್ಶನವನೆ; ಪಡೆಗುಂ=ಪಡೆವುದು.

ವೃತ್ತಿ.

ಅನಿತು ಇನಿತು ಎನಿತು ಎಲ್ಲವು ಎಂದು, ಪರ್ವಣಂ ಪೇೞ್ವ ನಿರ್ವಿಶೇಷಶಬ್ದಂಗಳ್, ಸಂಖ್ಯೆಯುಂ ಪೇೞ್ವ ಪಲವು ಕೆಲವು ಎಂಬ ಶಬ್ದಂಗಳ್ ವತ್ವಮಿದಿರೊಳಿರ್ದೊಡಮಂತ್ಯಲೋಪಮಂ ಪಡೆವುವು.

ಪ್ರಯೋಗಂ.

ಅನಿಬರ್, ಇನಿಬರ್, ಎನಿಬರ್, ಎಲ್ಲವರ್, ಪಲವರ್, ಕೆಲಬರ್.

ಸೂತ್ರಂ.

ವಿಕಲಂ ಪೆಱಿವಱೊಳರುವಿಂ
ಗೆ ಕಳಾಗಮಮಂತೆ ಸರ್ವನಾಮದೊಳಂ ತಾಂ |
ಪ್ರಕಟಂ ಗಳಾಗಮಂ ತಿಳಿ
ವಿಕಲ್ಪದಿಂದಪ್ಪುದಲ್ತೆ ಗಳ್ದಿರ್ವಿರ್ಗಂ || 101 ||

Sometimes the augments (ಆಗಮಂ) ಕಳ್ and ಗಳ್ are affixed to the ಅರ್ (S. 98); instead of the ಗಳ್ (S. 95) ಕಳ್ is used; and in the place of the ದಿರ್ and ವಿರ್ (S. 97), also in Masculines and Feminines, ಗಳ್ appears.

ಪದಚ್ಛೇದಂ.

ವಿಕಲಂ ಪೆಱಿವಱೊಳ್ ಅರುವಿಂಗೆ ಕಳಾಗಮಂ; ಅಂತೆ ಸರ್ವನಾಮದೊಳಂ ತಾಂ ಪ್ರಕಟಂ ಗಳಾಗಮಂ; ತಿಳಿ! ವಿಕಲ್ಪದಿಂದೆ ಅಪ್ಪುದು ಅಲ್ತೆ ಗಳ್ ದಿರ್ವಿರ್ಗಂ?

ಅನ್ವಯಂ.

ಪೆಱಿವಱೊಳ್ ಅರುವಿಂಗೆ ಕಳಾಗಮಂ ವಿಕಲಂ; ಅಂತೆ ಸರ್ವನಾಮದೊಳಂ ಪ್ರಕಟಂ ಗಳಾಗಮಂ ತಾಂ; ದಿರ್ವಿರ್ಗಂ ಗಳ್ ವಿಕಲ್ಪದಿಂದೆ ಅಪ್ಪುದು, ಅಲ್ತೆ? ತಿಳಿ!

### ಟೀಕು.

ಪೆಱವೆಱೊಳ್=ಕೆಲವೆಱಲ್ಲಿ; ಅರುವಿಂಗೆ=ಅರಾಗಮಕ್ಕೆ; ಕಳಾಗಮಂ=ಕಳ್ ಎಂಬಾಗಮಂ; ವಿಕಲಂ=ವಿಕಲ್ಪವಾಗಿ ಬರ್ಪುದು; ಅಂತೆ=ಹಾಂಗೆ; ಸರ್ವನಾಮದೊಳಂ=ಪುಂಸ್ತ್ರೀಲಿಂಗವಿಷಯವಾದ ಸರ್ವನಾಮಂಗಳಲ್ಲಿಯುಂ; ಪ್ರಕಟಂ=ಪ್ರಸಿದ್ಧವಾದ; ಗಳಾಗಮಂ=ಗಳ್ ಎಂಬಾಗಮಂ; ತಾಂ=ತಾಂ ವಿಕಲ್ಪವಾಗಿ ಬರ್ಪುದು; ದಿರ್ವಿಗರ್ಗಂ=ದಿರಾಗಮ ವಿರಾಗಮಂಗಳ್ಗೆ; ಗಳ್=ಗಳಾಗಮಂ; ವಿಕಲ್ಪದಿಂದೆ=ವಿಕಲ್ಪದಿಂದೆ; ಅಪ್ಪುದು=ಆಗುವದು; ಅಲ್ತೆ=ಅಲ್ಲವೆ; ತಿಳಿ=ಅಱಿ.

### ವೃತ್ತಿ.

ಮತ್ತೆ ಕೆಲವೆಱೊಳರುವಿನ ಮೇಲೆ ಕಳಾಗಮಮಕ್ಕುಂ; ಪೆಱವೆಱೊಳರುವಿಲ್ಲದೆಯುಂ ಕಳಾಗಮಮಕ್ಕುಂ; ಸರ್ವನಾಮದೊಳರುವಿನ ಮೇಲೆ ಗಳಾಗಮಮಕ್ಕುಂ; ದಿರ್ವಿಗರ್ಗೆ ವಿಕಲ್ಪದಿಂ ಗಳಾಗಮಮಕ್ಕುಂ.

### ಪ್ರಯೋಗಂ.

ಅರುವಿನ ಮೇಲೆ ಕಳಾಗಮಕ್ಕೆ—ಬುಧರ್ಕಳ್, ಗೋವರ್ಕಳ್, ಘೋಟಾಯಿಲರ್ಕಳ್ (ಘೋಟಾಯ್ತಿರ್ಕಳ್).

ಅರುವಿಲ್ಲದಲ್ಲಿ ಕಳ್—ಮಕ್ಕಳ್, ನಾಟ್ಕಳ್, ಕೋಟ್ಕಳ್.

ಅರುವಿನ ಮೇಲೆ ಸರ್ವನಾಮದೊಳ್ ಗಳಾಗಮಕ್ಕೆ—ಅವರ್ಗಳ್, ಇವರ್ಗಳ್, ಉವರ್ಗಳ್.

ದಿರ್ಗೆ—ಅಂಣಂದಿರ್, ಅಂಣಂಗಳ್; ಭಾವಂದಿರ್, ಭಾವಂಗಳ್; ಮಾವಂದಿರ್, ಮಾವಂಗಳ್; ಎಯ್ಯಂದಿರ್, ಎಯ್ಯಂಗಳ್; ಅಕ್ಕಂದಿರ್, ಅಕ್ಕಂಗಳ್. (Our best manuscript has: ಅಂಣಂದಿರ್ಗಳ್, ಅಂಣದಿರ್; and so on; but see the examples to the next S., and S. 103).

ವಿರ್ಗೆ—ಅತ್ತೆವಿರ್, ಅತ್ತೆಗಳ್; ತಾಯ್ತಿರ್, ತಾಯ್ಗಳ್; ತಂದೆವಿರ್, ತಂದೆಗಳ್. (The same manuscript here again: ಅತ್ತೆವಿರ್ಗಳ್, ಅತ್ತೆವಿರ್; and so on).

### ಸೂತ್ರಂ.

The Plural is used instead of the Singular when speaking of beloved persons and of one's superiors (Honorific Plural), and when scorning.

ಸವನಿಪುದಯತ್ನಕೃತಗೌ
ರವಮುಖದೊಳ್ಗುರುಮುನೀಶ್ವರಾದಿವಿಶಿಷ್ಟೋ |
ದ್ಭವವಿನಯದೊಳೊಂದಿದಸ
ಹ್ಯವೃತ್ತಿಯೊಳ್ತಾಂ ಬಹುತ್ವಮೇಕತ್ವದೊಳಂ || 102 ||

ಪದಚ್ಛೇದಂ.

ಸವನಿಪುದು ಅಯತ್ನಕೃತಗೌರವಮುಖದೊಳ್, ಗುರುಮುನೀಶ್ವರಾದಿವಿಶಿಷ್ಟೋದ್ಭವವಿನಯದೊಳ್, ಒಂದಿದ ಅಸಹ್ಯವೃತ್ತಿಯೊಳ್ ತಾಂ ಬಹುತ್ವಂ ಏಕತ್ವದೊಳಂ.

ಅನ್ವಯಂ.

ಅಯತ್ನಕೃತಗೌರವಮುಖದೊಳ್, ಗುರುಮುನೀಶ್ವರಾದಿವಿಶಿಷ್ಟೋದ್ಭವವಿನಯದೊಳ್, ಒಂದಿದಸಹ್ಯವೃತ್ತಿಯೊಳ್ ಏಕತ್ವದೊಳಂ ಬಹುತ್ವಂ ತಾಂ ಸವನಿಪುದು.

ಟೀಕು.

ಅಯತ್ನ=ಪ್ರಯತ್ನವಿಲ್ಲದೆ; ಕೃತ=ಮಾಡಲ್ಪಟ್ಟ; ಗೌರವಮುಖದೊಳ್=ಗುರುತ್ವದ ಮುಖದಲ್ಲಿ; ಗುರು=ಗುರುಗಳ್; ಮುನೀಶ್ವರ=ಮುನೀಶ್ವರರ್; ಆದಿ=ಮೊದಲಾದ; ವಿಶಿಷ್ಟ=ವಿಶಿಷ್ಟರಲ್ಲಿ; ಉದ್ಭವ=ಹುಟ್ಟುವ; ವಿನಯದೊಳ್=ವಿನಯದಲ್ಲಿ; ಒಂದಿದಸಹ್ಯವೃತ್ತಿಯೊಳ್=ಕೂಡಿದ ಅಸಹ್ಯವಾದ ವೃತ್ತಿಯಲ್ಲಿ; ಏಕತ್ವದೊಳಂ=ಏಕವಚನದಲ್ಲಿಯುಂ; ಬಹುತ್ವಂ=ಬಹುವಚನಂ; ತಾಂ=ತಾಂ; ಸವನಿಪುದು=ಪ್ರಾಪ್ತಿಸುವದು.

ವೃತ್ತಿ.

ಪಾತ್ರವಿಶೇಷಮಿಲ್ಲದೆಡೆಯೊಳ್ ಪ್ರಯತ್ನಮಲ್ಲದಿರ್ಪ ಗುರುತ್ವದೊಳಂ ಗುರುಮುನೀಶ್ವರಾದಿವಿಶೇಷತ್ವದೊಳಂ ಅಸಹ್ಯವೃತ್ತಿಯೊಳಂ ಏಕವಚನಕ್ಕೆ ಬಹುವಚನಮಪ್ಪುದು.

ಪ್ರಯೋಗಂ.

ಪ್ರಯತ್ನಮಲ್ಲದ ಗುರುತ್ವಕ್ಕೆ—ಎಂಮ ತಂದೆಗಳ್, ಎಂಮಯ್ಯಂಗಳ್, ಎಂಮ ತಾಯ್ಗಳ್.

ಗುರುಮುನಿಜನಂಗಳ್ಗೆ—ಗುರುಗಳ್, ಪ್ರಭಾಸ್ವಾಮಿಗಳ್, ತೋಂಟದ ಸ್ವಾಮಿಗಳ್;

ಶ್ರೀಮತ್ಸಮಂತಭದ್ರ
ಸ್ವಾಮಿಗಳ ಜಗತ್ಪ್ರಸಿದ್ಧಕವಿಪರಮೇಷ್ಠಿ |
ಸ್ವಾಮಿಗಳ ಪೂಜ್ಯವಾದ
ಸ್ವಾಮಿಗಳ ಪದಂಗಳೀಗೆ ಶಾಶ್ವತಪದಮಮ್ || ಕಂದಂ ||

ಅಸಹ್ಯವೃತ್ತಿಗೆ—

ಬಡವಾದಿರರಸ! ಕಾಲೋ
ಳ್ಸಿಡದಪಿರೊಡನಾರುಮಿಲ್ಲ. ಕಡಲೆಗಳೇ ನಿಂ
ಮುಡಿಯೊಳಗೆ! ಪಡುವ ದೇಗುಲ
ದೆಡೆಯಾವುದು? ಕುಡದ ನಿಮಗಮಿಾಯೆಡಱಾಯ್ತೇ? || ಕಂದಂ ||

ಸೂತ್ರಂ.

ಉದಯಿಸುಗುಂ ಗಳ್ದಿರ್ಗಳ
ಮೊದಲೊಳದಂತಕ್ಕೆ ಬಿಂದು ಪುಂಸ್ತ್ರೀಲಿಂಗ |
ಕ್ಕದು ನಪ್ಪಿನೊಳ್ವಿಕಲ್ಪಂ
ಪುದಿದಿರೆ ಗಳ್ಬಿಂದು ನಿಯತಮದು ಸಂಸ್ಕೃತದೊಳ್ || 103 ||

When to words ending in ಅ of the masculine and feminine gender ಗಳ್ or ದಿರ್ is affixed, (S. 101) the Bindu is put between; when such words are Neuters, its insertion before ಗಳ್ is optional; but when they are Sanskṛt Neuters, it is obligatory.

ಪದಚ್ಛೇದಂ.

ಉದಯಿಸುಗುಂ ಗಳ್‌ದಿರ್ಗಳ ಮೊದಲೊಳ್ ಅದಂತಕ್ಕೆ ಬಿಂದು ಪುಂಸ್ತ್ರೀಲಿಂಗಕ್ಕೆ; ಅದು ನಪ್ಪಿನೊಳ್ ವಿಕಲ್ಪಂ; ಪುದಿದು ಇರೆ ಗಳ್, ಬಿಂದು ನಿಯತಂ ಅದು ಸಂಸ್ಕೃತದೊಳ್.

ಅನ್ವಯಂ.

ಪುಂಸ್ತ್ರೀಲಿಂಗಕ್ಕೆ ಅದಂತಕ್ಕೆ ಗಳ್ದಿರ್ಗಳ ಮೊದಲೊಳ್ ಬಿಂದು ಉದಯಿಸುಗುಂ; ಅದು ನಪ್ಪಿನೊಳ್ ವಿಕಲ್ಪಂ; ಸಂಸ್ಕೃತದೊಳ್, ಗಳ್ ಪುದಿದು ಇರೆ, ಬಿಂದು ಅದು ನಿಯತಂ.

ಟೀಕು.

ಪುಂಸ್ತ್ರೀಲಿಂಗಕ್ಕೆ=ಪುಲ್ಲಿಂಗ ಸ್ತ್ರೀಲಿಂಗಂಗಳಾದ; ಅದಂತಕ್ಕೆ=ಅಕಾರಾಂತಂಗಳ್ಗೆ; ಗಳ್ದಿರ್ಗಳ=ಗಳಾಗಮ ದಿರಾಗಮಂಗಳ; ಮೊದಲೊಳ್=ಆದಿಯಲ್ಲಿ; ಬಿಂದು=ಸೊನ್ನೆ; ಉದಯಿಸುಗುಂ=ಪುಟ್ಟುವುದು; ಅದು=ಆ ಬಿಂದು; ನಪ್ಪಿನೊಳ್=ಅಕಾರಾಂತನಪುಂಸಕಲಿಂಗದಲ್ಲಿ; ವಿಕಲ್ಪಂ=ವಿಕಲ್ಪವಾಗಿ ಜನಿಯಿಸುವುದು; ಸಂಸ್ಕೃತದೊಳ್=ಸಂಸ್ಕೃತಶಬ್ದಂಗಳಲ್ಲಿ; ಗಳ್=ಗಳಾಗಮಂ; ಪುದಿದಿರೆ=ಪ್ರವೇಶವಾಗಿರೆ; ಬಿಂದು=ಸೊನ್ನೆ; ಅದು=ಅದು; ನಿಯತಂ=ನಿತ್ಯವಾಗಿ ಬರ್ಪುದು.

ವೃತ್ತಿ.

ಪುಲ್ಲಿಂಗಸ್ತ್ರೀಲಿಂಗದದಂತಕ್ಕೆ ಗಳ್ದಿರ್ಗಳ್ಪರಮಾಗೆ (ಗಳುಂ ದಿರುಂ ಪರಮಾಗೆ ಎಂತ ಪಾಠಾಂತರಂ), ನಡುವೆ ಬಿಂದುವಕ್ಕುಂ; ಅಕಾರಾಂತನಪುಂಸಕಲಿಂಗದೊಳ್ಗಳ್ಬರೆ, ಆ ಬಿಂದು ವಿಕಲ್ಪಂ; ಸಂಸ್ಕೃತದೊಳ್ಬಿಂದು ನಿತ್ಯಂ.

ಪ್ರಯೋಗಂ.

ಪುಲ್ಲಿಂಗಕ್ಕೆ—ಅಂಣಂಗಳ್, ಅಂಣಂದಿರ್; ಭಾವಂಗಳ್ ಭಾವಂದಿರ್; ಮಾವಂಗಳ್, ಮಾವಂದಿರ್; ಎಯ್ಯಂಗಳ್, ಎಯ್ಯಂದಿರ್.

ಸ್ತ್ರೀಲಿಂಗಕ್ಕೆ—ಅಕ್ಕಂಗಳ್, ಅಕ್ಕಂದಿರ್.

ನಪುಂಸಕಲಿಂಗಕ್ಕೆ—ಮರಂಗಳ್, ಮರಗಳ್; ಪೊಲಂಗಳ್, ಪೊಲಗಳ್; ಪಯಂಗಳ್, ಪಯಗಳ್; ಕೆಲಂಗಳ್, ಕೆಲಗಳ್.

ಸಂಸ್ಕೃತಕ್ಕೆ—ಗುಣಂಗಳ್; ಮದಂಗಳ್; ದೇಶಂಗಳ್; ಕೋಶಂಗಳ್; ಪಾಶಂಗಳ್ ಎಂಬಂತೆ.

ದೋಷಕ್ಕೆ—ದೇಶಗಳ್.

ಸೂತ್ರಂ.

When the Bindu is followed by a Vowel, it is changed either into ನ್ or ಮ್; such a ಮ್ again may take the form of ವ್. Also a radical ಮ್ frequently appears as ವ್. (cf. Ss. 67; 263).

ಪರದೊಳ್ಸ್ವರಮಿರೆ ಬಿಂದುಗೆ
ದೊರೆಕೊಳ್ಗುಂ ನತ್ವಮತ್ವಮಾ ಮತ್ವಕ್ಕು |
ಚ್ಚರಿಪರ್ವತ್ವಮನರೆಬ
ರ್ನಿರವದ್ಯಂ ನಿಜಮಕಾರದೆಡೆಗಂ ವತ್ವಂ || 104 ||

ಪದಚ್ಛೇದಂ.

ಪರದೊಳ್ ಸ್ವರಂ ಇರೆ, ಬಿಂದುಗೆ ದೊರೆಕೊಳ್ಗುಂ ನತ್ವ-ಮತ್ವಂ; ಆ ಮತ್ವಕ್ಕೆ ಉಚ್ಚರಿಪರ್ ವತ್ವಮಂ ಅರೆಬರ್; ನಿರವದ್ಯಂ ನಿಜಮಕಾರದ ಎಡೆಗಂ ವತ್ವಂ.

ಅನ್ವಯಂ.

ಪರದೊಳ್ ಸ್ವರಂ ಇರೆ, ಬಿಂದುಗೆ ನತ್ವಮತ್ವಂ ದೊರೆಕೊಳ್ಗುಂ; ಆ ಮತ್ವಕ್ಕೆ ಅರೆಬರ್ ವತ್ವಮಂ ಉಚ್ಚರಿಪರ್; ನಿರವದ್ಯಂ ನಿಜಮಕಾರದ ಎಡೆಗಂ ವತ್ವಂ.

ಟೀಕು.

ಪರದೊಳ್=ಮುಂದೆ; ಸ್ವರಂ=ಸ್ವರಾಕ್ಷರಂ; ಇರೆ=ಇರೆ; ಬಿಂದುಗೆ=ಸೊಂನೆಗೆ; ನತ್ವಮತ್ವಂ=ನಕಾರ ಮಕಾರಂ; ದೊರೆಕೊಳ್ಗುಂ=ಪ್ರಾಪ್ತಿಸುವದು; ಆ ಮತ್ವಕ್ಕೆ=ಆ ಬಿಂದುವಿಂಗೆ ಬಂದ ಮಕಾರಕ್ಕೆ; ಅರೆಬರ್=ಕೆಲಂಬರ್; ವತ್ವಮಂ=ವಕಾರಮಂ; ಉಚ್ಚರಿಪರ್=ಉಚ್ಚರಿಸುವರ್; ನಿರವದ್ಯಂ=ಅವಧಿಯಿಲ್ಲದೆ; ನಿಜಮಕಾರದ=ಬಿಂದುವಿಂಗೆ ಬಂದುದಲ್ಲದ ನಿಜಮಕಾರದ; ಎಡೆಗಂ=ಸ್ಥಾನಕ್ಕೆಯುಂ; ವತ್ವಂ=ವಕಾರಮಪ್ಪುದು.

ವೃತ್ತಿ.

ಸ್ವರಂ ಪರಮಾಗೆ, ಬಿಂದುವಿಂಗೆ ನಕಾರ ಮಕಾರಂಗಳಕ್ಕುಂ; ಆ ಮಕಾರಕ್ಕೊರ್ಮೆ ವಕಾರಮಕ್ಕುಂ. ಸಹಜ ಮಕಾರಕ್ಕಂ ವಕಾರಮಕ್ಕುಂ.

ಪ್ರಯೋಗಂ.

ನಕಾರಕ್ಕೆ—ಪೊಲನಱಿಯದ, ನೆಲನಱಿಯದ.

ಇವಳ ಶೃಂಗಾರಸಾರಂ ಕುಸುಮಶರನೆ ಮೇಣ್ ಮಾಡಿದಮ್ ಪ್ರೋಲ್ಲಸತ್ಪ
ಲ್ಲವಪುಷ್ಪಮ್ ಮೇಣ್ ಬಸಂತಮ್ ಬಯಸೆ ಪಡೆದನೆತ್ತಂ ಸುಧಾಸೌಧಮುಂ ಸೂ|

ಸುವ ಚಂದ್ರನ್ ತಾನೆ ಮೇಣ್ ಪುಟ್ಟಿಸಿದನತಿಜಡಂ ಛಾಂದಸಮ್ ಪದ್ಮಜನ್ನಿಕ್ಕುವಮಲ್ಲಂಕರ್ತೃತಾವಂದದಿನಿತತಿಶಯನ್ ತಾಳ್ದದೀ ಕನ್ನೆಯಂದಮ್ || [1]

ಮಕಾರಕ್ಕೆ—ಕುಲಮುಂ ಚಲಮುಂ ವಿದ್ಯಾಬಲಮುಂ ಶೌರ್ಯಾವಲೇಪಮುಂ ಪೊಗೞ್ ನೆಲಂ (see s. S. 106).

ಆಯಿರ್ದ ಮಾೞ್ಕೆಯೊಳ್ ಪರ
ಮಾಯುಷ್ಯಾಂತಂಬರನ್ ನಿರಾಕುಳಮಾಗಿ |
ಪಾರ್ಯಿರವಿನ ಜೈನಾಭಿ
ಪ್ರಾಯಮ್ ಪ್ರಾಯೋಪಗಮನದಿನ್ ತೋೞ್ಯಿಸಿದಂ || ಕಂದಂ ||

ವಕಾರಕ್ಕೆ—ಕಂಣ್ಂ ಕಾಣ್ಂ ಕಿವಿಯಿಂ ಕೇಳ್ಗಂ ಕಾಣ್ಬುಡವೆಂತು ತಲೆಯಿಲ್ಲದ ನಾ; ಶೌಚವಣ್ಮು ಪೆರ್ಮಾತು ಕುಲಂ; ನಾಸಿಕವಡ್ಡಮ್ ಬನ್ದನ್ದಮನೀಕ್ಷಿಸಿ.

ನಿಜಮಕಾರದ ವಕಾರಕ್ಕೆ—ತಾಮರೆ, ತಾವರೆ; ಸಾಮುಂತಂ, ಸಾವಂತಂ; ತಿಮಿರ್, ತಿವಿರ್; ತೆಮರ್, ತೆವರ್; ಸಾಮಿ, ಸಾವಿ.

ಸೂತ್ರಂ.

ಬಿಂದುವದಂತಕ್ಕುೞಿದೆಡೆ
ಗೆಂದುಂ ಪ್ರಥಮೈಕವಚನದೊಳ್ಲೋಪಮದಂ |
ತಂ ದೊರೆವಡೆದಿದಿರೊಳ್ಸ್ವರ
ಮೊಂದಿರೆ ಪುಲ್ಲಿಂಗದಲ್ಲಿ ನಾಗಮಮಕ್ಕುಂ || 105 ||

In the Nominative Singular nominal themes terminating in ಅ receive the Bindu, but all others do not. When words with final ಅ are Masculine, they insert the augment ನ (ನ್) before a vowel of the (other) terminations of the Singular.

ಪದಚ್ಛೇದಂ.

ಬಿಂದು ಅದಂತಕ್ಕೆ, ಉೞಿದ ಎಡೆಗೆ ಎಂದುಂ—ಪ್ರಥಮೈಕವಚನದೊಳ್—ಲೋಪಂ; ಅದಂತಂ ದೊರೆವಡೆದು, ಇದಿರೊಳ್ ಸ್ವರಂ ಒಂದಿ ಇರೆ, ಪುಲ್ಲಿಂಗದಲ್ಲಿ ನಾಗಮಂ ಅಕ್ಕುಂ.

ಅನ್ವಯಂ.

ಪ್ರಥಮೈಕವಚನದೊಳ್ ಅದಂತಕ್ಕೆ ಬಿಂದು, ಉೞಿದೆಡೆಗೆ ಎಂದುಂ ಲೋಪಂ; ಅದಂತಂ ದೊರೆವಡೆದು, ಇದಿರೊಳ್ ಸ್ವರಂ ಒಂದಿರೆ, ಪುಲ್ಲಿಂಗದಲ್ಲಿ ನಾಗಮಂ ಅಕ್ಕುಂ.

ಟೀಕು.

ಪ್ರಥಮೈಕವಚನದೊಳ್=ಪ್ರಥಮಾವಿಭಕ್ತಿಯ ಏಕವಚನದಲ್ಲಿ; ಅದಂತಕ್ಕೆ=ಅಕಾರಾಂತ

1) This is ಸ್ರಗ್ಧರಾವೃತ್ತಂ, i. e. 4 times: ⏑⏑—|——⏑|——⏑|⏑⏑⏑|⏑⏑—|—⏑—|—⏑—|—||

ಶಬ್ದಕ್ಕೆ; ಬಿಂದು=ಮಕಾರದ ಸೊನ್ನೆ ಅಪ್ಪುದು; ಉೞಿದೆಡೆಗೆ=ಅಕಾರಾಂತವಲ್ಲದುಳಿದೆಡೆಗೆ; ಎಂದುಂ=ಆವಾಗಲುಂ; ಲೋಪಂ=ಅದರ್ಶನಂ ಅಪ್ಪುದು; ಅದಂತಂ=ಅಕಾರಾಂತಂ; ದೊರೆವಡೆದು=ಪ್ರಸಿದ್ಧಿವಡೆದು; ಇದಿರೊಳ್=ಮುಂದೆ; ಸ್ವರಂ=ವಿಭಕ್ತಿಸ್ವರಂ; ಒಂದಿರೆ=ಕೂಡಿರೆ; ಪುಲ್ಲಿಂಗದಲ್ಲಿ=ಪುಲ್ಲಿಂಗದಲ್ಲಿ; ನಾಗಮಂ=ನಕಾರಾಗಮಂ; ಅಕ್ಕುಂ=ಅಪ್ಪುದು.

### ವೃತ್ತಿ.

ಪ್ರಥಮೈಕವಚನದೊಳಕಾರಾಂತಕ್ಕೆ ಬಿಂದುವಕ್ಕುಂ; ಅಕಾರಾಂತಮಲ್ಲದೆಡೆಯೊಳೆಲ್ಲಂ ಲೋಪಮಕ್ಕುಂ; ಅಕಾರಾಂತಪುಲ್ಲಿಂಗಕ್ಕೆ ಸ್ವರಾದಿವಿಭಕ್ತಿ ಪರಮಾಗೆ, ನಕಾರಾಗಮಮಕ್ಕುಂ.

### ಪ್ರಯೋಗಂ.

ಬಿಂದುಗೆ—ವೇದವಿದಂ ಕಾಲತ್ರಯ
ವೇದಿ ಬಹುಶ್ರುತನಥರ್ವಕುಶಲಂ ಶುಭವಂ |
ಶೋದಯನುತ್ತಮನಾಶೀ
ರ್ವಾದಪರಂ ಪರಹಿತಂ ಪುರೋಹಿತನಕ್ಕುಂ || ಕಂದಂ ||

ಬಿಂದುಲೋಪಕ್ಕೆ—ಪುಲ್, ಪೊದೞ್, ಗಿಡು, ಬಳ್ಳಿ, ಪುಲಿ, ಕರಡಿ, ಎರಳೆ ಇವು ಮೊದಲಾದುವು.

ಅಕಾರಾಂತಪುಲ್ಲಿಂಗದೊಳ್ ನಕಾರಾಗಮಕ್ಕೆ—ಅವನಂ, ಅವನಿಂ, ಅವನತ್ತಣಿಂ, ಅವನ, ಅವನೊಳ್.

### ಸೂತ್ರಂ.

ವಿತತನಪುಂಸಕಲಿಂಗ
ದ್ವಿತೀಯೆಯೊಳ್ನತ್ವಮತ್ವವಿಧಿ ಮತ್ವಮೆ ಸಂ |
ಗತಿವಡೆಗುಂ ಸಂಸ್ಕೃತದೊಳ್
ತೃತೀಯೆ ಮೊದಲಾದುವರ್ಕೆ ದಾಗಮಮಕ್ಕುಂ || 106 ||[1]

In the Accusative Singular Canarese themes with final ಅ, when Neuters, affix either ನ್+ಅಂ (ನಂ) or ಮ್+ಅಂ (ಮಂ); but when Sanskṛt Neuters, only ಮ್+ಅಂ (ಮಂ). — In the Instrumental, Ablative, Genitive and Locative Singular their augment is ದ (ದ್; cf. S. 93).

### ಪದಚ್ಛೇದಂ.

ವಿತತನಪುಂಸಕಲಿಂಗದ್ವಿತೀಯೆಯೊಳ್ ನತ್ವ—ಮತ್ವ—ವಿಧಿ; ಮತ್ವಮೆ ಸಂಗತಿವಡೆಗುಂ ಸಂಸ್ಕೃತದೊಳ್; ತೃತೀಯೆ ಮೊದಲಾದುವರ್ಕೆ ದಾಗಮಮುಂ ಅಕ್ಕುಂ.

1) Here, in one Manuscript, S. 122 is placed.

ಅನ್ವಯಂ.

ವಿತತನಪುಂಸಕಲಿಂಗದ್ವಿತೀಯೆಯೊಳ್ ನತ್ವಮತ್ವವಿಧಿ; ಸಂಸ್ಕೃತದೊಳ್ ಮತ್ವಮೆ ಸಂಗತಿವಡೆಗುಂ; ತೃತೀಯೆ ಮೊದಲಾದುವರ್ಕೆ ದಾಗಮಂ ಅಕ್ಕುಂ.

ಟೀಕು.

ಅದಂತಕ್ಕೆಂಬುದನುವರ್ತನೆ—ವಿತತ=ನಾನಾ ಪ್ರಕಾರವಾದ; ನಪುಂಸಕಲಿಂಗ=ನಪುಂಸಕಲಿಂಗದ; ದ್ವಿತೀಯೆಯೊಳ್=ದ್ವಿತೀಯಾವಿಭಕ್ತಿಯಲ್ಲಿ; ನತ್ವಮತ್ವವಿಧಿ=ನಕಾರ ಮಕಾರಂಗಳ ವಿಧಿಅಪ್ಪದು; ಸಂಸ್ಕೃತದೊಳ್=ಸಂಸ್ಕೃತಶಬ್ದದಲ್ಲಿ; ಮತ್ವಮೆ=ಮಕಾರವೆ; ಸಂಗತಿವಡೆಗುಂ=ಸಂಬಂಧವಾಗುವದು; ತೃತೀಯೆ ಮೊದಲಾದುವರ್ಕೆ=ತೃತೀಯಾವಿಭಕ್ತಿ ಮೊದಲಾದ ಸ್ವರಾದಿವಿಭಕ್ತಿಗೆ; ದಾಗಮಂ=ದಕಾರಾಗಮಂ; ಅಕ್ಕುಂ=ಅಪ್ಪದು.

ವೃತ್ತಿ.

ಕಂನಡದೊಳಕಾರಾಂತನಪುಂಸಕಲಿಂಗಕ್ಕೆ ಪರಮಾದ ದ್ವಿತೀಯೆಗೆ ನಕಾರ ಮಕಾರಂಗಳಪ್ಪುವು; ಸಂಸ್ಕೃತದೊಳ್ಮಕಾರಮೆ ಅಕ್ಕುಂ; ತೃತೀಯೆ ಮೊದಲಾದ ವಿಭಕ್ತಿಪರಮಾಗೆ, ದಕಾರಾಗಮಮಕ್ಕುಂ.

ಪ್ರಯೋಗಂ.

ನಕಾರಕ್ಕೆ—ಪೊಲನಂ, ನೆಲನಂ, ಬಿಲನಂ.
ಮತ್ವಕ್ಕೆ—ಬೆಟ್ಟಮಂ, ಘಟ್ಟಮಂ, ಹಳ್ಳಮಂ, ಕೊಳ್ಳಮಂ, ಬಳ್ಳಮಂ.
ಸಂಸ್ಕೃತಮತ್ವಕ್ಕೆ—ಕುಲಮುಂ ಚಲಮುಂ ವಿದ್ಯಾ
ಬಲಮುಂ ಶೌರ್ಯಾವಲೇಪಮುಂ ಪೊಗೞ್ವೆ ನೆಲ |
ನ್ನೆಲಕೆಲ್ಲ ನೆಗೞ್ದನ್ದಿ
ಟ್ಟುಲಕುಲನಗನಿಧನಪಟುಪವಿಪ್ರತಿಮಭುಜಮ್ || ಕಂದಂ ||
(see s. S. 104).

ನೂಂಕಿದನೆಂಬೊಂದರ್ಥದೊಳ್ ಚಂದ್ರನನಿತ್ತನೆಂದು, ನಕಾರಮುಪಚಾರಮಾಯ್ತು.

ದಕಾರಾಗಮಕ್ಕೆ—ಮನದಿಂ, ಮನದತ್ತಣಿಂ, ಮನದ, ಮನದೊಳ್.
ಮನದಿಂ ಬೇಗಂ ಪುಟ್ಟಿದ
ನನೂನಫಲಕುಸುಮಪಲ್ಲವಭ್ರಾಜಿತಮಂ |
ಬನದೊಳಗೆ ಪವನನಂದನ
ನನಿಂದ್ಯಗುಣನೆಸೆವಶೋಕಧಾತ್ರೀರುಹದಿಂ || ಕಂದಂ ||

## ಸೂತ್ರಂ.

ಸಮನಿಸಿ ತೋಱಿಸುಗುಮಿಮಿಂ
ದಮಿಂದೆಯೆಂಬಿವು ತೃತೀಯೆಯೊಳ್ಮತ್ತಮೆಕಾ |
ರಮದೊಂದೆ ಮೇಣ್ತೃತೀಯೆಗೆ
ಸಮುಚಿತಮಾದೇಶಮಱಿದು ಕೊಳ್ಗೀ ಕ್ರಮದಿಂ || 107 ||

For the Instrumental (here Singular) the terminations are: ಇಮ್, ಇಂದಮ್ and ಇಂದೆ (partly after the augment ದ; Ss. 93; 106). When a word ends in ಅ and is Neuter, the termination ಎ may be used (after the said augment).

## ಪದಚ್ಛೇದಂ.

ಸಮನಿಸಿ ತೋಱಿಸುಗುಂ ಇಮ್ ಇಂದಮ್ ಇಂದೆ ಎಂಬ ಇವು ತೃತೀಯೆಯೊಳ್; ಮತ್ತಂ ಎಕಾರಂ ಅದು ಒಂದೆ ಮೇಣ್ ತೃತೀಯೆಗೆ ಸಮುಚಿತಂ ಆದೇಶಂ; ಅಱಿದು ಕೊಳ್ಗ ಈ ಕ್ರಮದಿಂ.

## ಅನ್ವಯಂ.

ತೃತೀಯೆಯೊಳ್ ಇಮ್ ಇಂದಮ್ ಇಂದೆ ಎಂಬಿವು ಸಮನಿಸಿ ತೋಱಿಸುಗುಂ; ಮತ್ತಂ ಎಕಾರಂ ಅದು ಒಂದೆ ಮೇಣ್ ತೃತೀಯೆಗೆ ಸಮುಚಿತಂ ಆದೇಶಂ; ಈ ಕ್ರಮದಿಂ ಅಱಿದು ಕೊಳ್ಗೆ.

## ಟೀಕು.

ತೃತೀಯೆಯೊಳ್=ತೃತೀಯಾವಿಭಕ್ತಿಯಲ್ಲಿ; ಇಮ್=ಇಮ್ ಎಂದು; ಇಂದಮ್=ಇಂದಮ್ ಎಂದು; ಇಂದೆ=ಇಂದೆ ಎಂದು; ಎಂಬಿವು=ಎಂಬೀ ಮೂಱು ರೂಪಂಗಳು; ಸಮನಿಸಿ=ಪ್ರಾಪ್ತಿಸಿ; ತೋಱಿಸುಗುಂ=ಕಾಣಿಸುವುವು; ಮತ್ತಂ=ಬಳಿಕಂ; ಎಕಾರಂ=ಎತ್ವಂ; ಅದೊಂದೆ=ಅದು ತಾನೊಂದೆ; ಮೇಣ್=ವಿಕಲ್ಪದಿಂದೆ; ತೃತೀಯೆಗೆ=ತೃತೀಯಾವಿಭಕ್ತಿಗೆ; ಸಮುಚಿತಂ=ಉಚಿತವಾದ; ಆದೇಶಂ=ಆದೇಶವೆಂದು; ಈ ಕ್ರಮದಿಂ=ಈ ರೀತಿಯಿಂದೆ; ಅಱಿದು ಕೊಳ್ಗೆ=ತಿಳಿದು ಕೊಳ್ಗೆ.

## ವಿಚಾರಂ.

ಅಕಾರಾಂತನಪುಂಸಕಲಿಂಗದಲ್ಲಿ ತೃತೀಯಾವಿಭಕ್ತಿಯ ಮೂಱು ರೂಪಿಂಗೆ ವಿಕಲ್ಪದಿಂದೆ ಎಕಾರಾದೇಶವಾಗುವುದೆಂದಱಿವುದು.

## ವೃತ್ತಿ.

ಇಮ್ ಇಂದಮ್ ಇಂದೆ ಎಂದು, ತೃತೀಯೆ ಮೂದೆಱಮಾಗಿರ್ಪುದು; ಇವರ್ಕಾದೇಶಮಾಗಿ ಬೇಱೊಂದೆಕಾರಮಪ್ಪುದು.

## ಪ್ರಯೋಗಂ.

ಇಮಾದಿಗಳ್ಗೆ—ಗರುಡಿಯ ಬಳಸಿಂ ಬಿಜ್ಜೋದರಗಳದಿಂ; ಆನೆ ಹಾರವಿಕ್ಕಿದ ತಳಿಯಿಂ[1] ತುರುಗದ ವಾಹಳಿಯಿಂ ಭಯದಿಂ ಮುಳಿಸಿಂದಂ; ಸ್ಮಯದಿಂದಂ, ರಾಗದಿಂ

1) The ಯ in ಯಿಂ must be explained by S. 53.

ದಂ; ಭಯದಿಂದೆ, ರಾಗದಿಂದೆ; ತೊಡೆಸಂಕಲೆಯಿಕ್ಕಿದ ಪೊಲ್ಕುಡಿಯಳ್ಳೆಗಳಿಂದೆ ಸುರಿದುವಿರ್ಕೆಲಕೆ ಕರುಳ್ (ದುಡಿಯಳ್ಳೆ—ಎಂತ ಪಾಠಾಂತರಂ).

ಆದೇಶದೆಕಾರಕ್ಕೆ—ಕ್ರಮದೆ, ನಯದೆ, ಭಯದೆ.

ಸೂತ್ರಂ.

ವಿದಿತಮುವರ್ಣಋವರ್ಣೌ
ತ್ತದೊಳಂ ಹ್ರಸ್ವೈತ್ತದೊಳಮಿನಾಗಮವಿಧಿ ತ |
ಪ್ಪದು ವತ್ವಸಂಧಿಯೆಡೆಯೊಳ
ಮುದಿತತೃತೀಯೆಯೊಳಮಱಿ ವಿಕಲ್ಪಸ್ಥಿತಿಯಿಂ || 108 ||

In the Instrumental (and Dative, Ablative, Genitive, Locative) Singular nouns ending in ಉ, ಊ, ಋ, ೠ, ಓ, ಔ, some (Adverbs) ending in ಎ (Ss 90; 320; 321), and also nouns with final Consonants insert the augment ಇನ್ before the terminations. With nouns, however, that receive a euphonistic ವ (ವ್, S. 55), the augment ಇನ್ is optional.

ಪದಚ್ಛೇದಂ.

ವಿದಿತಂ ಉವರ್ಣಋವರ್ಣೌತ್ವದೊಳಂ ಹ್ರಸ್ವೈತ್ವದೊಳಂ ಇನಾಗಮವಿಧಿ ತಪ್ಪದು, ವತ್ವಸಂಧಿಯ ಎಡೆಯೊಳಂ ಉದಿತತೃತೀಯೆಯೊಳಂ, ಅಱಿ, ವಿಕಲ್ಪಸ್ಥಿತಿಯಿಂ.

ಅನ್ವಯಂ.

ಉದಿತತೃತೀಯೆಯೊಳಂ ಉವರ್ಣಋವರ್ಣೌತ್ವದೊಳಂ ಹ್ರಸ್ವೈತ್ವದೊಳಂ ವಿದಿತಂ ಇನಾಗಮವಿಧಿ ತಪ್ಪದು; ವತ್ವಸಂಧಿಯ ಎಡೆಯೊಳಂ ವಿಕಲ್ಪಸ್ಥಿತಿಯಿಂ. ಅಱಿ!

ಟೀಕು.

ಉದಿತ=ಹುಟ್ಟಲ್ಪಟ್ಟ; ತೃತೀಯೆಯೊಳಂ=ತೃತೀಯಾವಿಭಕ್ತಿಯಲ್ಲಿ; ಉವರ್ಣ=ಉ ಊ ಎಂಬ ಸವರ್ಣದಲ್ಲಿ; ಋವರ್ಣ=ಋ ೠ ಎಂಬ ಸವರ್ಣದಲ್ಲಿ; ಔತ್ವದೊಳಂ=ಔಕಾರ ಓಕಾರಂಗಳಲ್ಲಿಯುಂ; ಹ್ರಸ್ವ=ಹ್ರಸ್ವದ; ಎತ್ವದೊಳಂ=ಎಕಾರದಲ್ಲಿಯುಂ; ವಿದಿತಂ=ಪ್ರಸಿದ್ಧವಾದ; ಇನಾಗಮವಿಧಿ=ಇನಾಗಮದ ವಿಧಿ; ತಪ್ಪದು=ತೊಲಗದು; ವತ್ವಸಂಧಿಯೆಡೆಯೊಳಂ=ವತ್ವಸಂಧಿಯ ಸ್ಥಾನದಲ್ಲಿಯುಂ; ವಿಕಲ್ಪಸ್ಥಿತಿಯಿಂ=ವಿಕಲ್ಪದ ಸ್ಥಿತಿಯಿಂದೆ; ಅಱಿ=ತಿಳಿ.

ವೃತ್ತಿ.

ಪ್ರಸಿದ್ಧಮಪ್ಪುವರ್ಣದೊಳಂ ಋವರ್ಣದೊಳಂ ಔಕಾರವೋಕಾರದೊಳಂ ಹ್ರಸ್ವಮಪ್ಪೆಕಾರದೊಳಂ ತೃತೀಯೆ ಮೊದಲಾದುವಱೊಳಿನಾಗಮಮಕ್ಕುಂ; ತೃತೀಯೆಯೊಳಂ ವತ್ವಸಂಧಿಯೆಡೆಯೊಳಮಿನಾಗಮಂ ವಿಕಲ್ಪದಿಂದಕ್ಕುಂ.

ಪ್ರಯೋಗಂ.

ಉವಾದಿಗಳ್ಗೆ—ತಳಿರ್ವಾಸಿನಿಂದೆ, ಪೂವಿನ ಬಿಲ್ಲ ಕೊಪ್ಪನೊದೆದೇೞಿಸಿ ತಾವ ರೆನೂಲ ಜೇವಡೆಗೆಯ್ದು; ಪಿತೃವಿನ, ಖಲೂವಿನ; ಗ್ಲೌವಿನ, ಗೋವಿನ; ಮತ್ತಿನ ಮತ್ತಿ ಬೇರ್ಗಳ ಬಿತ್ತುಗಳಾ ವಿಧಿಯೊಳೇನೊ (?) ಸುಜನೋತ್ತಂಸಾ (see s. S. 90); ನಿಂನಿನ, ಪೊಂನಿನ (Ss. 320; 321).

ವ್ಯಂಜನದೊಳುಂಟು—ಈ ಸೂೞಿನ.

ತೃತೀಯೆಯೊಳ್ ವಿಕಲ್ಪಕ್ಕೆ—ಮಾತಿಂ, ಮಾತಿನಿಂ; ಕಡುಪಿಂ, ಕಡುಪಿನಿಂ.

ವತ್ತಸಂಧಿಯೊಳ್ ವಿಕಲ್ಪಕ್ಕೆ—ಮಡುವಿಂ, ಮಡುವಿನಿಂ; ಮಡುಗೆ, ಮಡುವಿಂ ಗೆ; ಮಡುವ, ಮಡುವಿನ; ಗುರುವಿಂ, ಗುರುವಿನಿಂ; ಗುರುಗೆ, ಗುರುವಿಂಗೆ; ಮನು ವಿಂ, ಮನುವಿನಿಂ; ಗುರುವ, ಗುರುವಿನ; ಗುರುವೊಳ್, ಗುರುವಿನೊಳ್.

ಮನುವಿನ ಮಾರ್ಗಂ ಸುರಗುರು
ವಿನೞಿವು ಪವಮಾನಸೂನುವೊಂದಾಯತಿಪೆಂ |
ಪಿನೊಳೆಸೆವ ಕರ್ಣನೊಳ್ನುಡಿ
ತನಗದು ನಿಜವಾಗೆ ನೆಗೞ್ದನಾ ವಿಭುವಿಳೆಯೊಳ್ || ಕಂದಂ ||

ಸೂತ್ರಂ.

ಪಗಲಿರುಳೆಂಬಲ್ಲಿ ವಿಕ
ಲ್ಪಗತಿಯಿನಾ ವ್ಯಂಜನಾಂತದೊಳೆ ಪೇೞ್ದರ್ ಸೂ |
ರಿಗಳಾಗಳೀಗಳೆಂಬೆಡೆ
ಗಗಲ್ಚರುೞಿದೆಡೆಗಿನಾಗಮಂ ದೋಷಕರಂ || 109 ||

But the insertion of ಇನ್ takes place only in a very few instances with words ending in Consonants; it is optional with ಪಗಲ್ and ಇರುಳ್, necessary with ಈಗಳ್ and ಆಗಳ್ (S. 322).

ಪದಚ್ಛೇದಂ.

ಪಗಲ್ ಇರುಳ್ ಎಂಬಲ್ಲಿ ವಿಕಲ್ಪಗತಿಯಿಂ ಆ ವ್ಯಂಜನಾಂತದೊಳೆ ಪೇೞ್ದರ್ ಸೂರಿಗಳ್; ಆಗಳ್ ಈಗಳ್ ಎಂಬ ಎಡೆಗೆ ಅಗಲ್ಚರ್. ಉೞಿದ ಎಡೆಗೆ ಇನಾಗಮಂ ದೋಷಕರಂ.

ಅನ್ವಯಂ.

ಸೂರಿಗಳ್ ಆ ವ್ಯಂಜನಾಂತದೊಳೆ ಪಗಲ್ ಇರುಳ್ ಎಂಬಲ್ಲಿ ವಿಕಲ್ಪಗತಿಯಿಂ ಪೇೞ್ದರ್; ಆಗಳ್ ಈಗಳ್ ಎಂಬೆಡೆಗೆ ಅಗಲ್ಚರ್; ಉೞಿದೆಡೆಗೆ ಇನಾಗಮಂ ದೋಷಕರಂ.

ಟೀಕು.

ಸೂರಿಗಳ್=ವಿದ್ವಾಂಸರ್; ಆ ವ್ಯಂಜನಾಂತದೊಳೆ=ಆ ಪ್ರಸಿದ್ಧವಾದ ವ್ಯಂಜನಾಂತಶಬ್ದಂಗ

ಳಲ್ಲಿಯೆ; ಪಗಲ್=ಪಗಲೆಂದು; ಇರುಳ್=ಇರುಳೆಂದು; ಎಂಬಲ್ಲಿ=ಎಂಬ ಶಬ್ದಂಗಳಲ್ಲಿ; ವಿಕಲ್ಪಗತಿಯಿಂ=ವಿಕಲ್ಪದ ಗತಿಯಿಂದೆ; ಪೇೞ್ವಿರ್=ಇನಾಗಮುವಂ ಪೇಳ್ವರ್; ಆಗಳ್=ಆಗಳೆಂದು; ಈಗಳ್=ಈಗಳೆಂದು; ಎಂಬೆಡೆಗೆ=ಎಂಬ ಸ್ಥಾನಕ್ಕೆ; ಅಗಲ್ಚರ್=ಇನಾಗಮುವಂ ತೊಲಗಿಸರ್; ಉೞಿದೆಡೆಗೆ=ಮಿಕ್ಕ ವ್ಯಂಜನಾಂತಸ್ಥಾನಕ್ಕೆ; ಇನಾಗಮಂ=ಇನ್ ಎಂಬಾಗಮಂ; ದೋಷಕರಂ=ದೋಷಕರವಪ್ಪುದು.

### ವೃತ್ತಿ.

ಪಗಲಿರುಳೆಂಬ ವ್ಯಂಜನಾಂತಶಬ್ದಂಗಳೊಳಿನಾಗಮಂ ವಿಕಲ್ಪದಿನಪ್ಪುದು; ಆಗಳೀಗಳೆಂಬ ವ್ಯಂಜನಾಂತದೊಳಿನಾಗಮಂ ನಿತ್ಯಂ. ಮಿಕ್ಕೆಡೆಯೊಳೆಲ್ಲಂ ದೋಷಂ.

### ಪ್ರಯೋಗಂ.

ವಿಕಲ್ಪಕ್ಕೆ—ಪಗಲ, ಪಗಲಿನ; ಇರುಳ, ಇರುಳಿನ. ಪಗಲಂತಿರ್ದುಚ್ಚವೆಳ್ದಿಂಗಳ್; ಪಗಲಿನ ರವಿಕಿರಣಂಗಳ್. ಇರುಳ ಸರೋಜವಾದುದರಿರಾಯರ ಸಂಸಾರಂ; ಇರುಳಿನ ಚಕ್ರಾಹ್ವಯದ ವೋಲಿರ್ದುಂ ಸುಖಮ್ಪಡೆದಪನೆ.

ನಿತ್ಯಕ್ಕೆ—ಆಗಳಿನ ಕಜ್ಜವನ್ನೆ ಗೆಯ್ವಂ ಗೆಯ್ದಪುದೆಂದು ಆವ ರೀತಿ ಪೇೞೆಂದೊಡೆ ಬಯ್ಸುರೀಗಳಿನ ದೆಸೆಗೆವಿಟ್ಟಿ ಮಹಾಕವೀಶ್ವರರ್.

ದೋಷಕ್ಕೆ—ಬೆಮರಿನ, (ಮೂಗಿನ), ಮಣಲಿನ, ಮುಗಲಿನ; ಇವಱಂತೆ ಮಿಕ್ಕುವಂ ನೋಡಿ ಕೊಳ್ವುದು.

### ಸೂತ್ರಂ.

ಜನಿಯಿಪುದುದಂತಕೃತ್ಸ
ರ್ವನಾಮಗುಣವಚನಸಂಖ್ಯೆಗಳ್ಗೆ ಪವಣ್ಗೆಱ್ |
ವಿನಮಱ್ಕಾರಂ ದಿಗ್ವಾ
ಚಿ ನಿಲೆ ತೃತೀಯಾದಿಗಣ್ಪ್ರಯೋಗಿಸ ಪಡೆಗುಂ ‖ 110 ‖

In the Instrumental, Genitive and Locative (Singular and Plural, Neuter Gender) Verbal nominal themes, Pronouns (cf. S. 96), Adjectives, Numbers and words denoting Quantity (ಪವಣ್, S. 99), when ending in ಉ (ಅದು, ಅವು, etc.), insert ಅಱ್. Words denoting Direction (ದಿಗ್ವಾಚಿ) insert ಅಣ್ in the Instrumental Singular.

### ಪದಚ್ಛೇದಂ.

ಜನಿಯಿಪುದು ಉದಂತಕೃತ್–ಸರ್ವನಾಮ–ಗುಣವಚನ–ಸಂಖ್ಯೆಗಳ್ಗೆ ಪವಣ್ಗೆ ಅಱ್ವಿನಂ ಅಱ್ಕಾರಂ; ದಿಗ್ವಾಚಿ ನಿಲೆ, ತೃತೀಯಾದಿಗೆ ಅಣ್ ಪ್ರಯೋಗಿಸ ಪಡೆಗುಂ.

### ಅನ್ವಯಂ.

ಉದಂತಕೃತ್ಸರ್ವನಾಮಗುಣವಚನಸಂಖ್ಯೆಗಳ್ಗೆ ಪವಣ್ಗೆ ಅಱ್ವಿನಂ ತೃತೀಯಾದಿಗೆ ಅಱ್ಕಾರಂ ಜನಿಯಿಪುದು; ದಿಗ್ವಾಚಿ ನಿಲೆ, ಅಣ್ ಪ್ರಯೋಗಿಸ ಪಡೆಗುಂ.

### ಟೀಕು.

ಉದಂತಕೃತ್=ಉಕಾರಾಂತಕೃತ್ತುಗಳ್ಗೆ; ಸರ್ವನಾಮ=ಸರ್ವನಾಮಂಗಳ್ಗೆ; ಗುಣವಚನ=ಗುಣವಚನಂಗಳ್ಗೆ; ಸಂಖ್ಯೆಗಳ್ಗೆ=ಸಂಖ್ಯಾವಾಚಿಗಳ್ಗೆ; ಪವಣ್ಗೆ=ಪ್ರಮಾಣವಾಚಿಗಳ್ಗೆ; ಅಱಿವಿನಂ=ತಿಳಿವುತ್ತಿರೆ; ತೃತೀಯಾದಿಗೆ=ತೃತೀಯಾವಿಭಕ್ತಿ ಮೊದಲಾದುವರ್ಕೆ; ಅಱ್ಕಾರಂ=ಅಱ್ ಎಂಬಾಗಮಂ; ಜನಿಯಿಪುದು=ಹುಟ್ಟುವದು; ದಿಗ್ವಾಚಿ=ದಿಕ್ಕಂ ಪೇಳ್ವ ಶಬ್ದಂಗಳ್; ನಿಲೆ=ಇರೆ; ಅಣ್=ಅಣೆಂಬಾಗಮಂ; ಪ್ರಯೋಗಿಸ ಪಡೆಗುಂ=ಪ್ರಯೋಗಿಸಲ್ಪಡುವುದು.

### ವೃತ್ತಿ.

ಉಕಾರಾಂತಮಪ್ಪ ಕೃತ್ತಿಂಗಂ ಸರ್ವನಾಮಕ್ಕಂ ಗುಣವಚನಕ್ಕಂ ಸಂಖ್ಯೆಗಂ ಪವಣ್ಗಂ ತೃತೀಯೆ ಮೊದಲಾದುದಱೊಳಱಾಗಮಂ ಪುಟ್ಟುಗುಂ; ದಿಗ್ವಾಚಕದೊಳಂತೆ ಅಣಾಗಮಮಕ್ಕುಂ.

### ಪ್ರಯೋಗಂ.

ಕೃತ್ತಿಂಗೆ—ಮಾಡಿದುದಱಿಂ, ಕೂಡಿದುದಱಿಂ, ನೋಡಿದುದಱಿಂ.

ಸರ್ವನಾಮಕ್ಕೆ—ಅದಱಲ್ಲಿ, ಪೆಱವಱ ಧರ್ಮಂಗಳಂ, ಪೆಱವಱೊಳ್ (S. 96).

ಗುಣವಚನಕ್ಕೆ—ಕಿಱಿದಱೊಳ್. ಗುಣವಚನಮಲ್ಲದಲ್ಲಿಯುಂ ಅಱ್ಕಾರಂ ಒರ್ಮೆ ಉಂಟು—ಮೇಲುದಱ ಸೆರಂಗನೊಸರಿಸುವಂತಿರೆ.

ಸಂಖ್ಯೆಗೆ—ಮೂಱಱಿಂ, ನಾಲ್ಕಱಿಂ, ಎಯ್ದಱಿಂ.

ಪವಣ್ಗೆ—ಅನಿತಱಿಂ, ಇನಿತಱಿಂ, ಎನಿತಱಿಂ, ಎಲ್ಲವಱಿಂ (S. 96).

ದಿಗ್ವಾಚಿಯ ಅಣ್ಗೆ—ಮೂಡಣಿಂ, ತೆಂಕಣಿಂ, ಪಡುವಣಿಂ, ಬಡಗಣಿಂ, ಮೇಗಣಿಂ, ಕೆಳಗಣಿಂ, ನಡುವಣಿಂ, ಕಡೆಯಣಿಂ, ಅತ್ತಣಿಂ, ಇತ್ತಣಿಂ, ಎತ್ತಣಿಂ, ಮುಂದಣಿಂ, ಪಿಂದಣಿಂ, ಮುಂತಣಿಂ, ಪಿಂತಣಿಂ, ಒಳಗಣಿಂ, ಪೊಱಗಣಿಂ. ನಡುವೆಂಬುದು ಶರೀರಮಂ ಕುಱಿತು ದಿಗ್ವಾಚಕಮಲ್ತು; ಮಧ್ಯಮಂ ಕುಱಿತು ದಿಗ್ವಾಚಕಂ. ಎಡೆಯೆಂಬುದು ತೆಱಪಂ ಕುಱಿತು (ಕುರಿತು) ಪೇೞ್ವಲ್ಲಿ ದಿಗ್ವಾಚಕಂ; ಆವೆಡೆಯಣಿನೆಂದಣ್ಪೊತ್ತುವುದು. (ಕುಱಿತು also in M. A.)

### ಸೂತ್ರಂ.

ಪುರುಷಪರಮಾದೊಡತ್ತಂ
ದೊರೆಕೊಳ್ಗುಮದಣ್ಣಾಗುಳ್ದ ದಿಗ್ವಾಚಕದೊಳ್ |
ಪರದಿಗ್ವಾಚಕದೊಳ್ದಂ
ಚರಿಸುವುದಾ ತೆಱದೆ ದತ್ವವಿಧಿ ಶಾಬ್ದಿಕರಿಂ || 111 ||

In forming a masculine theme of words of Direction which have inserted the ಅಣ್ (S. 110), (instead of the ಇಂ) the augment ಅ (Nom. ಅಂ) is joined; in the others the augment is ದ (ದಂ, cf. S. 152).

### ಪದಚ್ಛೇದಂ.

ಪುರುಷಪರಂ ಆದೊಡೆ, ಅತ್ವಂ ದೊರೆಕೊಳ್ಗುಂ ಅದು, ಅಣ್ ತಗುಳ್ದ ದಿಗ್ವಾಚಕದೊಳ್. ಪರದಿಗ್ವಾಚಕದೊಳ್ ಸಂಚರಿಸುವುದು ಆ ತೆಱದೆ ದತ್ವವಿಧಿ ಶಾಬ್ದಿಕರಿಂ.

### ಅನ್ವಯಂ.

ಅಣ್ತಗುಳ್ದ ದಿಗ್ವಾಚಕದೊಳ್ ಪುರುಷಪರಂ ಆದೊಡೆ, ಅತ್ವಂ ಅದು ದೊರೆಕೊಳ್ಗುಂ. ಪರದಿಗ್ವಾಚಕದೊಳ್ ಆ ತೆಱದೆ ದತ್ವವಿಧಿ ಶಾಬ್ದಿಕರಿಂ ಸಂಚರಿಸುವುದು.

### ಟೀಕು.

ಅಣ್ತಗುಳ್ದ ದಿಗ್ವಾಚಕದೊಳ್=ಅಣಾಗಮಂ ಪತ್ತಿದ ದಿಗ್ವಾಚಕಂಗಳಲ್ಲಿ; ಪುರುಷಪರಂ=ಪುಲ್ಲಿಂಗಪರಂ; ಆದೊಡೆ=ಆಗೆ; ಅತ್ವಂ=ಅಕಾರಂ; ಅದು=ಅದು; ದೊರೆಕೊಳ್ಗುಂ=ಪ್ರಾಪ್ತಿಸುವದು; ಪರದಿಗ್ವಾಚಕದೊಳ್=ಅಣ್ಪತ್ತದ ಮಿಕ್ಕ ದಿಗ್ವಾಚಕಂಗಳಲ್ಲಿ; ಆ ತೆಱದೆ=ಆ ರೀತೆಯಿಂದೆ; ದತ್ವವಿಧಿ=ದಕಾರದ ವಿಧಿ; ಶಾಬ್ದಿಕರಿಂ=ಶಬ್ದಜ್ಞರಿಂದೆ; ಸಂಚರಿಸುವುದು=ವರ್ತಿಸುವದು.

### ವೃತ್ತಿ.

ಅಣ್ಪೊತ್ತಿದ ದಿಗ್ವಾಚಕಂ ಪುಲ್ಲಿಂಗಮಪ್ಪೆಡೆಯೊಳಕಾರಮುಂ ಕೈಕೊಳ್ಗುಂ; ಅಣ್ಪೊತ್ತದೆ ಮಿಕ್ಕ ದಿಗ್ವಾಚಿಕದೊಳ್ದಕಾರಾಗಮುಮಕ್ಕುಂ.

### ಪ್ರಯೋಗಂ.

ಅಕಾರಕ್ಕೆ—ಮೂಡಣಂ, ತೆಂಕಣಂ, ಬಡಗಣಂ, ಪಡುವಣಂ, ಮೇಗಣಂ, ಕೆಳಗಣಂ, ನಡುವಣಂ, ಕಡೆಯಣಂ, ಎಡೆಯಣಂ, ಒಳಗಣಂ, ಪೊಱಗಣಂ, ಮುಂತಣಂ, ಪಿನ್ತಣಂ, ಅತ್ತಣನಿತ್ತಣಂ.

ದಕಾರಕ್ಕೆ—ಕೆಲದಂ, ಬಲದಂ, ಅಲ್ಲಿದಂ, ಇಲ್ಲಿದಂ, ಎಲ್ಲಿದಂ.

ಕೆಲದನಲ್ಲಿದನಿಲ್ಲಿದನೀಗಳೆಂಬಿನಂ ಮುತ್ತಿದನೊಂದೆತೆರೊಳಮರೇಂದ್ರಸುತಂ (ಕುರುಷ್ಪಂದನೆಲ್ಲಮಂ).

ಚಂಪಕಮಾಲಾವೃತ್ತದ ಭಾಗಂ.

. . . . ವಿನೋ
ದದ ಮೊದಲೆಲ್ಲಿದಂ ಸೊಬಗಿನಾಗರಮೆಲ್ಲಿದನಿಚ್ಚೆಯಾಣ್ಮನೆ
ಲ್ಲಿದನೆರ್ದೆಗಾಣ್ಮನೆನ್ನರಸನೆಲ್ಲಿದನೋ ಲಲಿತಾಂಗಿವಲ್ಲಭಮ್ ||

ಸೂತ್ರಂ.

The Nominative of the Pronoun ಏನ್ (S. 79) is either ಏನ್ or ಏತಱ್; its Dative is ಏತರ್ಕೆ or ಏಕೆ (cf. S. 114); for the other cases its theme is ಏತಱ್.

ಏನೇತಱೆನಿಕುಮಾದಿಯೊ
ಳಾ ನೆಗೞ್ದ ಚತುರ್ಥಿಗಕ್ಕುಮೇತರ್ಕೇಕೆಂ ।
ಬೀ ನುಡಿಯೇತಪ್ರ್ರಕೃತಿಯೆ
ತಾನಕ್ಕುಂ ತತ್ತೃತೀಯೆ ಮೊದಲಾದುವಱೊಳ್ ॥ 112 ॥

ಪದಚ್ಛೇದಂ.

ಏನ್ ಏತಱ್ ಎನಿಕುಂ ಆದಿಯೊಳ್; ಆ ನೆಗೞ್ದ ಚತುರ್ಥಿಗೆ ಅಕ್ಕುಂ ಏತರ್ಕೆ ಏಕೆ ಎಂಬ ಈ ನುಡಿ; ಏತಪ್ರ್ರಕೃತಿಯೆ ತಾಂ ಅಕ್ಕುಂ ತತ್ತೃತೀಯೆ ಮೊದಲಾದುವಱೊಳ್.

ಅನ್ವಯಂ.

ಆದಿಯೊಳ್ ಏನ್ ಏತಱ್ ಎನಿಕುಂ; ಆ ನೆಗೞ್ದ ಚತುರ್ಥಿಗೆ ಏತರ್ಕೆ ಏಕೆ ಎಂಬೀ ನುಡಿ ಅಕ್ಕುಂ; ತತ್ತೃತೀಯೆ ಮೊದಲಾದುವಱೊಳ್ ಏತಪ್ರ್ರಕೃತಿಯೆ ತಾಂ ಅಕ್ಕುಂ.

ಟೀಕು.

ಆದಿಯೊಳ್=ಪ್ರಥಮಾವಿಭಕ್ತಿಯಲ್ಲಿ; ಏನ್=ಏನೆಂದು; ಏತಱ್=ಏತಱೆಂದು; ಎನಿಕುಂ= ಎನಿಸುವದು; ಆ ನೆಗೞ್ದ ಚತುರ್ಥಿಗೆ=ಆ ಪ್ರಸಿದ್ಧಿವಡೆದ ಚತುರ್ಥೀವಿಭಕ್ತಿಗೆ; ಏತರ್ಕೆ=ಏತರ್ಕೆ ಎಂದು; ಏಕೆ=ಏಕೆ ಎಂದು; ಎಂಬೀ ನುಡಿ=ಎಂಬೀ ವಾಕ್ಯಂ; ಅಕ್ಕುಂ=ಅಪ್ಪುದು; ತತ್ತೃತೀಯೆ= ಆ ತೃತೀಯೆ; ಮೊದಲಾದುವಱೊಳ್=ಮೊದಲಾದ ವಿಭಕ್ತಿಗಳಲ್ಲಿ; ಏತಪ್ರ್ರಕೃತಿಯೆ=ಏತಱ್ ಎಂಬ ಪ್ರಕೃತಿಯೆ; ತಾಂ=ತಾಂ; ಅಕ್ಕುಂ=ಆಗುವದು.

ವೃತ್ತಿ.

ಏನೆಂಬ ಸರ್ವನಾಮದ ಪ್ರಥಮೆಗೆ ಏನೆಂದುಂ ಏತಱೆಂದುಮಕ್ಕುಂ; ಚತುರ್ಥಿಯೊಳೇತರ್ಕೆಂದುಮೇಕೆಂದುಮಕ್ಕುಂ; ತೃತೀಯೆ ಮೊದಲಾದುವರ್ಕೆ ಏತಱೆಂದೆ ಪ್ರಕೃತಿಯಕ್ಕುಂ.

ಪ್ರಯೋಗಂ.

ಪ್ರಥಮೆಗೆ—ಅಂದಿನ ನಿಜಭುಜವಿಕ್ರಾಂತಮ್ ಏನಾದುದು; ಏನಾಗಿಯುಮೇನೊ ಗತಿಯಂ ಪಡೆದೇತಱಾತನೇ ಗತಿಯೆಂದಳ್.

ಚತುರ್ಥಿಗೆ—ಏತರ್ಕೆ, ಏಕೆ.

ತೃತೀಯಾದಿಗೆ—ಏತಱಿಂ, ಏತಱತ್ತಣಿಂ, ಏತಱ, ಏತಱೊಳ್.

ಸೂತ್ರಂ.

The Dative Singular of Masculines ending in ಅ is ಂ+ಗೆ (ನ್+ಗೆ, S. 105); that of Neuters ending in ಅ is ಕೆ or ಕ್ಕೆ; the Dative of all other themes, be it Singular or Plural, Masculine or Feminine, is ಗೆ. (cf. S. 42).

ಒದವುವುದದಂತಪುಲ್ಲಿಂ
ಗದೊಳ್ಗೆಯೆಂದಾದಿಬಿಂದುವಿಂ ದ್ವಿತ್ವಂ ಮೇ |
ಱೊದವುವುದು ನಪುಂಸಕಲಿಂ
ಗದೊಳ್ಚತುರ್ಥಿಗೆ ಗೆಯಕ್ಕುಮುೞಿದೆಡೆಗೆಲ್ಲಂ || 113 ||

ಪದಚ್ಛೇದಂ.

ಒದವುವುದು ಅದಂತಪುಲ್ಲಿಂಗದೊಳ್ ಗೆ ಎಂದು ಆದಿಬಿಂದುವಿಂ; ದ್ವಿತ್ವಂ ಮೇಣ್ ಒದವುವುದು ನಪುಂಸಕಲಿಂಗದೊಳ್ ಚತುರ್ಥಿಗೆ; ಗೆ ಅಕ್ಕುಂ ಉೞಿದ ಎಡೆಗೆ ಎಲ್ಲಂ.

ಅನ್ವಯಂ.

ಚತುರ್ಥಿಗೆ ಅದಂತಪುಲ್ಲಿಂಗದೊಳ್ ಆದಿಬಿಂದುವಿಂ, ಗೆ ಎಂದು, ಒದವುವುದು; ನಪುಂಸಕಲಿಂಗದೊಳ್ ದ್ವಿತ್ವಂ ಮೇಣ್ ಒದವುವುದು; ಉೞಿದೆಡೆಗೆ ಎಲ್ಲಂ ಗೆ ಅಕ್ಕುಂ.

ಟೀಕು.

ಚತುರ್ಥಿಗೆ=ಕೆ ಎಂಬ ಚತುರ್ಥೀವಿಭಕ್ತಿಗೆ (S. 93); ಅದಂತ=ಅಕಾರಾಂತವಾದ; ಪುಲ್ಲಿಂಗದೊಳ್=ಪುಲ್ಲಿಂಗದಲ್ಲಿ; ಆದಿಬಿಂದುವಿಂ=ಆದಿಯಲ್ಲಿ ಬಿಂದುವಿನೊಡನೆ; ಗೆ ಎಂದು=ಗೆಯೆಂದು; ಒದವುವುದು=ಪ್ರಾಪ್ತಿಸುವುದು; ನಪುಂಸಕಲಿಂಗದೊಳ್=ಅಕಾರಾಂತವಾದ ನಪುಂಸಕಲಿಂಗದಲ್ಲಿ; ದ್ವಿತ್ವಂ=ದ್ವಿರ್ಭಾವಂ; ಮೇಣ್=ವಿಕಲ್ಪದಿಂದೆ; ಒದವುವುದು=ಪ್ರಾಪ್ತಿಸುವುದು; ಉೞಿದೆಡೆಗೆ=ಅಕಾರಾಂತವಲ್ಲದುಳಿದೆಡೆಗೆ; ಎಲ್ಲಂ=ಸ್ತ್ರೀಪುಂನಪುಂಸಕಲಿಂಗಂಗಳಲ್ಲಿಯೆಲ್ಲಂ; ಗೆ=ಗೆಯೆಂದು; ಅಕ್ಕುಂ=ಆಗುವದು.

ವೃತ್ತಿ.

ಅಕಾರಾಂತಪುಲ್ಲಿಂಗದೊಳ್ಪರಮಾದ ಚತುರ್ಥಿ ಬಿಂದುವೆರಸುಗೆಯೆಂದಕ್ಕುಂ; ಅಕಾರಾಂತನಪುಂಸಕಲಿಂಗದೊಳ್ಪರಮಾದ ಚತುರ್ಥಿಗೆ ವಿಕಲ್ಪದಿಂ ದ್ವಿತ್ವಮಕ್ಕುಂ; ಅಕಾರಾಂತಮಲ್ಲದುೞಿದ ಸ್ವರವ್ಯಂಜನಾಂತಂಗಳ್ಗೆ ಪರಮಾದ ಚತುರ್ಥಿಗೆ, ಲಿಂಗವಚನವ್ಯವಸ್ಥೆಯಿಲ್ಲದೆ, ಗೆಯೆಂದಕ್ಕುಂ.

ಪ್ರಯೋಗಂ.

ಪುಲ್ಲಿಂಗಕ್ಕೆ—ಅರಸಂಗೆ; ಆತಂಗೆ. ಅರಸಂಗಮರಸಿಗಂ ಪುಟ್ಟಿ ರಾಜಸುತನೆನಿಸಿ.

ಆತಂಗಮಾಕೆಗಂ ವಿ
ಖ್ಯಾತಯಶಂ ಪುಟ್ಟಿದಂ ಕುಲಕಂ ಚಲಕ್ಕಂ |
ಭೂತಳದೊಳಾರ್ಗಮಧಿಕಂ
ನೀತಿಪರಂ ಪರಬಲಾಬ್ಧಿಗೌರ್ವಪ್ರತಿಮಂ || ಕಂದಂ ||

ನಪುಂಸಕಲಿಂಗದ್ವಿತ್ವವಿಕಲ್ಪಕ್ಕೆ—ಬನಕ್ಕೆ, ಬನಕೆ; ಪೊಲಕ್ಕೆ, ಪೊಲಕೆ; ಕುಲಕಂ, ಚಲಕ್ಕಂ.

ಸ್ವರವ್ಯಂಜನಾಂತಂಗಳ್ಗೆ—ಕವಿಗೆ ಕೇಡಿಲ್ಲೆಂತುಂ; ತನುಗೆ ಭೂಷಣಂ ಪೊೞೆಯಲ್ತೆ; ಆಕೆಗೆ ಕಡಿಲೆಂದು ಆತಂ ನುಡಿದಂ; ಪೆಣ್ಗೆ; ಕಣ್ಗೆ; ಕುರುಳ್ಗೆ; ಬೆರಲ್ಗೆ; ಅರಲ್ಗೆ (ಅಲರ್ಗೆ); ಬೆಂಗೆ; ಳಕಳ್ಗೆ; ಮುಳ್ಗೆ; ವಿಲ್ಗೆ; ಅವಲ್ಗೆ; ನೆಗೞ್ಗೆ; ಪೊೞವಾರ್ಗೆ.

ವಚನತ್ರಯಕ್ಕೆ—ಅಪುದು ಸಂಕಟಂ ನಿನಗೆ ನಿಲ್ಲಜ ನಿಲ್ಲಜ, ಕಿವಿಗಳ್ಗೆ ಕರ್ಣಾರ್ಪೂರವಾಗಿಡುವೆಂ (M. B. ಪುರಮುಂ ಇ—); ಅವಳ ಕರುಳ್ಗೆ ಮಾಲೆದುಂಬಿಗಳೆಣೆಯೆ.

ಸೂತ್ರಂ.

But the formation of the Dative Singular with ಕೆ occasionally occurs also where its appearance, so to say, suggests the idea of a Compound (see s. S. 19).

ಅಮರ್ದಿರದು ತ್ರಿತೀಯತ್ವಂ
ಸಮಾಸವದ್ಭಾವಮಾದ ತಾಣದೊಳೆಲ್ಲಂ |
ಸಮ ಸಂದ ಚತುರ್ಥಿಗೆ ಕಾ
ವ್ಯಮಾರ್ಗದೊಳ್ ಲಕ್ಷ್ಯಮುಂಟು ತಾನೀ ತೆಱದಿಂ || 114 ||

ಪದಚ್ಛೇದಂ.

ಅಮರ್ದು ಇರದು ತೃತೀಯತ್ವಂ ಸಮಾಸವದ್ಭಾವಂ ಆದ ತಾಣದೊಳ್ ಎಲ್ಲಂ ಸಮ ಸಂದ ಚತುರ್ಥಿಗೆ; ಕಾವ್ಯಮಾರ್ಗದೊಳ್ ಲಕ್ಷ್ಯಂ ಉಂಟು ತಾಂ ಈ ತೆಱದಿಂ.

ಅನ್ವಯಂ.

ಸಮಾಸವದ್ಭಾವಂ ಆದ ತಾಣದೊಳ್ ಎಲ್ಲಂ ಸಮ ಸಂದ ಚತುರ್ಥಿಗೆ ತೃತೀಯತ್ವಂ ಅಮರ್ದು ಇರದು; ಕಾವ್ಯಮಾರ್ಗದೊಳ್ ಈ ತೆಱದಿಂ ಲಕ್ಷ್ಯಂ ತಾಂ ಉಂಟು.

ಟೀಕು.

ಸಮಾಸವದ್ಭಾವಂ=ಸಮಾಸದಂತಪ್ಪ ಭಾವಂ; ಆದ ತಾಣದೊಳ್=ಆದ ತಾವಿನಲ್ಲಿ; ಎಲ್ಲಂ=ಸರ್ವಂ; ಸಮ ಸಂದ ಚತುರ್ಥಿಗೆ=ಸಮಾನವಾಗಿ ಸಂದ ಚತುರ್ಥೀವಿಭಕ್ತಿಗೆ; ತೃತೀಯತ್ವಂ=ಮೂಱನೆಯಕ್ಷರದ ಭಾವಂ; ಅಮರ್ದಿರದು=ಪೊರ್ದುಗೆಯಾಗಿರದು; ಕಾವ್ಯಮಾರ್ಗದೊಳ್=ಕಾವ್ಯಂಗಳ ಮಾರ್ಗದಲ್ಲಿ; ಈ ತೆಱದಿಂ=ಈ ರೀತಿಯಿಂದೆ; ಲಕ್ಷ್ಯಂ=ಉದಾಹರಣೆ; ತಾಂ=ತಾಂ; ಉಂಟು=ಉಂಟಾಗಿರ್ಪುದು.

ವೃತ್ತಿ.

ಸಮಾಸಮಿಲ್ಲದೆಯುಂ ಸಮಾಸಲಕ್ಷಣಮುಂ ಪೊಕ್ಕ ಚತುರ್ಥಿಗೆ ತ್ರಿತೀಯತ್ವಮಿಲ್ಲ.

ಪ್ರಯೋಗಂ.

ಕಾಟಿಕ್ಕೆ, ಕೋಟಿಕ್ಕೆ, ನಾಟಿಕ್ಕೆ (s. S. 136), ಎತರ್ಕೆ, ಅದರ್ಕೆ, ಅನಿತರ್ಕೆ; ಏತಕೆಂದುಮುಂಟು (cf. S. 112).

ಸೂತ್ರಂ.

ಪಿರಿದುಂ ಚತುರ್ಥಿ ಸಂಸ್ಕೃತ
ಪುರುಷಸ್ತ್ರೀವಿಷಯವಿಹಿತಬಹುವಚನದೊಳೊಂ |
ದಿರೆ ಶಿಥಿಲವೃತ್ತಿ ತಾನು
ಚ್ಚರಿಪರ್ಗೆ ಯಥೇಷ್ಟಮೆಂದು ತಿಳಿಗೀ ಕ್ರಮದಿಂ || 115 ||

The ಗೆ (S. 113) with the augment ಅರ್ of the Dative Plural of Sanskṛt and Canarese masculines and feminines may be treated as a fleeting double consonant (S. 42), or the ಗೆ may also be doubled (cf. Ss. 113; 228; 229).

ಪದಚ್ಛೇದಂ.

ಪಿರಿದುಂ ಚತುರ್ಥಿ ಸಂಸ್ಕೃತಪುರುಷಸ್ತ್ರೀವಿಷಯವಿಹಿತಬಹುವಚನದೊಳ್ ಒಂದಿ ಇರೆ, ಶಿಥಿಲವೃತ್ತಿ ತಾಂ ಉಚ್ಚರಿಪರ್ಗೆ ಯಥೇಷ್ಟಂ ಎಂದು, ತಿಳಿಗೆ ಈ ಕ್ರಮದಿಂ.

ಅನ್ವಯಂ.

ಪಿರಿದುಂ ಸಂಸ್ಕೃತಪುರುಷಸ್ತ್ರೀವಿಷಯವಿಹಿತಬಹುವಚನದೊಳ್ ಚತುರ್ಥಿ ಒಂದಿ ಇರೆ, ಶಿಥಿಲವೃತ್ತಿ ತಾಂ ಉಚ್ಚರಿಪರ್ಗೆ ಯಥೇಷ್ಟಂ ಎಂದು, ತಿಳಿಗೆ ಈ ಕ್ರಮದಿಂ.

ಟೀಕು.

ಪಿರಿದುಂ=ವಿಶೇಷವಾಗಿ; ಸಂಸ್ಕೃತ=ಸಂಸ್ಕೃತದ; ಪುರುಷಸ್ತ್ರೀ=ಪುಲ್ಲಿಂಗ ಸ್ತ್ರೀಲಿಂಗಂಗಳ; ವಿಷಯ=ವಿಷಯದಲ್ಲಿ; ವಿಹಿತ=ಕೂಡಲ್ಪಟ್ಟ; ಬಹುವಚನದೊಳ್=ಬಹುವಚನದಲ್ಲಿ; ಚತುರ್ಥಿ=ಚತುರ್ಥೀವಿಭಕ್ತಿ; ಒಂದಿರೆ=ಕೂಡಿರೆ; ಶಿಥಿಲವೃತ್ತಿ=ಶಿಥಿಲದ ವರ್ತನೆ; ತಾಂ=ತಾಂ; ಉಚ್ಚರಿಪರ್ಗೆ=ಓದುವರ್ಗೆ; ಯಥೇಷ್ಟಮೆಂದು=ಇಚ್ಛೆ ಬಂದ ಹಾಂಗೆ ಎಂದು; ಈ ಕ್ರಮದಿಂ=ಈ ರೀತಿಯಿಂದೆ; ತಿಳಿಗೆ=ಅಱಿಗೆ.

ವೃತ್ತಿ.

ಸಂಸ್ಕೃತಪುಲ್ಲಿಂಗಸ್ತ್ರೀಲಿಂಗದ ಬಹುವಚನದೊಳಂ ಪಿರಿದುಮೆಂಬುದಱಿಂ ಕನ್ನಡದ ಪುಂಸ್ತ್ರೀಲಿಂಗದೊಳಂ ಚತುರ್ಥಿಗೆ ದ್ವಿತ್ವವಿಕಲ್ಪಂ.

ಪ್ರಯೋಗಂ.

ಸಂಸ್ಕೃತಕ್ಕೆ—ಬುಧರ್ಗೆ, ಬುಧರ್ಗ್ಗೆ; ಬಾಂಧವರ್ಗೆ, ಬಾಂಧವರ್ಗ್ಗೆ; ಕಾಂತೆಯರ್ಗೆ, ಕಾಂತೆಯರ್ಗ್ಗೆ; ಸ್ತ್ರೀಯರ್ಗೆ, ಸ್ತ್ರೀಯರ್ಗ್ಗೆ.

ಕನ್ನಡಕ್ಕೆ—ಎರೆವರ್ಗೆ, ಎರೆವರ್ಗ್ಗೆ; ಸೂಳೆಯರ್ಗೆ, ಸೂಳೆಯರ್ಗ್ಗೆ.

ಸೂತ್ರಂ.

The Ablative, the termination of which has been given as ಅತ್ (S. 93), is fully formed, however, by the termination ಅತ್ತಣಿಂ (joined to ದ, S. 106, or ನ, S. 105 in the Singular). This form (which bears the simple affix of the Instrumental, ಇಂ, S. 107) may also become ಅತ್ತಣಿಂದಂ or ಅತ್ತಣಿಂದೆ (thus making further use of the Instrumental affixes).

ಅತ್ತಣಿಂನೆಂದು ನಿಮಿರ್ಚುವ
ರತ್ತೆಂದಾಗಿರ್ದ ಪಂಚಮಿಯನಲ್ಲಿ ಕೆಲರ್ |
ಪತ್ತಿಸುವರ್ ಮೂದೆಱನಂ
ಪೆತ್ತ ತೃತೀಯೆಯನೆಕಾರಮಂ ಪರಿಹರಿಪರ್ || 116 ||

ಪದಚ್ಛೇದಂ.

ಅತ್ತಣಿಂ ಎಂದು ನಿಮಿರ್ಚುವರ್, ಅತ್ತು ಎಂದು ಆಗಿ ಇರ್ದ ಪಂಚಮಿಯಂ; ಅಲ್ಲಿ ಕೆಲರ್ ಪತ್ತಿಸುವರ್ ಮೂದೆಱನಂ ಪೆತ್ತ ತೃತೀಯೆಯಂ, ಎಕಾರಮಂ ಪರಿಹರಿಪರ್.

ಅನ್ವಯಂ.

ಅತ್ತು ಎಂದು ಆಗಿ ಇರ್ದ ಪಂಚಮಿಯಂ, ಅತ್ತಣಿಂ ಎಂದು, ನಿಮಿರ್ಚುವರ್; ಅಲ್ಲಿ ಕೆಲರ್ ಮೂದೆಱನಂ ಪೆತ್ತ ತೃತೀಯೆಯಂ ಪತ್ತಿಸುವರ್, ಎಕಾರಮಂ ಪರಿಹರಿಪರ್.

ಟೀಕು.

ಅತ್ತೆಂದು=ಅತ್ ಎಂದು; ಆಗಿರ್ದ ಪಂಚಮಿಯಂ=ಆಗಿರ್ದ ಪಂಚಮೀವಿಭಕ್ತಿಯಂ; ಅತ್ತಣಿಂ=ಅತ್ತಣಿಂ ಎಂದು; ನಿಮಿರ್ಚುವರ್=ನಿರ್ಮಿಸುವರ್; ಅಲ್ಲಿ=ಅತ್ ಎಂಬ ರೂಪಿನಲ್ಲಿ; ಕೆಲರ್=ಕೆಲಂಬರ್; ಮೂದೆಱನಂ=ಇಮ್ ಇಂದಮ್ ಇಂದೆ ಎಂಬ ಮೂಱು ಪ್ರಕಾರವಂ; ಪೆತ್ತ=ಪಡೆದ; ತೃತೀಯೆಯಂ=ತೃತೀಯಾವಿಭಕ್ತಿಯ ರೂಪಂ; ಪತ್ತಿಸುವರ್=ಪೊರ್ದುಗೆಯಂ ಮಾಡುವರ್; ಎಕಾರಮಂ=ಉಚಿತವಾಗಿ ಬಂದ ಎಕಾರಮಂ; ಪರಿಹರಿಪರ್=ಬಿಡುವರ್.

ವೃತ್ತಿ.

ಅತ್ ಎಂಬ ಪಂಚಮಿಯನತ್ತಣಿಂನೆಂದು ಪೇೞಲಕ್ಕುಂ; ಆ ಪಂಚಮಿಯೊಳ್ ಇಂ ಇಂದಂ ಇಂದೆ ಎಂಬ ತೃತೀಯೆಯ ಮೂಱು ರೂಪಮಂ ಕೆಲಂಬರ್ಪತ್ತಿಸುವರ್, ಆ ಮೂದೆಱಕ್ಕಾದೇಶಮಾದೆಕಾರಮಂ ಬಿಡುವರ್.

ಪ್ರಯೋಗಂ.

ಪಂಚಮಿಯ ನಿಜರೂಪಕ್ಕೆ—ಆಳ್ದನತ್ತಣಿಂ; ಆತನತ್ತಣಿಂ.

ತೃತೀಯಾರೂಪಕ್ಕೆ—ಕೆಱೆಯತ್ತಣಿಂ, ಕೆಱೆಯತ್ತಣಿಂದಂ, ಕೆಱೆಯತ್ತಣಿಂದೆ.—ಕೆಱೆಯತ್ತಣಿಂ ಎನಲಾಗದು.

[M. B. ಪಂಚಮ್ಯರ್ಥದ ತೃತೀಯೆಗೆ—ಮತ್ತಹಸ್ತಿಗಳ ಮಸ್ತಕದಿಂ ಬಿದಿರಿಂ ಫಣೀಂದ್ರೋತ್ತಮಾಂಗದಿಂ ಅಗುರ್ಬಿ ಪಂದಿಯ ಕೋಡ್ಗಳಿಂದೆ ಮುತ್ತೊಕ್ಕವು. ಅಲಿವರಲ್ಗಳುಮಿಂದ್ರಗೋಪಮುಂ ಸೂಸಿದವಭ್ರದಿಂ; ತಿಳಿಗೊಳದಿಂದೆ ಪಾಱಿದುವು ಹಂಸಕುಳಂ.]

ಸೂತ್ರಂ.

The sign of the Genitive is ಅ (affixed to ದ, S. 106, or to ನ, S. 105, in the Singular); sometimes the ಅ is lengthened, a lengthening which has also been used in Particles, when grief, haste or command were expressed. (cf. S. 53).

ಆದರಿಪರ್ಕೆಲಬರ್ದೀ
ರ್ಘಾದೇಶಮನಗ್ರದಲ್ಲಿ ಷಷ್ಠಿಯಕಾರ |
ಕ್ಕಾ ದೀರ್ಘಮನಿರದರೆಬರ್
ಖೇದದ ಸಂಭ್ರಮದ ವ್ಯೆಯೊಳುತ್ಪಾದಿಸುವರ್ || 117 ||

ಪದಚ್ಛೇದಂ.

ಆದರಿಪರ್ ಕೆಲಬರ್ ದೀರ್ಘಾದೇಶಮಂ ಅಗ್ರದಲ್ಲಿ ಷಷ್ಠಿಯ ಅಕಾರಕ್ಕೆ; ಆ ದೀರ್ಘಮಂ, ಇರದೆ, ಅರೆಬರ್ ಖೇದದ ಸಂಭ್ರಮದ ವ್ಯೆಯೊಳ್ ಉತ್ಪಾದಿಸುವರ್.

ಅನ್ವಯಂ.

ಕೆಲಬರ್ ಷಷ್ಠಿಯ ಅಕಾರಕ್ಕೆ ಅಗ್ರದಲ್ಲಿ ದೀರ್ಘಾದೇಶಮಂ ಆದರಿಪರ್; ಆ ದೀರ್ಘಮಂ ಇರದೆ, ಅರೆಬರ್ ಖೇದದ ಸಂಭ್ರಮದ ವ್ಯೆಯೊಳ್ ಉತ್ಪಾದಿಸುವರ್.

ಟೀಕು.

ಕೆಲಬರ್=ಕೆಲಬರ್; ಷಷ್ಠಿಯ=ಷಷ್ಠೀವಿಭಕ್ತಿಯ; ಅಕಾರಕ್ಕೆ=ಅತ್ವಕ್ಕೆ; ಅಗ್ರದಲ್ಲಿ=ತುದಿಯಲ್ಲಿ; ದೀರ್ಘಾದೇಶಮಂ=ದೀರ್ಘದ ಆದೇಶಮಂ; ಆದರಿಪರ್=ಪೇಳ್ವರ್; ಆ ದೀರ್ಘಮಂ=ಆ ದೀರ್ಘವಂ; ಇರದೆ=ನಿಲ್ಲದೆ; ಅರೆಬರ್=ಕೆಲಂಬರ್; ಖೇದದ=ದುಃಖದ; ಸಂಭ್ರಮದ=ಸಂಭ್ರಮದ; ವ್ಯೆಯೊಳ್=ಸ್ವರೂಪದಲ್ಲಿ; ಉತ್ಪಾದಿಸುವರ್=ಪ್ರತಿಪಾದಿಸುವರ್.

ವೃತ್ತಿ.

ಅ ಎಂಬ ಷಷ್ಠಿಯಕಾರಕ್ಕೆ ಕೆಲಬರ್ ದೀರ್ಘಾದೇಶಮನೊಡಂಬಡುವರ್; ಆ ದೀರ್ಘಮುಂ ಕೆಲರ್ ಖೇದದೊಳಂ ಸಂಭ್ರಮದೊಳಂ ಪ್ರಯೋಗಿಪರ್.

ಪ್ರಯೋಗಂ.

ಷಷ್ಠಿಯ ದೀರ್ಘಾದೇಶಕ್ಕೆ—ಮೃಡನಾ; ಗಂಗಾಂಬುಧಾರಾಜಟಿಲಟನಾ; ರಾಮನಾ (see s. S. 120); ಕಾಲಾಗ್ನಿರುದ್ರನೆನಿಸಿದುದು ತೋಳಬಾೞ್ (ತೋಳ ಬಾಳ್) ತೈಲಪನಾ.

ಖೇದಕ್ಕೆ—ಅಕ್ಕಟಾ ಮರುಳ್ಗಳ್ದಂಬಿಗಳೇಕೆ ಸಂಪಗೆಗಳೊಳ್ ಪಗೆಗೊಂಡುವೊ ನಿರ್ನಿಮಿತ್ತದಿಂ.

ಸಂಭ್ರಮಕ್ಕೆ—ಬೇಡ ಗಡಾ ಬೇಡ ಗಡಾ ನಿನಗಾತನೊಳ್ ಚಲಂ.

ವಿಧಿಯೊಳುಮುಂಟು—ಸತ್ಯಮಂ ನುಡಿ ಗಡಾ ನೀನಾತನೊಳ್.

ಸೂತ್ರಂ.

Such a lengthening of a vowel is optionally used in the midst of words, and when an Accusative (Singular) was followed by a Vowel, and also before ಪೋಲ್.

ಅವಿಶೇಷದಿನಾ ದೀರ್ಘ
ವ್ಯವಹೃತಿ ಶಬ್ದಾಂತರಾಳದೊಳ್ಪಕ್ಷದಿನು |
ದ್ಭವಿಕುಂ ದ್ವಿತೀಯೆಗಂ ಮುಂ
ದವತರಿಸಲೊಡಂ ಸ್ವರಪ್ರಪೂರ್ವಪದಂಗಳ್ || 118 ||

ಪದಚ್ಛೇದಂ.

ಅವಿಶೇಷದಿಂ ಆ ದೀರ್ಘವ್ಯವಹೃತಿ ಶಬ್ದಾಂತರಾಳದೊಳ್ ಪಕ್ಷದಿಂ ಉದ್ಭವಿಕುಂ; ದ್ವಿತೀಯೆಗಂ ಮುಂದೆ ಅವತರಿಸಲೊಡಂ ಸ್ವರಪ್ರಪೂರ್ವಪದಂಗಳ್.

ಯಥಾನ್ವಯಂ.

ಟೀಕು.

ಅವಿಶೇಷದಿಂ=ವಿಶೇಷವಲ್ಲದುದಱಿಂದೆ; ಆ ದೀರ್ಘವ್ಯವಹೃತಿ=ಆ ದೀರ್ಘವ್ಯವಹಾರಂ; ಶಬ್ದ=ಶಬ್ದದ; ಅಂತರಾಳದೊಳ್=ಮಧ್ಯದಲ್ಲಿ; ಪಕ್ಷದಿಂ=ಕೆಲಂಬರ ಪಕ್ಷದಿಂದೆ; ಉದ್ಭವಿಕುಂ=ಹುಟ್ಟುವದು; ದ್ವಿತೀಯೆಗಂ=ದ್ವಿತೀಯಾವಿಭಕ್ತಿಗೆಯುಂ; ಮುಂದೆ=ಮುಂದುಗಡೆಯಲ್ಲಿ; ಸ್ವರ=ಸ್ವರಂಗಳ್; ಪ್ರಪೂರ್ವ=ಆದಿಯಾದ; ಪದಂಗಳ್=ಪದಂಗಳ್; ಅವತರಿಸಲೊಡಂ=ಹುಟ್ಟಲೊಡನೆ ಆ ದೀರ್ಘವ್ಯವಹೃತಿ ಹುಟ್ಟುವದು.

ವೃತ್ತಿ.

ಆ ದೀರ್ಘಂ ಶಬ್ದಾಂತರಾಳದೊಳಂ ದ್ವಿತೀಯಾವಿಭಕ್ತಿಗೆ ಸ್ವರಂ ಪರಮಾಗೆಯುಂ ವಿಕಲ್ಪದಿನಕ್ಕುಂ.

ಪ್ರಯೋಗಂ.

ಶಬ್ದಾಂತರಾಳಕ್ಕೆ—ಇಂದೊಳಂ, ಇಂದೋಳಂ; ಆರೊಗಿಸಿದಂ, ಆರೋಗಿಸಿದಂ; ಎಣ್ಗೊಱಂ (ಎಣಗೊಱಂ), ಎಣ್ಗೋಱಂ (ಎಣ—); ಗೆಯುಂಗಂ, ಗೆಯಾಂಗಂ.

ದ್ವಿತೀಯೆಗೆ—ಕಲ್ಲನೇಱಿದಂ, ಕಲ್ಲಾನೇಱಿದಂ; ಬಿಲ್ಲನದಂ, ಬಿಲ್ಲಾನದಂ.—

ಎನಿತ್ತೆನಿತ್ತಂಬುಜಪತ್ರನೇತ್ರೆಯಾ
ಘನಸ್ತನಂಗಳ್ ಬಳೆಗುಂ ಕಿರಾತೆಯಾ |
ಅನಿತ್ತನಿತ್ತಂ ವನದೊಳನೇಚರಂ
ತನತ್ತು ಬಿಲ್ಲಾನದನೆತ್ತುಕೇಸುವಂ || ವಂಶಸ್ಥವೃತ್ತಂ ||

ಪೋಲ್ ಪರಮಾದಲ್ಲಿಯುಂ ದೀರ್ಘಮುಂಟು—ಈದ ಪುಲಿಯಾ ಪೋಲಿರ್ದ ಳೆಂದು, ಗುಣವರ್ಮನ ಹರಿವಂಶಪ್ರಯೋಗಂ.

ಸೂತ್ರ.

The terminations for the Locative are ಅಲ್ಲಿ and ಒಳ್ (joined to ದ or ನ in the Singular, Ss. 105; 106). Themes denoting Direction and ending in ಅ may remain in the Locative as they are, or receive ಅಲ್; such themes with final ಉ may also remain unchanged, or receive ಎ.

ಅಲ್ಲಿಯೊಳೆಂಬಿವು ಮಿಕ್ಕೆಡೆ
ಗೆಲ್ಲಂ ದಿಗ್ವಾಚಿಯಪ್ಪದಂತಕ್ಕಲ್ಮ |
ತ್ತಲ್ಲಿಯುದಂತಕ್ಕೆತ್ತಂ
ಬಲ್ಲರ ಮತದಿಂ ವಿಕಲ್ಪವಿಧಿ ಸಪ್ತಮಿಯೊಳ್ || 119 ||

ಪದಚ್ಛೇದಂ.

ಅಲ್ಲಿ ಒಳ್ ಎಂಬಿವು ಮಿಕ್ಕೆಡೆಗೆ ಎಲ್ಲಂ; ದಿಗ್ವಾಚಿ ಅಪ್ಪ ಅದಂತಕ್ಕೆ ಅಲ್, ಮತ್ತೆ ಅಲ್ಲಿ ಉದಂತಕ್ಕೆ ಎತ್ವಂ ಬಲ್ಲರ ಮತದಿಂ ವಿಕಲ್ಪವಿಧಿ ಸಪ್ತಮಿಯೊಳ್.

ಅನ್ವಯಂ.

ಸಪ್ತಮಿಯೊಳ್ ದಿಗ್ವಾಚಿ ಅಪ್ಪದಂತಕ್ಕೆ ಅಲ್, ಮತ್ತೆ ಅಲ್ಲಿ ಉದಂತಕ್ಕೆ ಎತ್ವಂ ಬಲ್ಲರ ಮತದಿಂ ವಿಕಲ್ಪವಿಧಿ; ಮಿಕ್ಕೆಡೆಗೆ ಎಲ್ಲಂ ಅಲ್ಲಿ ಒಳ್ ಎಂಬಿವು.

ಟೀಕು.

ಸಪ್ತಮಿಯೊಳ್=ಒಳ್ ಎಂದಾಗಿರ್ದ ಸಪ್ತಮೀವಿಭಕ್ತಿಯಲ್ಲಿ; ದಿಗ್ವಾಚಿಯಪ್ಪದಂತಕ್ಕೆ=ದಿಗ್ವಾಚಿಗಳಾದ ಅಕಾರಾಂತಕ್ಕೆ; ಅಲ್=ಅಲ್ ಎಂದಾಗುವದು; ಮತ್ತೆ=ಬಳಿಕಂ; ಅಲ್ಲಿ=ಆ ದಿಗ್ವಾಚಿಕಂಗಳಲ್ಲಿ; ಉದಂತಕ್ಕೆ=ಉಕಾರಾಂತಕ್ಕೆ; ಎತ್ವಂ=ಹ್ರಸ್ವದ ಎಕಾರವಾಗುವದು; ಬಲ್ಲರ ಮತದಿಂ=ಬಲ್ಲವರ ಮತದಿಂದೆ; ವಿಕಲ್ಪವಿಧಿ=ವಿಕಲ್ಪವಿಧಿಯಾಗುವದು; ಮಿಕ್ಕೆಡೆಗೆ=ದಿಗ್ವಾಚಿಕಂಗಳಲ್ಲದುಳಿದೆಡೆಗೆ; ಎಲ್ಲಂ=ಎಲ್ಲವುಂ; ಅಲ್ಲಿ=ಅಲ್ಲಿ ಎಂದು; ಒಳ್=ಒಳೆಂದು; ಎಂಬಿವು=ಎಂಬೀ ಎರಡು ರೂಪುಗಳ್ ಸಾಮಾನ್ಯದಿಂದೆಯಾಗುವವು.

ವೃತ್ತಿ.

ಅಲ್ಲಿ ಎಂದುಂ ಒಳ್ ಎಂದುಂ ಸಪ್ತಮಿಗೆ ಸಾಮಾನ್ಯದಿನಕ್ಕುಂ; ದಿಗ್ವಾಚಿ

ಯಪ್ಪಕಾರಾಂತದ ಮೇಲೆ ವಿಕಲ್ಪದಿಂದಲ್ ಅಕ್ಕುಂ, ಉಕಾರಾಂತದಿಗ್ವಾಚಿಕಂಗಳ್ಗೆತ್ತ ಮಕ್ಕುಂ.

ಪ್ರಯೋಗಂ.

ಒಳ್ ಅಲ್ಲಿ ಎಂಬವರ್ಕೆ—ಕೊಳದೊಳ್, ಬನದೊಳ್; ಕೊಳದಲ್ಲಿ, ಬನದಲ್ಲಿ; ಸಭೆಯೊಳ್, ಸಭೆಯಲ್ಲಿ; ಸಭೆಯೊಳ್ ನುಡಿದಂ ನವಮೇಘನಾದದಿಂ.

ಅಲ್ಲಿ ಇಲ್ಲಿ ಎಲ್ಲಿ ಉಲ್ಲಿ ಎಂದು, ಸ್ಥಳವಿಶೇಷದೊಳವಿೂ ಶಬ್ದವೊಳವು—ಸಿರಿ ನೆಲೆಗೊಂಡುದಲ್ಲಿ, ಮದನಂ ಮನೆಗಟ್ಟಿದನಲ್ಲಿ, ಅಲ್ಲಿಯ ಪೆಂಡಿರನಗ್ನಿ ಸುತ್ತಿದಂ.

ಪ್ರಥಮೆಗಂ ಸಪ್ತಮಿಗಮಲ್ ಎಂದೇಕರೂಪಮಕ್ಕುಂ (see S. 121).

ಅದಂತದ ವಿಕಲ್ಪದಲ್ಗೆ—ಪಡುವ, ಮೂಡ, ತೆಂಕ, ಬಡಗ, ಅತ್ತ, ಇತ್ತ, ಉತ್ತ, ಎತ್ತ=ಮೂಡಲ್, ಪಡುವಲ್, ತೆಂಕಲ್, ಬಡಗಲ್, ಅತ್ತಲ್, ಇತ್ತಲ್, ಉತ್ತಲ್, ಎತ್ತಲ್.

ಉತ್ಸಾಹಂ ಪಡುವ ಮೂಡ ತೆಂಕ ಬಡಗ ಪೊಡವಿಪತಿಗಳಿಲ್ಲೆಲೆಂತಲ್ಲು ನುಡಿದು ಗೆಲ್ದು. ಎತ್ತಿದ ಕಯ್ಯೊಳ್ ಮುತ್ತಿದನತ್ತಿತ್ತುತ್ತೆತ್ತಂ ಸಾರ್ವರಿನ್ನಹಿತರ್ಕಳ್.

ಮೂಡಲಿರ್ದ ಪರದೊಳಾತ್ತ ರಾಮನೊ ವಲ್ಲಭಮ್.

ಅತ್ತಲ್ ದೇವೇಂದ್ರಂ ಮ
ತ್ತಿತ್ತಲ್ ಭುಜಗೇಂದ್ರನುತ್ತಲಾಶಾಧಿಪರೊಳ್ | (—ರೞ್)
ಮುತ್ತಿರೆ ಭೇರಿಧ್ವನಿ ಪ
ರ್ವಿತ್ತೆತ್ತಲ್ಮಸಗಿ ಘೋಷಶಿಕ್ಷಾದಕ್ಷಂ || ಕಂದಂ ||

ಎತ್ತಕ್ಕೆ ವಿಕಲ್ಪಂ—ಒಳಗು, ಒಳಗೆ; ಪೊಱಗು, ಪೊಱಗೆ; ಪೆಱಗು, ಪೆಱಗೆ; ಮೇಗು, ಮೇಗೆ; ಕೆಳಗು, ಕೆಳಗೆ.

ಕವಿ ಪೊಱಗಿರೆ ಕೀಳೊಳಗಿರೆ
ಯವಿರಳವೋ ತುರಗಬಲವೊ [—ಮುಖವೊ] ನೃಪಮಂದಿರವೋ
|| ಕಂದಾರ್ಧಂ ||

ನಡುವೆಯೆಂಬಲ್ಲಿ ನಾವುವಱದಪ್ಪುದಾಗಿ ವತ್ತಂ ಪೊಕ್ಕದು.

ಸೂತ್ರಂ.

When Locative Themes (ಸ್ಥಾನವಾಚಿಗಳ್?), ಮುಂದು, ಪಿಂದು may become ಮುಂತೆ, ಪಿಂತೆ; ಮೇಲ್ becomes ಮೇಲೆ.

ಸವನಿಪುದು ಮುಂದು ಪಿಂದೆಂ
ಬಿವಱಂತ್ಯಕ್ಕಱ ವಿಕಲ್ಪದಿಂದೆ ತುಕಾರಂ |
ವ್ಯವಹರಿಪುದೆತ್ತವಿಧಿ ಬ
ಲ್ಲವರಿಂ ಮೇಲೆಂದು ಪೇೞ್ದ ಬೀೞಿಕ್ಕರಕಂ || 120 ||

ಪದಚ್ಛೇದಂ.

ಸವನಿಪುದು ಮುಂದು ಪಿಂದು ಎಂಬ ಇವಱ ಅಂತ್ಯಕ್ಕೆ, ಅಱ, ವಿಕಲ್ಪದಿಂದೆ ತುಕಾರಂ; ವ್ಯವಹರಿಪುದು ಎತ್ವವಿಧಿ ಬಲ್ಲವರಿಂ, ಮೇಲ್ ಎಂದು, ಪೇೞ್ವ ಬೞಿಕ್ಕರಕಂ.

ಅನ್ವಯಂ.

ಮುಂದು ಪಿಂದು ಎಂಬಿವಱ ಅಂತ್ಯಕ್ಕೆ ವಿಕಲ್ಪದಿಂದೆ ತುಕಾರಂ ಸವನಿಪುದು, ಅಱ! ಮೇಲ್ ಎಂದು, ಪೇೞ್ವ ಬೞಿಕ್ಕರಕಂ ಎತ್ವವಿಧಿ ಬಲ್ಲವರಿಂ ವ್ಯವಹರಿಪುದು.

ಟೀಕು.

ಮುಂದು=ಮುಂದು ಎಂದು; ಪಿಂದು=ಪಿಂದು ಎಂದು; ಎಂಬಿವಱ=ಎಂಬೀ ಶಬ್ದಂಗಳ; ಅಂತ್ಯಕ್ಕೆ=ತುದಿಯ ದುಕಾರಕ್ಕೆ; ವಿಕಲ್ಪದಿಂದೆ=ವಿಕಲ್ಪದಿಂದೆ; ತುಕಾರಂ=ತುತ್ವಂ; ಸವನಿಪುದು=ಪ್ರಾಪ್ತಿಸುವದು; ಅಱ=ತಿಳಿ; ಮೇಲೆಂದು ಪೇೞ್ವ ಬೞಿಕ್ಕರಕಂ=ಮೇಲ್ ಎಂದು ಪೇಳ್ವ ವ್ಯಂಜನಾಕ್ಷರಕ್ಕೆಯುಂ; ಎತ್ವವಿಧಿ=ಎಕಾರದ ವಿಧಿ; ಬಲ್ಲವರಿಂ=ಬಲ್ಲ ವಿದ್ವಾಂಸರಿಂದೆ; ವ್ಯವಹರಿಪುದು=ವ್ಯವಹರಿಸುವದು.

ವೃತ್ತಿ.

ಮುಂದು ಪಿಂದೆಂಬಿವಱಂತ್ಯಕ್ಕೆ ವಿಕಲ್ಪದಿಂ ತುಕಾರಾದೇಶಮಾಗಿ, ಪಿಂದಣಂ ತೆತ್ವಮಕ್ಕುಂ. ಮೇಲ್ ಎಂಬ ವ್ಯಂಜನಾಂತಕ್ಕಮೆತ್ವಮಕ್ಕುಂ.

ಪ್ರಯೋಗಂ.

ತುಕಾರಕ್ಕೆ—ಮುಂದು, ಮುಂತು; ಪಿಂದು, ಪಿಂತು=ಮುಂದೆ, ಮುಂತೆ; ಪಿಂದೆ ಪಿಂತೆ.

ಮೇಲೆಂಬುದರ್ಕೆ—ಆನೆಯ ಮೇಲೆಯುಮ್ ಆಳ ಮೇಲೆಯುಂ ಕುದುರೆಯ ಮೇಲೆಯುಂ ಪಱಿದುದೊಂದೆ ಗಜಂ ಭುವನೈಕರಾಮನಾ (S. 117).

ಸೂತ್ರಂ.

ಮೊದಲೆರಡು ವಿಭಕ್ತಿಯೊಳಂ
ಪೊದೞ್ಗುಮಲ್ಕಾಲವಾಚಿಯಂದಿಂದುಂದೆಂ |
ಬುದುಮೇಕರೂಪಮಾಗಿ
ರ್ಪುದು ಮೊದಲೆರಡುಂ ವಿಭಕ್ತಿಗಂ ಸಪ್ತಮಿಗಂ || 121 ||

The ಅಲ್ of the Locative (S. 119) appears also in the Nominative and Accusative Singular. Likewise the Themes of time ಅಂದು, ಇಂದು, ಉಂದು, ಎಂದು (S. 319) are the same in those three cases.

ಪದಚ್ಛೇದಂ.

ಮೊದಲ ಎರಡು ವಿಭಕ್ತಿಯೊಳಂ ಪೊದೞ್ಗುಂ ಅಲ್; ಕಾಲವಾಚಿಯ ಅಂದು ಇಂದು ಉಂದು ಎಂಬುದುಂ ಏಕರೂಪಂ ಆಗಿರ್ಪುದು ಮೊದಲ ಎರಡುಂ ವಿಭಕ್ತಿಗಂ ಸಪ್ತಮಿಗಂ.

### ಅನ್ವಯಂ.

ಅಲ್ ಮೊದಲ ಎರಡು ವಿಭಕ್ತಿಯೊಳಂ ಪೊದಱ್ಗುಂ; ಕಾಲವಾಚಿಯ ಅಂದು ಇಂದು ಉಂದು ಎಂಬುದುಂ ಮೊದಲ ಎರಡುಂ ವಿಭಕ್ತಿಗಂ ಸಪ್ತಮಿಗಂ ಏಕರೂಪಂ ಆಗಿರ್ಪುದು!

### ಟೀಕು.

ಅಲ್=ಸಪ್ತಮಿಗೆ ಬಂದ ಅಲ್ ಎಂಬುದು; ಮೊದಲ=ಆದಿಯ; ಎರಡು ವಿಭಕ್ತಿಯೊಳಂ=ಪ್ರಥಮೆ ದ್ವಿತೀಯೆ ಎಂಬೆರಡು ವಿಭಕ್ತಿಯೊಳಂ; ಪೊದಱ್ಗುಂ=ಪೊರ್ದುಗೆಯಪ್ಪುದು; ಕಾಲವಾಚಿಯ=ಕಾಲವಾಚಿಶಬ್ದದ; ಅಂದು=ಅಂದೆಂದು; ಇಂದು=ಇಂದೆಂದು; ಉಂದು=ಉಂದೆಂದು; ಎಂಬುದುಂ=ಎಂಬ ರೂಪುಂ; ಮೊದಲೆರಡುಂ ವಿಭಕ್ತಿಗಂ=ಆದಿಯ ಎರಡೂ ವಿಭಕ್ತಿಗೆಯುಂ; ಸಪ್ತಮಿಗಂ=ಸಪ್ತಮೀವಿಭಕ್ತಿಗೆಯುಂ; ಏಕರೂಪಂ=ಒಂದೆ ರೂಪಂ; ಆಗಿರ್ಪುದು=ಆಗಿರ್ಪುದು.

### ವೃತ್ತಿ.

ಸಪ್ತಮಿಗೆ ಬಂದ ಅಲ್ ಎಂಬುದು ಪ್ರಥಮೆಗಂ ದ್ವಿತೀಯೆಗಂ ಪತ್ತುಗುಂ; ಕಾಲವಾಚಕಂಗಳಪ್ಪ ಅಂದು ಇಂದು ಉಂದು ಎಂದು ಎಂಬ ಶಬ್ದಂಗಳಲುವಿನಂತೆ ಪ್ರಥಮೆಗಂ ದ್ವಿತೀಯೆಗಂ ಸಪ್ತಮಿಗಂ ಸರಿ.

### ಪ್ರಯೋಗಂ.

ಪ್ರಥಮೆ ದ್ವಿತೀಯೆ ಸಪ್ತಮಿಗಳಲುವಿಂಗೆ—ಮೂಡಲ್, ಮೂಡಲ್, ಮೂಡಣಿಂ, ಮೂಡಣ್ಗೆ, ಮೂಡಣತ್ತಣಿಂ, ಮೂಡಣ, ಮೂಡಲ್.

ಅಂದು ಮೊದಲಾದುವರ್ಕೆ—ಅಂದು, ಅಂದು, ಅಂದಿಂ, ಅಂದಿಂಗೆ, ಅಂದಿನತ್ತಣಿಂ, ಅಂದಿನ, ಅಂದು. ಉೞಿದುವರ್ಕೆ ಈ ಪರಿ.

### ಸೂತ್ರಂ.

ಪುದಿಗುಮದಂತಕೆ ಪುಲ್ಲಿಂ
ಗದ ವೋಲ್ ಕಿಱಿದೆಡೆಗಳಲ್ಲಿಯೆಲ್ಲಂ ಸ್ತ್ರೀಲಿಂ |
ಗದೊಳಂ ಪುಂನಪ್ಪಿನೊಳಂ
ಪುದಿಗುಂ ತಿಳಿ ಬಹುಳಮಾದುದಾಹರಣಂಗಳಿಂ || 122a ||

There are Feminine and Neuter themes (these when used as Masculine or Feminine) with final ಅ which are declined, also in the Singular, like Masculines ending in ಅ. (cf. Ss. 98; 101; 103).

### ಪದಚ್ಛೇದಂ.

ಪುದಿಗುಂ ಅದಂತಕೆ ಪುಲ್ಲಿಂಗದ ವೋಲ್ ಕಿಱಿದು ಎಡೆಗಳಲ್ಲಿ ಎಲ್ಲಂ ಸ್ತ್ರೀಲಿಂಗದೊಳಂ; ಪುಂನಪ್ಪಿನೊಳಂ ಪುದಿಗುಂ; ತಿಳಿ ಬಹುಳಂ ಆದ ಉದಾಹರಣೆಗಳಿಂ!

### ಅನ್ವಯಂ.

ಸ್ತ್ರೀಲಿಂಗದೊಳಂ ಕಿಱಿದೆಡೆಗಳಲ್ಲಿ ಅದಂತಕೆ ಪುಲ್ಲಿಂಗದ ಪೋಲ್ ಎಲ್ಲಂ ಪುದಿಗುಂ; ಪುಂನಪ್ಸಿನೊಳಂ ಪುದಿಗುಂ; ಬಹುಳಂ ಆದುದಾಹರಣೆಗಳಿಂ ತಿಳಿ!

### ಟೀಕು.

ಸ್ತ್ರೀಲಿಂಗದೊಳಂ=ಸ್ತ್ರೀಲಿಂಗದಲ್ಲಿಯುಂ; ಕಿಱಿದೆಡೆಗಳಲ್ಲಿ=ಕಿಱಿದು ತಾಣಂಗಳಲ್ಲಿ; ಅದಂತಕೆ=ಅಕಾರಾಂತಕ್ಕೆ; ಪುಲ್ಲಿಂಗದ ಪೋಲ್=ಅಕಾರಾಂತಪುಲ್ಲಿಂಗದ ಹಾಂಗೆ; ಎಲ್ಲಂ=ಸಪ್ತವಿಭಕ್ತಿಗಳಾಗಮಂಗಳೆಲ್ಲಂ; ಪುದಿಗುಂ=ಪ್ರವೇಶವಾಗುವದು; ಪುಂನಪ್ಸಿನೊಳಂ=ಗಂಡಾದ ನಪುಂಸಕಲಿಂಗದಲ್ಲಿಯುಂ ಕಿಱಿದು ತಾಣಂಗಳಲ್ಲಿ ಅಕಾರಾಂತಕ್ಕೆ, ಅಕಾರಾಂತಪುಲ್ಲಿಂಗದ ಹಾಂಗೆ, ಸಪ್ತವಿಭಕ್ತಿಗಳೆಲ್ಲಂ; ಪುದಿಗುಂ=ಪೊರ್ದುಯಾಗುವದು; ಬಹುಳಂ=ಬಹುಳಂ; ಆದುದಾಹರಣೆಗಳಿಂ=ಆದುದಾಹರಣೆಗಳಿಂದೆ; ತಿಳಿ=ಅಱಿ.

### ವೃತ್ತಿ.

ಸ್ತ್ರೀಲಿಂಗದೊಳಂ ಕಿಱಿದೆಡೆಗಳಲ್ಲಿ ಅಕಾರಾಂತಕ್ಕೆ, ಪುಲ್ಲಿಂಗದ ಹಾಂಗೆ, ಸಪ್ತವಿಭಕ್ತಿಗಳೆಲ್ಲಂ ಪತ್ತುಗುಂ; ಗಂಡಾದ ನಪುಂಸಕಲಿಂಗದಲ್ಲಿಯುಂ ಕಿಱಿದು ಶಬ್ದಂಗಳಲ್ಲಿ, ಅಕಾರಾಂತಪುಲ್ಲಿಂಗದಂತಿರೆ, ಸಪ್ತ ವಿಭಕ್ತಿಗಳೆಲ್ಲಂ ಪುದಿಗುಂ. ಇವಂ ಬಹುಳಮಾದುದಾಹರಣೆಗಳಿಂ ತಿಳಿವುದು.

### ಪ್ರಯೋಗಂ.

ಅದಂತಸ್ತ್ರೀಲಿಂಗಕ್ಕೆ—ಅಕ್ಕಂ, ಅಕ್ಕನಂ, ಅಕ್ಕನಿಂ, ಅಕ್ಕಂಗೆ, ಅಕ್ಕನತ್ತಣಿಂ, ಅಕ್ಕನ, ಅಕ್ಕನೊಳ್. ಅಪ್ಪಂ, ಅಮ್ಮಂ ಎಂಬಿವರ್ಕಮಂತಱಿವುದು.

ಗಂಡಾದ ಅಕಾರಾಂತನಪುಂಸಕಕ್ಕೆ—ಹರಿಣಂ, ಹರಿಣನಂ, ಹರಿಣನಿಂ, ಹರಿಣಂಗೆ, ಹರಿಣನತ್ತಣಿಂ, ಹರಿಣನ, ಹರಿಣನೊಳ್. ಕೋಣಂ, ಹಂಗಂ, ಹಸುಬಂ, ಸರ್ಪಂ, ಗರುಡಂ, ಕೂರ್ಮಂ, ಕಮಠಂ, ವೃಷಭಂ, ಬಸವಂ ಎಂಬಿವಾದಿಯಾದುವರ್ಕಮಿಂತಱಿವುದು.

ಕಿಱಿದೆಡೆಗಳಲ್ಲಿ ಎಂಬುದಱಿಂ ಭೃಂಗ, ತುರಂಗ, ಹಯ, ಗಜ ಮೊದಲಾದ ಶಬ್ದಂಗಳ್ಗೆ ನಪುಂಸಕರೂಪಮೆ ಪತ್ತುಗುಂ—ಭೃಂಗದಿಂ, ತುರಂಗಕ್ಕೆ, ಹಯದತ್ತಣಿಂ, ಗಜದ.

ವರಾಹಶಬ್ದದೊಳ್ವಿಕಲ್ಪಂ—ವರಾಹದಿಂ, ವರಾಹನಿಂ; ವರಾಹಂಗೆ, ವರಾಹಕ್ಕೆ ಎಂಬಂತೆ.

ಹೆಣ್ಣಾದೊಡಂ ಗಂಡಾದೊಡಂ ಹಂಗಂ ಹಸುಬಂ ಸರ್ಪನೆಂಬಿವಾದಿಯಾದು

ವರ್ಕೆ ಪುಲ್ಲಿಂಗದಂತೆ ರೂಪು ಪತ್ತುಗುಂ—ಹಂಗನಂ, ಹಸುಬನಿಂ, ಸರ್ಪಂಗೆ, ಗರುಡನತ್ತಣಿಂ ಎಂಬಂತಱಿವುದು.

ಅನುಕ್ತಸೂತ್ರಂ.[1)]

A Canarese Conjunction (ಉಮುವಿಧಿ) which is affixed (also) to the terminations, is ಉಂ, or ಅಂ. In the Accusative it is inserted, exceptionally, between the augment and the termination. For the Genitive it is not used. (cf. Ss. 145; 313).

ಅಮುಮೆಂದುಸಿರ್ವ ಸಮುಚ್ಚಯ
ದುಮುವಿಧಿ ನಿರುತಂ ದ್ವಿತೀಯೆಯೊಳ್ ಪೊಕ್ಕಿರ್ಕುಂ |
ಸಮನಿಸವೆಂದುಂ ಷಷ್ಠಿಯೊ
ಳಮುಮುವು ಮಿಕ್ಕಿನ ವಿಭಕ್ತಿಗಳ ಮೇಲಿರ್ಕುಂ || 122b ||

ಪದಚ್ಛೇದಂ.

ಅಂ ಉಂ ಎಂದು ಉಸಿರ್ವ ಸಮುಚ್ಚಯದ ಉಮುವಿಧಿ ನಿರುತಂ ದ್ವಿತೀಯೆಯ ಒಳ ಪೊಕ್ಕು ಇರ್ಕುಂ; ಸಮನಿಸವು ಎಂದುಂ ಷಷ್ಠಿಯೊಳ್ ಅಂ ಉಂ ಅವು; ಮಿಕ್ಕಿನ ವಿಭಕ್ತಿಗಳ ಮೇಲೆ ಇರ್ಕುಂ.

ಅನ್ವಯಂ.

ಅಂ ಉಂ ಎಂದು ಉಸಿರ್ವ ಸಮುಚ್ಚಯದ ಉಮುವಿಧಿ ನಿರುತಂ ದ್ವಿತೀಯೆಯ ಒಳ ಪೊಕ್ಕು ಇರ್ಕುಂ; ಷಷ್ಠಿಯೊಳ್ ಎಂದುಂ ಅಂ ಉಂ ಅವು ಸಮನಿಸವು; ಮಿಕ್ಕಿನ ವಿಭಕ್ತಿಗಳ ಮೇಲೆ ಇರ್ಕುಂ.

ಟೀಕು.

ಅಂ=ಅಂ ಎಂದು; ಉಂ=ಉಂ ಎಂದು; ಉಸಿರ್ವ=ಪೇಳ್ವ; ಸಮುಚ್ಚಯದ=ಸಮುಚ್ಚಯಾರ್ಥದ; ಉಮುವಿಧಿ=ಉಂಕಾರವಿಧಿ; ನಿರುತಂ=ನಿಶ್ಚಯವಾಗಿ; ದ್ವಿತೀಯೆಯ=ದ್ವಿತೀಯಾವಿಭಕ್ತಿಯ; ಒಳ ಪೊಕ್ಕು=ಒಳಗಂ ಪೊಕ್ಕು; ಇರ್ಕುಂ=ಇರ್ಪುದು; ಷಷ್ಠಿಯೊಳ್=ಷಷ್ಠೀವಿಭಕ್ತಿಯಲ್ಲಿ; ಎಂದುಂ=ಆವಾಗಳುಂ; ಅಂ=ಅಂ ಎಂಬ; ಉಂ=ಉಂ ಎಂಬ; ಅವು=ಅವು; ಸಮನಿಸವು=ಪ್ರಾಪ್ತಿಸವು; ಮಿಕ್ಕಿನ=ಉಳಿದ; ವಿಭಕ್ತಿಗಳ=ಪ್ರತ್ಯಯಂಗಳ; ಮೇಲೆ=ಅಗ್ರದಲ್ಲಿ; ಇರ್ಕುಂ=ಇರ್ಪುವು.

ವೃತ್ತಿ.

ಅಮ್ ಉಮ್ ಎಂದು ಪೇೞ್ದ ಸಮುಚ್ಚಯದ ಉಂ ಎಂಬುದು ದ್ವಿತೀಯೆಯ ನಡುವೆ ಪೊಕ್ಕಿರ್ಕುಂ; ಷಷ್ಠಿಯೊಳ್ ಸಮುಚ್ಚಯಂ ಪತ್ತದು; ಅಮ್ ಉಂಗಳ್ಮಿಕ್ಕ ವಿಭಕ್ತಿಗಳ ಮೇಲೆಯನುರೂಪಮಾಗಿ ಪತ್ತುಗುಂ.

1) i. e. a Sûtra not uttered by the author himself; in our best manuscript and M. B. however, this remark is not found. We have counted it as 122b. Another ಅನುಕ್ತಂ is 251b.

ಪ್ರಯೋಗಂ.

ದ್ವಿತೀಯೆಯೊಳಗಣ ಅಮುವಿಂಗೆ—ಅವರುಮಮ್ ಅಂತಕನೊರ್ವನೆಯೆಸಗಿ ವಿ ನೋಡಲ್; ಒಂದೆಡೆಯೊಳೆ ಕಟ್ಟುವುದು ಪುಲಿಯುಮಂ ಕಪಿಲೆಯುಮಂ. (ಕವಿ-)

ಮಿಕ್ಕ ವಿಭಕ್ತಿಗಳ ಮೇಲಣ ಸಮುಚ್ಚಯಕ್ಕೆ—ನರನುಂ, ನರನಂದನನುಂ, ಗುರುವುಂ; ಕಾಲಿಂದೆಯುಂ ಕಯ್ಯಿಂದೆಯುಂ ಘಟ್ಟಿಸಿದಂ.

ಚತುರ್ಥಿಯೊಳೆರಡುಂ ಪತ್ತುಗುಂ—ದ್ರೋಣಂಗಂ ನಿನಗಂ ಬಿಲ್ಜಾಣ್ಕೆಯದು ಸಕ್ಕಸಮೆ; ಪಂಚಿಸುದವಂಗೆಯುಂ ನಿನಗೆಯುಂ ಸಹಜಂ ಬಿಡಿಸಲ್ಕೆ ಬರ್ಕುಮೆ; ಜಾದಿಯತ್ತಣಿಂದೆಯುಂ ಕೇದಗೆಯತ್ತಣಿಂದೆಯುಂ ಕಂಪು ಬಂದುದು.

ಸಪ್ತಮಿಗೆ ಅಮ್ ಪತ್ತುವುದು—ಚಲದೊಳಂ ಆಚಾರದೊಳಂ ಕಲಿತನದೊಳಂ.

ಅಲ್ಲಿಯೆಂಬುದಱ ಮೇಲೆ ಉಂ ಪತ್ತುಗುಂ—ಅಲ್ಲಿಯುಂ ಇಲ್ಲಿಯುಂ ಎಲ್ಲಿಯುಂ ನರಂ.

ಸೂತ್ರಂ.

Regarding the Vocative (ಆಮಂತ್ರಣಂ, ಸಂಬುದ್ಧಿ) Singular the termination of the Nominative (wherever it occurs, see S. 105) is merely dropped, or, afterwards, lengthening may be used too.

ಎಲ್ಲಿಯುಮಾಮಂತ್ರಣದೊಳ್
ಬಲ್ಲರ್ಪ್ರಥಮೈಕವಚನಮಂ ಲೋಪಿಸುವರ್ |
ನಿಲ್ಲದೆ ವಿಕಲ್ಪಮುಖದಿಂ
ಸೊಲ್ಲಿಸುವರ್ ಹ್ರಸ್ವದೀರ್ಘಕಾಕುಗಳೆರಡಂ || 123 ||

ಪದಚ್ಛೇದಂ.

ಎಲ್ಲಿಯುಂ ಆಮಂತ್ರಣದೊಳ್ ಬಲ್ಲರ್ ಪ್ರಥಮೈಕವಚನಮಂ ಲೋಪಿಸುವರ್; ನಿಲ್ಲದೆ, ವಿಕಲ್ಪಮುಖದಿಂ ಸೊಲ್ಲಿಸುವರ್ ಹ್ರಸ್ವದೀರ್ಘಕಾಕುಗಳ್ (-ಗಳ) ಎರಡಂ.

ಅನ್ವಯಂ.

ಆಮಂತ್ರಣದೊಳ್ ಎಲ್ಲಿಯುಂ ಬಲ್ಲರ್ ಪ್ರಥಮೈಕವಚನಮಂ ಲೋಪಿಸುವರ್; ನಿಲ್ಲದೆ, ವಿಕಲ್ಪಮುಖದಿಂ ಹ್ರಸ್ವದೀರ್ಘಕಾಕುಗಳ್ ಎರಡಂ ಸೊಲ್ಲಿಸುವರ್.

ಟೀಕು.

ಆಮಂತ್ರಣದೊಳ್=ಸಂಬುದ್ಧಿಯಲ್ಲಿ; ಎಲ್ಲಿಯುಂ=ಆವೆಡೆಯಲ್ಲಿಯುಂ; ಬಲ್ಲರ್=ಬಲ್ಲ ವಿದ್ವಾಂಸರ್, ಪ್ರಥಮೈಕವಚನಮಂ=ಪ್ರಥಮಾವಿಭಕ್ತಿಯ ಏಕವಚನಮಂ; ಲೋಪಿಸುವರ್=ಲೋಪಮಂ ಮಾಡುವರ್; ನಿಲ್ಲದೆ=ತಡೆಯದೆ; ವಿಕಲ್ಪಮುಖದಿಂ=ವಿಕಲ್ಪಮುಖದಿಂದೆ; ಹ್ರಸ್ವದೀರ್ಘಕಾಕುಗಳ್=ಹ್ರಸ್ವದೀರ್ಘಕಾಕುಗಳ್; ಎರಡಂ=ಎರಡಂ; ಸೊಲ್ಲಿಸುವರ್=ಪೇೞ್ವರ್.

ವೃತ್ತಿ.

ಆಮಂತ್ರಣದೊಳ್ ಸ್ವರಾಂತ ವ್ಯಂಜನಾಂತಂಗಳ ಪ್ರಥಮೈಕವಚನಕ್ಕೆಲ್ಲಿಯುಂ ಲೋಪಂ; ಆ ಸಂಬುದ್ಧಿಯೊಳ್ ಹ್ರಸ್ವದೀರ್ಘಮೆಂಬೆರಡು ಕಾಕುಗಳಂ ವಿಕಲ್ಪದಿಂ ಪೇೞ್ಗುರ್.

ಪ್ರಯೋಗಂ.

ಆಮಂತ್ರಣಕ್ಕೆ--ದೇವ, ಬಿನ್ನಪಂ ಎಸೆಯದಿರ್! ಕುಸುಮಾಯುಧ, ಕೇಳ್! ಮಾಧವ!

ಹ್ರಸ್ವಕಾಕುವಿಂಗೆ—ಎಲೆ, ಗಣಪ! ಎಂಬ ಮಾತು ಬಂದಪ್ಪುದೀಗಳ್. ಎಲೆ, ಎಲೆ, ರಂಭೆ! ಊರ್ವಶಿ! ತಿಲೋತ್ತಮೆ! ಮೇನಕಿ! ಮಂಜುಘೋಷಿ!

ದೀರ್ಘಕಾಕುವಿಂಗೆ—ಸುಖಸಂಪದಮಂ ಮಾೞ್ಪುದೆನಗೆ, ಪರಮಜಿನೇಂದ್ರಾ! ತಡಮಂತೇಂ ಕಾರಣಂ, ಕುರುಪತೀ, ಎಮಗೀಗಳ್? ಎಲೆ, ಕೋಗಿಲೆಯೇ! ಎಲೆ, ತಂಬೆಲರೇ! (see next S.)

ಸೂತ್ರಂ.

ಅವಿಶೇಷದಿಂದದಂತ
ಕ್ಕೆವರ್ಣಮೊದವುವುದೆವರ್ಣಮೊದವಿದದಂತ |
ಕ್ಕವತರಿಕುಂ ಬಿಂದುವಬಿಂ
ದುವಾಗಿ ಬಹುವಚನದರ್ವನಡವ್ರುದೆವರ್ಣಂ || 124 ||

Further ಎ, ಏ may be joined to denote the Vocative; such being the case, in the Singular of themes with final ಅ Bindu (S. 104) occurs between, and in the Vocative Plural the ಅರ್ (S. 98).

ಪದಚ್ಛೇದಂ.

ಅವಿಶೇಷದಿಂದೆ ಅದಂತಕ್ಕೆ ಎವರ್ಣಂ ಒದವುವುದು; ಎವರ್ಣಂ ಒದವಿದ ಅದಂತಕ್ಕೆ ಅವತರಿಕುಂ ಬಿಂದು; ಅಬಿಂದುವಾಗಿ ಬಹುವಚನದ ಅರ್ವಂ ಅಡವ್ರುದು ಎವರ್ಣಂ.

ಅನ್ವಯಂ.

ಅವಿಶೇಷದಿಂದೆ ಅದಂತಕ್ಕೆ ಎವರ್ಣಂ ಒದವುವುದು; ಎವರ್ಣಂ ಒದವಿದದಂತಕ್ಕೆ ಬಿಂದು ಅವತರಿಕುಂ; ಅಬಿಂದುವಾಗಿ ಎವರ್ಣಂ ಬಹುವಚನದ ಅರ್ವಂ ಅಡವ್ರುದು.

ಟೀಕು.

ಇಲ್ಲಿ ಆಮಂತ್ರಣದೊಳ್ ಎಂಬುದನುವರ್ತನೆ—ಆಮಂತ್ರಣದೊಳ್=ಸಂಬುದ್ಧಿಯಲ್ಲಿ; ಅವಿಶೇಷದಿಂ=ವಿಶೇಷವಲ್ಲದುದಱಿಂದೆ; ಅದಂತಕ್ಕೆ=ಅಕಾರಾಂತಶಬ್ದಕ್ಕೆ; ಎವರ್ಣಂ=ಎ ಏ ಎಂಬ ಸವರ್ಣಂ; ಒದವುವುದು=ಪ್ರಾಪ್ತಿಸುವುದು; ಎವರ್ಣಂ=ಎ ಏ ಎಂಬ ಸವರ್ಣಂ; ಒದವಿದ=ಪ್ರಾಪ್ತಿಸಿದ; ಅದಂತಕ್ಕೆ=ಅಕಾರಾಂತಕ್ಕೆ; ಬಿಂದು=ಸೊನ್ನೆ; ಅವತರಿಕುಂ=ಹುಟ್ಟುವದು; ಅಬಿಂದುವಾಗಿ=

ಬಿಂದುವಿಲ್ಲದುದಾಗಿ; ಎವರ್ಣಂ=ಎ ಏ ಎಂಬ ಸವರ್ಣಂ; ಬಹುವಚನದ=ಬಹುವಚನದ; ಅವರ್ಣಂ=ಅರಾಗಮುವಂ; ಅಡರ್ವುದು=ಪತ್ತುವುದು.

ವೃತ್ತಿ.

ಲಿಂಗತ್ರಯಮೆನ್ನದೆ, ವಚನತ್ರಯಮೆನ್ನದೆ, ಸ್ವರಾಂತ ವ್ಯಂಜನಾಂತಂಗಳೆನ್ನದೆ, ಸಾಮಾನ್ಯದಿಂ ಸಂಬೋಧನೆಯ ಕಡೆಯೊಳ್ಪಿಕಲ್ಪದಿಂ ಎ ಏ ಎಂಬಿವಕ್ಕುಂ; ಅಕಾರಾಂತದ ಮೇಲೆ ಎ ಏ ಎಂಬಿವು ಪರವಾಗೆ, ನಡುವೆ ಬಿಂದುವಕ್ಕುಂ; ಬಿಂದುವಿಲ್ಲದೆ, ಬಹುವಚನದರ್ವಿನ ಮೇಲೆ ಎ ಏ ಎಂಬಿವಕ್ಕುಂ.

ಪ್ರಯೋಗಂ.

ಸ್ವರಾಂತ ವ್ಯಂಜನಾಂತಂಗಳ್ಗೆ—ಅಳಿಕುಳನೀಳಕುಂತಳೆಯೆ! ಕೋಕಿಲನಾದೆಯೆ! ಹಂಸಯಾನೆಯೆ! ಮನುವೇ! ಎಳ ಮಾವೇ! ತಳಿರುಯ್ಯಲೇ!

ಬಿಂದುವಿಂಗೆ—ಚಂದ್ರನೆ! ಕೊಳನೆ! ನಂದನವೇ! ಲತಾಭವನವೇ!

ಅರುವಿನ ಮೇಲಣೇವರ್ಣಕ್ಕೆ—ಭಟ್ಟರೆ! ದೇವರೆ!

ಏಕವಚನದೊಳೆತ್ವಂ ವಿಕಲ್ಪಂ—ಎಲೆ, ಅಭಿಮನ್ಯು! ಎಲೆ, ಅಭಿಮನ್ಯುವೆ! ಅಭಿಮನ್ಯೂ ಎಂದುಮುಂಟು. ಎಲೆ, ತುಂಬಿ! ಎಲೆ, ತುಂಬಿಯೆ!

ಸೂತ್ರಂ.

Further to express the Vocative Dual or Plural ಇರ is joined to the ಗಳ್ or ಕಳ್ (S. 101), and also to the ಅರ್ (S. 98). In addressing a person the verb may be put in the Plural, and to the 2nd person Singular of the Imperative (S. 230) ಅ may be joined.

ಪಿರಿದುಂ ದ್ವಿತ್ವಬಹುತ್ವಂ<br>
ಬರೆ ಗಳ್ಕಳ್ಗುಂಟಿರಾಗಮುಂ ಬಹುವಚನ |<br>
ಸ್ಫುರಿತಕ್ರಿಯೆಗೇಕತೆ ನಿಜ<br>
ಪರಿಣತೆ ಮೇಣ್ಧಾತುಗೇಕವಚನದೊಳತ್ವಂ || 125 ||

ಪದಚ್ಛೇದಂ.

ಪಿರಿದುಂ ದ್ವಿತ್ವಬಹುತ್ವಂ ಬರೆ, ಗಳ್ಕಳ್ಗೆ ಉಂಟು ಇರಾಗಮುಂ; ಬಹುವಚನಸ್ಫುರಿತಕ್ರಿಯೆಗೆ ಏಕತೆ; ನಿಜ ಪರಿಣತೆ, ಮೇಣ್ ಧಾತುಗೆ ಏಕವಚನದೊಳ್ ಅತ್ವಂ.

ಅನ್ವಯಂ.

ಪಿರಿದುಂ ದ್ವಿತ್ವಬಹುತ್ವಂ ಬರೆ, ಗಳ್ಕಳ್ಗೆ ಇರಾಗಮುಂ ಉಂಟು; ಬಹುವಚನಸ್ಫುರಿತಕ್ರಿಯೆಗೆ ಏಕತೆ; ಧಾತುಗೆ ಏಕವಚನದೊಳ್ ನಿಜಪರಿಣತೆ, ಮೇಣ್ ಅತ್ವಂ.

ಟೀಕು.

ಇಲ್ಲಿ ಅನುವರ್ತನೆ—ಆಮಂತ್ರಣದೊಳ್ ಪಿರಿದುಂ=ವಿಶೇಷವಾಗಿ; ದ್ವಿತ್ವಬಹುತ್ವಂ=ದ್ವಿವಚನ

ಬಹುವಚನಂಗಳ್; ಬರೆ=ಬರೆ; ಗಳ್ಕಳ್ಗೆ=ಗಳಾಗಮ ಕಳಾಗಮಂಗಳ್ಗೆ; ಇರಾಗಮಂ=ಇರ ಎಂಬಾಗಮಂ; ಉಂಟು=ಉಂಟಾಗಿರ್ಪುದು; ಬಹುವಚನ=ಬಹುವಚನದಲ್ಲಿ; ಸ್ಫುರಿತ=ಪ್ರಕಾಶಿಸಲ್ಪಟ್ಟ; ಕ್ರಿಯೆಗೆ=ಕ್ರಿಯೆಗೆ; ಏಕತೆ=ಏಕವಚನಂ ಉಂಟಾಗಿರ್ಪುದು; ಧಾತುಗೆ=ಧಾತುಗಳ್ಗೆ; ಏಕವಚನದೊಳ್=ಏಕವಚನದಲ್ಲಿ; ನಿಜ ಪರಿಣತೆ=ಇರ್ದ ಹಾಂಗೆ ಪರಿಣಮಿಸುವುದು ಉಂಟಾಗಿರ್ಪುದು; ಮೇಣ್=ವಿಕಲ್ಪದಿಂದೆ; ಅತ್ವಂ=ಅಕಾರಂ ಉಂಟಾಗಿರ್ಪುದು.

ವೃತ್ತಿ.

ಆಮನ್ತ್ರಣದೊಳ್ ದ್ವಿವಚನ ಬಹುವಚನಂಗಳಾದ ಗಳ್ಗಂ ಕಳ್ಗಂ ಇರಾಗಮಮುಂಟು; ಪಿರಿದುವೆಂಬುದಱಿಂದರುವಿನ ಮೇಲೆಯುಮುಂಟು. ಪಿರಿದುವೆಂಬ ಪ್ರಚುರಗ್ರಹಣದಿಂ ಗಳ್ ಎಂಬುದಱ ಮೇಲೆ ಆ ಇರಾಗಮಂ ಕೆಱೆದೆಡೆಯೊಳ್ಕಾಣ್ದುದು. ಬಹುವಚನಕ್ರಿಯೆಯೊಳೆ ಏಕವಚನಮುಂಟು. ನಿಜ ಧಾತುವೇಕವಚನದೊಳಿರ್ದಂತೆ ಸಲ್ಗುಂ. ವಿಕಲ್ಪದಿನಾ ಧಾತುವತ್ವಮುಂ ಪಡೆಗುಂ.

ಪ್ರಯೋಗಂ.

ಗಳ್ಗೆ ಇರಾಗಮಂ—ಸುರ-ತರು-ನಂದನಂಗಳಿರ! ದೆಸೆಗಳಿರ! ಮುಗಿಲ್ಗಳಿರ! (s. S. 90). ಸ್ತ್ರೀಪುರುಷವಾಚಕದೊಳಮದುವೆ.

ಕಳ್ಗೆ—ದೇವಿಯರ್ಕಳಿರ! ಬುಧರ್ಕಳಿರ!

ಅರ್ಗೆ—ನಂಟರಿರ! ನಲ್ಲರಿರ! ದೇವಿಯರಿರ!

ಕೆಱೆದೆಡೆಯೊಳಿಲ್ಲ—ಜಳಧಿದ್ವೀಪಾಂತರಾಳಂಗಳನಿರದೆ ನೀಂ ಪೋಗಿಸಿಮುಗ್ರಾರಿಗಳ್!

ಬಹುವಚನಕ್ರಿಯೆಯೊಳೇಕವಚನಕ್ಕೆ—ವಿಹಂಗಮಿದೆಂದೆ [—ಮಿದಿಂದೆ M. A.;—ಮದಿಂದೆ M. B.] ಕಬ್ಬಮಂ ನೀಮೆಳಿಪಿರ್![1] ದೇವಾಸುರಮಂ ಕೇಳಿರೆ, ದೇವ! ಅಱಿಯಿರೆ ನೀಮುಮಾಮುಮೊಡನೋದಿದೆವೆಂಬುದನಂಣ?

ನಿಜಧಾತುಗೆ—(S. 230)—ಪಾಡೆಲೆ, ತುಂಬಿ! ಬಗ್ಗಿಸಲೆ, ಕೋಗಿಲೆ! ತೀಡೆಲೆ, ಗಂಧವಾಹ!

ಧಾತುವಿನತ್ವಕ್ಕೆ-ಬಾರ ಮರಾಳಿಕಾಗಮನೆ! ನೋಡ, ಚಕೋರವಿಲೋಲನೇತ್ರೆ! ನಿಂ
ದಾರಯ! ಪೀವರಸ್ತನನಿತಂಬಭರಾಲಸೆ, ಕೇಳ! ಕಾಮಕಾ
ಳೋರಗಕೇಶಪಾಶೆ, ಎನಗುತ್ತರಮಂ ಕುಡ! ಚಾರುವೇಣುವೀ
ಣಾರವೆ, ನೀನಾರ ಮಗಳೆಲ್ಲಿಗೆ ಪೋದಪಿಯಾವುದಾಶ್ರಯಂ?

|| ಉತ್ಪಲಮಾಲಿಕಾವೃತ್ತಂ ||[2]

1) ಕಬ್ಬನಿಮೆಳಿ—M. A. 2) Four times: — ◡◡ | — ◡ — | ◡◡◡ | — ◡◡ | — ◡◡ | — ◡ — | ◡ — ||

ಸೂತ್ರಂ.

By the Nominative are expressed the specification of things (ಲಿಂಗಂ), their property (ಅರ್ಥಂ), number (ವಚನಂ) and accosting (ಸಂಬೋಧನೆ, cf. note on page 155). In a sentence it forms the agent or Subject (ಕರ್ತೃ), whereas the Accusative forms the object (ಕರ್ಮಂ).

ಅಭಿರೂಪದಿನಾ ಪ್ರಥಮಾ
ವಿಭಕ್ತಿ ಲಿಂಗಾರ್ಥವಚನಸಂಬೋಧನದೊಳ್ |
ಪ್ರಭವಿರ್ಪುದಾ ದ್ವಿತೀಯಾ
ವಿಭಕ್ತಿ ಕರ್ಮದೊಳನಾಕುಳಂ ವರ್ತಿಸುಗುಂ || 126 ||

ಪದಚ್ಛೇದಂ.

ಅಭಿರೂಪದಿಂ ಆ ಪ್ರಥಮಾವಿಭಕ್ತಿ ಲಿಂಗಾರ್ಥವಚನಸಂಬೋಧನದೊಳ್ ಪ್ರಭವಿರ್ಪುದು; ಆ ದ್ವಿತೀಯಾವಿಭಕ್ತಿ ಕರ್ಮದೊಳ್ ಅನಾಕುಳಂ ವರ್ತಿಸುಗುಂ.

ಯಥಾನ್ವಯಂ.

ಟೀಕು.

ಅಭಿರೂಪದಿಂ=ಅಭಿವ್ಯಕ್ತವಾದ ರೂಪದಿಂದೆ; ಆ ಪ್ರಥಮಾವಿಭಕ್ತಿ=ಆ ಪ್ರಥಮೆಯೆಂಬ ವಿಭಕ್ತಿ; ಲಿಂಗ=ಲಿಂಗದಲ್ಲಿ; ಅರ್ಥ=ಅರ್ಥದಲ್ಲಿ; ವಚನ=ವಚನದಲ್ಲಿ; ಸಂಬೋಧನದೊಳ್=ಸಂಬುದ್ಧಿಯಲ್ಲಿ; ಪ್ರಭವಿರ್ಪುದು=ಹುಟ್ಟಿರ್ಪುದು; ಆ ದ್ವಿತೀಯಾವಿಭಕ್ತಿ=ಆ ದ್ವಿತೀಯೆಯೆಂಬ ವಿಭಕ್ತಿ; ಕರ್ಮದೊಳ್=ಕರ್ಮದಲ್ಲಿ; ಅನಾಕುಳಂ=ವ್ಯಾಕುಳವಿಲ್ಲದುದಾಗಿ; ವರ್ತಿಸುಗುಂ=ವರ್ತಿಸುವದು.

ವೃತ್ತಿ.

ಲಿಂಗದೊಳಮ್ ಅರ್ಥದೊಳಂ ವಚನಮಾತ್ರದೊಳಂ ಸಂಬೋಧನೆಯೊಳಂ ಪ್ರಥಮಾವಿಭಕ್ತಿಯಕ್ಕುಂ. ಲಿಂಗಮೆಂಬುದು ವಸ್ತುವಿನ ಕುಱುಪಂ ಪೇೞ್ವುದು; ಅರ್ಥಮೆಂಬುದು ಭಾವವಿಶೇಷಮಂ ಪೇೞ್ವುದು; ವಚನಮಾತ್ರಮೆಂಬುದು ಗಣನೆಯಂ ಪೇೞ್ವುದು; ಸಂಬೋಧನೆಯೆಂಬುದು ಅಭಿಮುಖೀಕರಣಮಂ ಪೇೞ್ವುದು.

ಪ್ರಯೋಗಂ.

ಲಿಂಗಕ್ಕೆ—ಇಂದ್ರಂ, ಚಂದ್ರಂ, ಮನುಷ್ಯಂ; ಗೋಮಿನಿ, ಕಾಮಿನಿ; ಆನೆ, ಕುದುರೆ, ಮರಂ, ಗಿಡು.

ಅರ್ಥಕ್ಕೆ—ನಿಡಿಯಂ, ಗುಜ್ಜಂ, ಕೆಂಚಂ, ಕರಿಕಂ, ಅಸಿಯಂ, ಇನಿಯಂ.

ವಚನಕ್ಕೆ—ಒಂದು, ಎರಡು, ಮೂಱು; ಓರ್ವಂ, ಈರ್ವರ್, ಮೂವರ್.

ತೃತೀಯಾರ್ಥದ ಕರ್ತೃವಿನೊಳಂ ಪ್ರಥಮೆಯಕ್ಕುಂ—ಅವಂ ಮಾಡಿದಂ, ಅವನಿಂ ಮಾಡೆ ಪಟ್ಟುದು (ಮಾಡಲ್ ಪಟ್ಟುದು, M. B.; cf. S. 251 b).

ಸಂಬೋಧನೆಗೆ[1]—ಎಲೆ, ದೇವ, ರಕ್ಷಿಸು!

ನೀನುಳೊಡುಂಟು ರಾಜ್ಯಂ;
ನೀನುಳೊಡೆ ಪಟ್ಟಮುಂಟು, ಪೇೞಿಗೆಯುಂಟು;
ನೀನುಳೊಡುಂಟು ಬೆಳ್ಗೊಡೆ;
ನೀನಿಲ್ಲದಿವೆಲ್ಲವೊಳವೆ, ಭಾನುತನುಜಾ?—
ನಲ್ಲಳೆ, ನಿಂನ ಕಾಲ್ವಿಡಿದಪೆಂ, ತಿಳಿ! ಮೌನವಿದೇಕೆ?—

ಸ್ತಂಭಕುಂಭಾದಿಜಡವಸ್ತುಗಳೊಳಂ ದೇವತಾಪ್ರತಿಮೆಯೊಳಂ ಲೋಕಾಂತರದೊಳಮ್ ಆತ್ಮೀಯಚಿತ್ತದೊಳಮ್ ಅಭಿಮುಖೀಕರಣಮುಪಚಾರಂ—ಎಲೆ, ಕನ್ನಡಿಕಳಸಮೆ, ಕಥೆಯ ಕೇಳ್!—ತಳಿರೆ! ತಾವರೆಯೆ! ಮದಾಳಿಕುಳಮೆ! ಕನ್ನೆಯ್ದಿಲೆ! ಮತ್ತಕೋಕಿಲಮೆ, ಸೀತೆಯಂ ಕಂಡಿರೆ.—ಸ್ಥೈರಿಸು, ಹೃದಯಮೆ, ಸ್ಥೈರಿಸು!—ಎಲೆ, ಸರ್ವೇಶ, ನಿನ್ನ ನಿಜಮಂ ತೋಱು!—ಆವ ಜಗಮಂ ಸಾಧಿಸಲ್ಪೋದೆ? ಪೇೞೆಲೆ ವಿದ್ಯಾಧರಚಕ್ರವರ್ತಿ!—

ಆವುದು ಮಾಡಲ್ವೇಡಿದುದದುವೆ ಕರ್ಮಂ; ಅದಱೊಳ್ದ್ವಿತೀಯಾವಿಭಕ್ತಿ ವರ್ತಿಸುಗುಂ. ಕರ್ತೃಕರ್ಮಕ್ಕುದಾಹರಣಂ—ಪಡೆದಂ ಪದ್ಮಜನಿ ಜಗತ್ರಯಮಂ.

ಸೂತ್ರಂ.

The Objects in the Accusative are of 4 different sorts: a thing to be produced as something new (ನಿರ್ವರ್ತ್ಯಂ), one that undergoes change (ವಿಕಾರ್ಯಂ), one that is to be reached (ಪ್ರಾಪ್ಯಂ), and one that is to be observed by the senses (ವೈಷಯಿಕಂ).

ಪ್ರವಿದಿತತತ್ಕರ್ಮಂ ಕ
ರ್ತೃವಿನೀಪ್ಸಿತತಮಪದಾರ್ಥಮದು ನಾಲ್ಕುಂ ಭೇ |
ದವನಾಳ್ದಿರ್ಕುಂ ನಿರ್ವ
ರ್ತ್ಯವಿಕಾರ್ಯಂ ಪ್ರಾಪ್ಯಮೆತ್ತಲುಂ ವೈಷಯಿಕಂ || 127 ||

ಪದಚ್ಛೇದಂ.

ಪ್ರವಿದಿತತತ್ಕರ್ಮಂ ಕರ್ತೃವಿನ ಈಪ್ಸಿತತಮಪದಾರ್ಥಂ; ಅದು ನಾಲ್ಕುಂ ಭೇದವಂ ಆಳ್ದು ಇರ್ಕುಂ, ನಿರ್ವರ್ತ್ಯವಿಕಾರ್ಯಂ, ಪ್ರಾಪ್ಯಂ, ಎತ್ತಲುಂ ವೈಷಯಿಕಂ.

ಅನ್ವಯಂ.

ಪ್ರವಿದಿತತತ್ಕರ್ಮಂ ಕರ್ತೃವಿನ ಈಪ್ಸಿತತಮಪದಾರ್ಥಂ; ಅದು ನಿರ್ವರ್ತ್ಯ-ವಿಕಾರ್ಯಂ, ಪ್ರಾಪ್ಯಂ, ಎತ್ತಲುಂ ವೈಷಯಿಕಂ ನಾಲ್ಕುಂ ಭೇದವಂ ಆಳ್ದು ಇರ್ಕುಂ.

1) Pâṇini II, 3, 47 has || ಸಂಬೋಧನೇ ಚ (ಪ್ರಥಮಾ) || Sholiast || ಸಂಬೋಧನಮ್ ಅಭಿಮುಖೀಕರಣಂ | ತತ್ರ ಪ್ರಥಮಾ ಸ್ಯಾತ್|| ಹೇ ದೇವ | ಹೇ ದೇವೌ | ಹೇ ದೇವಾಃ|| The Vocative is nothing but a form of the Nominative in accosting (ಅಭಿಮುಖೀಕರಣಂ).

ಟೀಕು.

ಪ್ರ=ವಿಶೇಷವಾಗಿ; ವಿದಿತ=ಪ್ರಸಿದ್ಧವಾದ; ತತ್ಕರ್ಮಂ=ಆ ಕರ್ಮಂ; ಕರ್ತೃವಿನ=ಮಾಡುವಾತನ; ಈಪ್ಸಿತತಮಪದಾರ್ಥಂ=(ಅತಿ) ಇಚ್ಛೈಸಲ್ಪಟ್ಟ ಪದಾರ್ಥಂ; ಅದು=ಆ ಕರ್ಮಂ; ನಿರ್ವರ್ತ್ಯ=ನಿರ್ವರ್ತ್ಯ ಎಂದು; ವಿಕಾರ್ಯಂ=ವಿಕಾರ್ಯಮೆಂದು; ಪ್ರಾಪ್ಯಂ=ಪ್ರಾಪ್ಯಮೆಂದು; ಎತ್ತಲುಂ=ಎಲ್ಲಿಯುಂ; ವೈಷಯಿಕಂ=ವೈಷಯಿಕಮೆಂದು; ನಾಲ್ಕುಂ ಭೇದವಂ=ನಾಲ್ಕೂ ಭೇದವಂ; ಆಳ್ದು=ತಾಳ್ದು; ಇರ್ಕುಂ=ಇರ್ಪುದು.

ವೃತ್ತಿ.

ಆ ಕರ್ಮಂ ಮಾಡುವನ ಇಷ್ಟಮಪ್ಪ ವಸ್ತು; ಅದು ನಿರ್ವರ್ತ್ಯಮೆಂದುಂ, ವಿಕಾರ್ಯಮೆಂದುಂ, ಪ್ರಾಪ್ಯಮೆಂದುಂ, ವೈಷಯಿಕಮೆಂದುಂ, ನಾಲ್ಕು ತೆಱನಪ್ಪುದು. ನಿರ್ವರ್ತ್ಯಮೆಂದು ನಿರ್ವಾಹಮನೆಯ್ದುವುದು; ವಿಕಾರ್ಯಮೆಂದು ರೂಪಾಂತರಮನೆಯ್ದುವುದು; ಪ್ರಾಪ್ಯಮೆಂದು ಎಯ್ದಲ್ ಪಡೆವುದು; ವೈಷಯಿಕಮೆಂದು ನಯನಾದಿಗೆ ವಿಷಯಮಪ್ಪುದು.

ಪ್ರಯೋಗಂ.

ಕರ್ಮಕ್ಕೆ—ತುಡಗೆಯಂ ತೊಟ್ಟಂ; ಪೂವಂ ಮುಡಿದಂ.

ನಿರ್ವರ್ತ್ಯಕ್ಕೆ—ಮನೆಯಂ ಮಾಡಿದಂ; ಕಾವ್ಯಮಂ ಪೇೞ್ದಂ.

ವಿಕಾರ್ಯಕ್ಕೆ—ಪೞುಮಂ ಕಡಿದಂ; ಕಾಯಂ ಪೊೞ್ದಂ.

ಪ್ರಾಪ್ಯಕ್ಕೆ—ಊರನೆಯ್ದಿದಂ; ಮರನಂ ಸಾರ್ದಂ.

ವೈಷಯಿಕಕ್ಕೆ—ನೇಸಱಂ ನೋಡಿದಂ; ಗೀತಮಂ ಕೇಳ್ದಂ; ನಲ್ಲಳನಪ್ಪಿದಂ; ರಸಮಂ ಪೀರ್ದಂ; ಪೂವಂ ಮೂಸಿದಂ.

ಸೂತ್ರಂ.

ತೊಡರ್ದಿಷ್ಟಾನಿಷ್ಟದೊಳೆಡೆ
ಯುಡುಗದೆ ಕಾಲಾಧ್ವದೊಳ್ದ್ವಿತೀಯೆಯೆ ಮತ್ತಂ |
ನುಡಿಗುಂ ತೃತೀಯೆ ಪೇೞಿ
ಲ್ಪಡೆಗುಂ ಸಲೆ ಕರ್ತೃಕರಣಹೇತುಸ್ಥಿತಿಯೊಳ್ || 128 ||

Further the Objects in the Accusative are things wished for (ಇಷ್ಟಂ) and not wished for (ಅನಿಷ್ಟಂ), time (ಕಾಲಂ), and space (ಅಧ್ವಂ). A double Accusative (ದ್ವಿಕರ್ಮಂ) occurs when taking or desiring something from somebody. — The Instrumental denotes either the agent, or the instrument (ಕರಣಂ), or the cause (ಹೇತು), or also association (ಸಂಯೋಗಂ).

ಪದಚ್ಛೇದಂ.

ತೊಡರ್ದು ಇಷ್ಟಾನಿಷ್ಟದೊಳ್, ಎಡೆ ಉಡುಗದೆ, ಕಾಲಾಧ್ವದೊಳ್ ದ್ವಿತೀಯೆಯೆ ಮತ್ತಂ ನುಡಿಗುಂ; ತೃತೀಯೆ ಪೇೞಿಲ್ಪಡೆಗುಂ ಸಲೆ ಕರ್ತೃಕರಣಹೇತುಸ್ಥಿತಿಯೊಳ್.

## ಅನ್ವಯಂ.

ಮತ್ತಂ ದ್ವಿತೀಯೆಯೆ ಇಷ್ಟಾನಿಷ್ಟದೊಳ್ ತೊಡರ್ದು, ಎಡೆ ಉಡುಗದೆ, ಕಾಲಾಧ್ವದೊಳ್ ನುಡಿಗುಂ; ತೃತೀಯೆ ಸಲೆ ಕರ್ತೃಕರಣಹೇತುಸ್ಥಿತಿಯೊಳ್ ಪೇೞಲ್ಪಡೆಗುಂ.

## ಟೀಕು.

ಮತ್ತಂ=ಮತ್ತೆಯುಂ; ದ್ವಿತೀಯೆಯೆ=ದ್ವಿತೀಯಾವಿಭಕ್ತಿಯೆ; ಇಷ್ಟ=ಇಷ್ಟದಲ್ಲಿ; ಅನಿಷ್ಟ=ಅನಿಷ್ಟದಲ್ಲಿ; ತೊಡರ್ದು=ಪೊರ್ದುಗೆಯಾಗಿ; ಎಡೆಯುಡುಗದೆ=ಎಡೆವಿಡದೆ; ಕಾಲ=ಕಾಲದಲ್ಲಿ; ಅಧ್ವದೊಳ್=ಪಥದಲ್ಲಿ; ನುಡಿಗುಂ=ನುಡಿವುದು; ತೃತೀಯೆ=ತೃತೀಯಾವಿಭಕ್ತಿ; ಸಲೆ=ಚನ್ನಾಗಿ; ಕರ್ತೃ=ಕರ್ತೃವಿನಲ್ಲಿ; ಕರಣ=ಕರಣದಲ್ಲಿ; ಹೇತುಸ್ಥಿತಿಯೊಳ್=ಹೇತುವಿನ ಸ್ಥಿತಿಯಲ್ಲಿ ಪೇೞಲ್ಪಡೆಗುಂ=ಪೇಳಲ್ಪಡೆವುದು.

## ವೃತ್ತಿ.

ಇಷ್ಟದೊಳಂ ಅನಿಷ್ಟದೊಳಂ ಕಾಲದೊಳಂ ಅಧ್ವದೊಳಂ ಎಡವಱಿಯದೆ ದ್ವಿತೀಯೆಯಕ್ಕುಂ; ಕರ್ತೃವಿನೊಳಂ ಕರಣದೊಳಂ ಹೇತುವಿನೊಳಂ ತೃತೀಯೆಯಕ್ಕುಂ.

## ಪ್ರಯೋಗಂ.

ಇಷ್ಟಕ್ಕೆ—ನೇವಳಮಂ ತೆಗೆದಂ.

ಅನಿಷ್ಟಕ್ಕೆ—ಪಾಪಮಂ ದಾಂಟಿದಂ.

ಕಾಲಕ್ಕೆ—ಐದುದಿಂಗಳಂ ತಳ್ತಿದಂ; ಉಪವಾಸದಿಂ ರಾತ್ರಿಯನಿರ್ದಂ; ಜಾವಮಂ ತೊೞಲ್ದಂ.

ಅಧ್ವಕ್ಕೆ—ಅರೆ ಗಾವುದಮಂ ಪರೆದಂ [ಪರಿದಂ]; ಮೂಗಾವುದಮಂ ನಡೆದಂ.

ದೋಹನಾದಿಗಳೊಳ್ದ್ವಿಕರ್ಮಕಮುಂಟು—ಗುರುವಂ ಜ್ಞಾನಮಂ ಬೆಸಗೊಂಡಂ; ದಾನಿಯಂ ದಾನಮಂ ಬೇಡಿದಂ; ಪಶುವಂ ಪಾಲಂ ಕಱೆದಂ.

ತೃತೀಯೆಯ ಕರ್ತೃವಿಂಗೆ—ಪದಕಮಕ್ಕಸಾಲೆಯಿಂ ಮಾಡಲ್ ಪಟ್ಟುದು [ಮಾಡ—M. B.; ಮಾಡೆ—M. A.]; ಕಾವ್ಯಮೆನ್ನಿಂ ಪೇೞಲ್ ಪಟ್ಟುದು. (see s. S. 126).

ಕರಣಕ್ಕೆ—ಕೊಡಲಿಯಿಂ ಕಡಿದಂ; ಗದೆಯಿಂ ಮೋದಿದಂ; ಕಣ್ಣಿಂ ನೋಡಿದಂ.

ಹೇತುವಿಂಗೆ—ಓಲಗದಿಂ ಪಡೆದಂ; ತಗಹಿಂ ಸಿಲ್ಕಿದಂ; ದೈವದಿಂ ಬಟ್ದಂ [ಬಾಳ್ದಂ M. B.; ಬಳ್ದಂ M. A.]

ಸಂಯೋಗದೊಳಮುಂಟು—ಸಂಗಡದಿಂ ಬಂದಂ.

## ಸೂತ್ರಂ.

ನುತಸಂಪ್ರದಾನರೂಢಂ
ಚತುರ್ಥಿಯದು ರುಚಿಯೊಳೀರ್ಷೆಯೊಳ್ಮಚ್ಚರದೊಳ್ |
ಹಿತದೊಳ್ಸಂಭೀತಿಯೊಳುಂ
ನತಿಯೊಳ್ಸ್ವಸ್ತ್ಯಾದಿಯೊಳ್ಸ್ವಭಾವಸ್ಥಿತಿಯೊಳ್ || 129 ||
ಪ್ರವಿದಿತಹೇತುವಿನೊಳ್ಸಂ
ದವನತೆಯೊಳ್ಪ್ರಾಣ್ಯನಾದರಸ್ಮರಣದೊಳು |
ದ್ಭವಿಸಿದನೀಪ್ಸಿತದೊಳ್ಸದೃ
ಶವೃತ್ತಿಯೊಳ್ಪ್ರತಿನಿಧಾನದೊಳಮಿಷ್ಟದೊಳಂ || 130 ||

The Dative takes place in bestowing to (ಸಂಪ್ರದಾನಂ), in having a taste for (ರುಚಿ), in being angry with (ಈರ್ಷೆ), in envying somebody (ಮಚ್ಚರಂ), in being beneficial to (ಹಿತಂ), in fearing something (ಭೀತಿ), in excelling something (ಉನ್ನತಿ), in giving a blessing to (ಸ್ವಸ್ತಿ), in ascribing natural property to (ಸ್ವಭಾವಂ), in accounting for or being the reason for (ಹೇತು), in making obeisance to (ನಮಸ್ಕಾರಂ), in being detrimental to (ಅನಾದರಂ), in showing hostility to (ಅನಿಷ್ಟಂ), in comparing with (ಸಾದೃಶ್ಯಂ), in substituting for (ಪ್ರತಿನಿಧಿ), and in showing love to (ಇಷ್ಟಂ).

## ಪದಚ್ಛೇದಂ.

ನುತಸಂಪ್ರದಾನರೂಢಂ ಚತುರ್ಥಿ; ಅದು ರುಚಿಯೊಳ್, ಈರ್ಷೆಯೊಳ್, ಮಚ್ಚರದೊಳ್, ಹಿತದೊಳ್, ಸಂಭೀತಿಯೊಳ್, ಉಂನತಿಯೊಳ್, ಸ್ವಸ್ತ್ಯಾದಿಯೊಳ್, ಸ್ವಭಾವಸ್ಥಿತಿಯೊಳ್,—ಪ್ರವಿದಿತಹೇತುವಿನೊಳ್, ಸಂದ ಅವನತೆಯೊಳ್, ಪ್ರಾಣ್ಯನಾದರಸ್ಮರಣದೊಳ್, ಉದ್ಭವಿಸಿದ ಅನೀಪ್ಸಿತದೊಳ್, ಸದೃಶವೃತ್ತಿಯೊಳ್, ಪ್ರತಿನಿಧಾನದೊಳಂ ಇಷ್ಟದೊಳಂ.

## ಯಥಾನ್ವಯಂ.

## ಟೀಕು.

ನುತ=ಕೊಂಡಾಡಲ್ಪಟ್ಟ; ಸಂಪ್ರದಾನ=ಸಂಪ್ರದಾನಕಾರಕದಲ್ಲಿ; ರೂಢಂ=ರೂಢಿಯುಳ್ಳದು; ಚತುರ್ಥಿ=ಚತುರ್ಥೀವಿಭಕ್ತಿಯೆನಿಸುವದು; ಅದು=ಆ ಚತುರ್ಥಿ; ರುಚಿಯೊಳ್=ರುಚಿಯಲ್ಲಿ; ಈರ್ಷೆಯೊಳ್=ಕೋಪದಲ್ಲಿ; ಮಚ್ಚರದೊಳ್=ಮಚ್ಚರದಲ್ಲಿ; ಹಿತದೊಳ್=ಹಿತದಲ್ಲಿ; ಸಂಭೀತಿಯೊಳ್=ಲೇಸಾದ ಭೀತಿಯಲ್ಲಿ; ಉನ್ನತಿಯೊಳ್=ಪೆರ್ಚುಗೆಯಲ್ಲಿ; ಸ್ವಸ್ತ್ಯಾದಿಯೊಳ್=ಸ್ವಸ್ತಿಯೆಂಬುದು ಮೊದಲಾದುವರಿಲ್ಲಿ; ಸ್ವಭಾವಸ್ಥಿತಿಯೊಳ್=ಸ್ವಭಾವದ ಸ್ಥಿತಿಯಲ್ಲಿ;—ಪ್ರ=ವಿಶೇಷವಾಗಿ; ವಿದಿತ=ಪ್ರಸಿದ್ಧವಾದ; ಹೇತುವಿನೊಳ್=ಕಾರಣದಲ್ಲಿ; ಸಂದವನತೆಯೊಳ್=ಸಲುವಳಿಯಾದ ನಮಸ್ಕಾರದಲ್ಲಿ; ಪ್ರಾಣಿ=ಪ್ರಾಣಿಗಳಲ್ಲಿ; ಅನಾದರ=ಉದಾಸೀನದ; ಸ್ಮರಣದೊಳ್=ನೆನಹಿನಲ್ಲಿ; ಉದ್ಭವಿಸಿದ=ಹುಟ್ಟಿದ; ಅನೀಪ್ಸಿತದೊಳ್=ಅನಿಚ್ಛೆಯಲ್ಲಿ; ಸದೃಶವೃತ್ತಿಯೊಳ್=ಸಮಾನವರ್ತನೆಯಲ್ಲಿ; ಪ್ರತಿನಿಧಾನದೊಳಂ=ಪ್ರತಿನಿಧಿಯಲ್ಲಿಯುಂ; ಇಷ್ಟದೊಳಂ=ಇಷ್ಟದಲ್ಲಿಯುಂ ಬರ್ಪುದು.

## ವೃತ್ತಿ.

ಸಂಪ್ರದಾನವೆಂದಾವುದಾನೊಂದು ವಸ್ತುವೆನಿಸಿ ಕೊಂಬ ಪಾತ್ರಂ; ಅಲ್ಲಿ ಚತು

ರ್ಥಿಯಕ್ಕುಂ. ಅದು ರುಚಿ ಈರ್ಷೆ ಮಚ್ಚರ ಹಿತ ಭೀತಿ ಉನ್ನತಿ ಸ್ವಸ್ತ್ಯಾದಿ ಸ್ವಭಾವ ಕಾರಣ ನಮಸ್ಕಾರ ಪ್ರಾಣ್ಯನಾದರಸ್ಮರಣ ಅನಿಷ್ಟ ಸಾದೃಶ್ಯ ಪ್ರತಿನಿಧಿ ಇಷ್ಟ ಮೆಂಬಿನಿತವಱೊಳ್ ವರ್ತಿಸುಗುಂ.

ಪ್ರಯೋಗಂ.

ಸಂಪ್ರದಾನಕ್ಕೆ—ಬ್ರಾಹ್ಮಣಂಗೆ ಗೋವಂ ಕೊಟ್ಟಂ.
ರುಚಿಗೆ—ಕೂಸಿಂಗೆ ಲಡ್ಡಿಗೆಯೞ್ತಿ.
ಈರ್ಷೆಗೆ—ಕವಿಗೆ ಕವಿ ಮುನಿವಂ.
ಮಚ್ಚರಕ್ಕೆ—ಸವತಿಗೆ ಸವತಿ ಪುರುಡಪಳ್; ಬಿರುದರ್ಗೆ ಬಿರುದರ್ ಸೆಣಸುವರ್.
ಹಿತಕ್ಕೆ—ಪಶುವಿಂಗೆ ತೃಣಂ ಹಿತಂ; ರೋಗಿಗೌಷಧಂ ಹಿತಂ.
ಭೀತಿಗೆ—ಪಾಪಕ್ಕಂಜುಗುಂ ತಕ್ಕಂ.
ಉನ್ನತಿಗೆ—ಲೋಕಕ್ಕೀತನಧಿಕಂ; ಮೇರುವಿಂಗೆ ಈತನಗ್ಗಳಂ.
ಸ್ವಸ್ತ್ಯಾದಿಗೆ—ಸಮನಿಸುಗೆ ಜಗಕ್ಕೆಲ್ಲಿಯುಮಭೀಷ್ಟಂ, ಕ್ಷೇಮವೃತ್ತಿ, ಕುಶಲಂ, ಭದ್ರಂ, ಭಾವುಕಂ, ಭವಿತವ್ಯಂ, ಶ್ರೇಯಂ, ಶಿವಂ, ಶುಭಂ, ಸ್ವಸ್ತಿ, ಮಂಗಳಂ, ಕಲ್ಯಾಣಂ!
ಸ್ವಭಾವಕ್ಕೆ—ಸಿಂಹಕ್ಕೆ ಶೌರ್ಯಂ; ಕಪಿಗೆ ಚಪಲತೆ.
ಹೇತುವಿಂಗೆ—ಸಿರಿಗುದ್ಯೋಗಂ; ಮೞೆಗೆ ಮುಗಿಲ್. [ಮಳೆ—M. A.]
ನಮಸ್ಕಾರಕ್ಕೆ—ದೇವರ್ಗೆ ಪೊಡಮಟ್ಟಂ; ಗುರುವಿಂಗೆಱಗಿದಂ.
ಪ್ರಾಣ್ಯನಾದರಸ್ಮರಣಕ್ಕೆ—ಮಾಗಿಸರಂ ಪುಲ್ಗೆ ಕಷ್ಟಮಾಗಿ ನೆನೆವಂ.
ಅನಿಷ್ಟಕ್ಕೆ—ಆತಂಗೆ ವಿಷಮನಿಕ್ಕಿದಂ; ಆತಂಗೆ ಕತ್ತಿಯಂ ಮಸೆದಂ.
ಸಾದೃಶ್ಯಕ್ಕೆ—ಆತಂಗೀತಂ ತಕ್ಕಂ; ಐರಾವತಕ್ಕೆ ಸುಪ್ರತೀಕವೋರಗೆ.
ಪ್ರತಿನಿಧಿಗೆ—ಜೇನ ತುಪ್ಪಕ್ಕೆ ಸಕ್ಕರಿ ಸಲ್ಲುದು; ಆ ಕಬ್ಬಕ್ಕೀ ಕಬ್ಬಮಾಯ್ತು.
ಇಷ್ಟಕ್ಕೆ—ಭಕ್ತಂಗೆ ವರಮನಿತ್ತಂ; ಕೆಳೆಯಂಗೆ ಸಂತೋಷಮಂ ಮಾಡಿದಂ.

ಸೂತ್ರಂ.

ಆದಂ ಪಂಚಮಿಯಪ್ಪುದ
ಪಾದಾನಸ್ಥಲದೊಳದೆ ದಲೊದವುಗುಮಾತಂ |
ಕಾದಾನೇಷ್ಟಾನಿಷ್ಟಾ
ಪಾದಿತಹೇತುವಿನೊಳುದಯದೊಳ್ಗೌರವದೊಳ್ || 131 ||

The Ablative occurs in separating from (ಅಪಾದಾನಂ), in the proceeding of fearful events from (ಭಯಂ), in being adopted by (ಸ್ವೀಕಾರಂ), in the proceeding of desired objects from (ಇಷ್ಟಂ), in the proceeding of undesired objects from (ಅನಿಷ್ಟಂ), in being the reason for (ಹೇತು,) in arising from (ಉದಯಂ), and in excelling somebody (ಗೌರವಂ).

ಪದಚ್ಛೇದಂ.

ಆದಂ ಪಂಚಮಿ ಅಪ್ಪುದು ಅಪಾದಾನಸ್ಥಲದೊಳ್; ಅದೆ ದಲ್ ಒದವುಗುಂ ಆತಂಕಾದಾನೇಷ್ಟಾನಿಷ್ಟಾಪಾದಿತಹೇತುವಿನೊಳ್, ಉದಯದೊಳ್, ಗೌರವದೊಳ್.

ಅನ್ವಯಂ.

ಅಪಾದಾನಸ್ಥಲದೊಳ್ ಆದಂ ಪಂಚಮಿ ಅಪ್ಪುದು; ಅದೆ ದಲ್ ಆತಂಕಾದಾನೇಷ್ಟಾನಿಷ್ಟಾಪಾದಿತಹೇತುವಿನೊಳ್, ಉದಯದೊಳ್, ಗೌರವದೊಳ್ ಒದವುಗುಂ.

ಟೀಕು.

ಅಪಾದಾನಸ್ಥಲದೊಳ್=ಅಪಾದಾನಕಾರಕಸ್ಥಲದಲ್ಲಿ; ಆದಂ=ಆದಮೆಂಬ ಪೀನಗ್ರಹಣದಿಂದೆ; ಪಂಚಮಿ=ಪಂಚಮೀವಿಭಕ್ತಿ; ಅಪ್ಪುದು=ಆಗುವದು; ಅದೆ=ಆ ಪಂಚಮಿಯೆ; ದಲ್=ನಿಶ್ಚಯವಾಗಿ; ಆತಂಕ=ಭಯದಲ್ಲಿ; ಆದಾನ=ಸ್ವೀಕಾರದಲ್ಲಿ; ಇಷ್ಟ=ಇಷ್ಟದಲ್ಲಿ; ಅನಿಷ್ಟ=ಇಷ್ಟವಲ್ಲದುದರಲ್ಲಿ; ಆಪಾದಿತ=ಪ್ರತಿಪಾದಿಸಲ್ಪಟ್ಟ; ಹೇತುವಿನೊಳ್=ಕಾರಣದಲ್ಲಿ; ಉದಯದೊಳ್=ಜನನದಲ್ಲಿ; ಗೌರವದೊಳ್=ಗುರುತ್ವದಲ್ಲಿ; ಒದವುಗುಂ=ಪ್ರಾಪ್ತಿಸುವುದು.

ವೃತ್ತಿ.

ಅಪಾದಾನಮೆಂದಾವುದಾನೊಂದಱಿಂ ತೊಲಗುವುದು; ಅಲ್ಲಿ ಪಂಚಮಿಯಕ್ಕುಂ. ಆ ಪಂಚಮಿ ಭಯ ಸ್ವೀಕಾರ ಇಷ್ಟ ಅನಿಷ್ಟ ಹೇತು ಉದಯ ಗುರುತ್ವಮೆಂಬಿನಿತಱೊಳಂ ವರ್ತಿಸುಗುಂ.

ಪ್ರಯೋಗಂ.

ಅಪಾದಾನಕ್ಕೆ—ಮರದತ್ತಣಿಂ ಪಣ್ಣುರುಳ್ದುದು; ಕೆಱೆಯತ್ತಣಿಂ ಬಂದಂ. ಆತನಿಂ ಪಿರಿಯನೆಂಬಂತಪ್ಪವಱೊಳಪಾದಾನಮುಂ ಮಱೆ ಮಾಡಿ, ವಿಕಲ್ಪಿಸುವರ್—ಕೃಷ್ಣನಿಂ ಪಿರಿಯಂ ಬಲಭದ್ರಂ; ದುರ್ಯೋಧನನಿಂ ಕಿಱಿಯಳ್ ದುಶ್ಶಳೆಯೆಂಬಂತೆ.

ಭಯಕ್ಕೆ—ಅರಸನತ್ತಣಿಂ ದಾಱೆ [ದಾಳಿ] ಬಂದುದು.
ಸ್ವೀಕಾರಕ್ಕೆ—ಸ್ವಾಮಿಯತ್ತಣಿಂ ನಿರ್ವಾಹಮಾದುದು.
ಇಷ್ಟಕ್ಕೆ—ರಂಭೆಯತ್ತಣಿಂ ಸುಖಂ ಪ್ರಾಪ್ತಿಸಿದುದು.
ಅನಿಷ್ಟಕ್ಕೆ—ಪಗೆಯತ್ತಣಿಂ ಬಂಧನಂ ಬಂದುದು.
ಹೇತುವಿಗೆ—ಉದ್ಯೋಗದತ್ತಣಿಂ ಸಿರಿ ಬಂದುದು.
ಉದಯಕ್ಕೆ—ಸದ್ವಂಶದತ್ತಣಿಂ ಪುಟ್ಟಿದಂ.
ಪೆರ್ಮೆಗೆ—ಕೃಷ್ಣನತ್ತಣಿಂ ಬಲಭದ್ರಂ ಪಿರಿಯಂ.

### ಸೂತ್ರಂ.

ಪತಿಕುಲಜಾತ್ಯವಯವವಿ
ಶ್ರುತಲಕ್ಷಣಸಂನಿಧಾನಸಂಸ್ಪರ್ಶಸಮಾ |
ಗತಸಂಬಂಧದೊಳಂ ತ
ದ್ಗತಸಂಬಂಧದೊಳಮುಂಟು ಷಷ್ಠಿಗೆ ಯೋಗಂ || 132 ||

The Genitive is used to denote connection (relation) of ownership (ಪತಿಸಂಬಂಧಂ), of family (ಕುಲ—), of race (ಜಾತಿ—), of membership (ಅವಯವ—), of marking off (ಲಕ್ಷಣ—), of being near (ಸಂನಿಧಾನ—), of touching (ಸಂಸ್ಪರ್ಶ—) of connection (ಸಂಬಂಧ—), of being the remainder (ಶೇಷ—), and of being made of (ವಸ್ತುವಿಕಾರ—).

### ಪದಚ್ಛೇದಂ.

ಪತಿಕುಲಜಾತ್ಯವಯವವಿಶ್ರುತಲಕ್ಷಣಸನ್ನಿಧಾನಸಂಸ್ಪರ್ಶಸಮಾಗತಸಂಬಂಧದೊಳಂ ತದ್ಗತ ಸಂಬಂಧದೊಳಂ ಉಂಟು ಷಷ್ಠಿಗೆ ಯೋಗಂ.

### ಅನ್ವಯಂ.

ಷಷ್ಠಿಗೆ ಯೋಗಂ ಉಂಟು. ಉಳಿದದು ಯಥಾನ್ವಯಂ.

### ಟೀಕು.

ಪತಿ=ಸ್ವಾಮಿಯಲ್ಲಿ; ಕುಲ=ಕುಲದಲ್ಲಿ; ಜಾತಿ=ಜಾತಿಯಲ್ಲಿ; ಅವಯವ=ಅವಯವದಲ್ಲಿ; ವಿಶ್ರುತ=ಪ್ರಸಿದ್ಧವಾದ; ಲಕ್ಷಣ=ಲಕ್ಷಣದಲ್ಲಿ; ಸನ್ನಿಧಾನ=ಸನ್ನಿಧಿಯಲ್ಲಿ; ಸಂ=ಲೇಸಾದ; ಸ್ಪರ್ಶ=ಸ್ಪರ್ಶನದಲ್ಲಿ; ಸಂ=ಲೇಸಾಗಿ; ಆಗತ=ಬಂದುದಾದ; ಸಂಬಂಧದೊಳಂ=ಸಂಬಂಧದಲ್ಲಿಯುಂ; ತತ್=ಆ ಸಂಬಂಧದಲ್ಲಿ; ಗತ=ಎಯ್ದಲ್ಪಟ್ಟ; ಸಂಬಂಧದೊಳಂ=ಸಂಬಂಧದಲ್ಲಿಯುಂ; ಷಷ್ಠಿಗೆ=ಷಷ್ಠೀವಿಭಕ್ತಿಗೆ; ಯೋಗಂ=ಕೂಟಂ; ಉಂಟು=ಉಂಟಾಗಿರ್ಪುದು.

### ವೃತ್ತಿ.

ಸಂಬಂಧದೊಳ್ ಷಷ್ಠಿಯಕ್ಕುಂ. ಅದು ಸ್ವಾಮಿಸಂಬಂಧ ಕುಲಸಂಬಂಧ ಜಾತಿಸಂಬಂಧ ಅವಯವಸಂಬಂಧ ಲಕ್ಷಣಸಂಬಂಧ ಸನ್ನಿಧಾನಸಂಬಂಧ ಸಂಸ್ಪರ್ಶಸಂಬಂಧ ಸಂಬಂಧದ ಸಂಬಂಧವೆಂಬಿನಿತಱೊಳಮಕ್ಕುಂ.

### ಪ್ರಯೋಗಂ.

ಸ್ವಾಮಿಸಂಬಂಧಕ್ಕೆ—ಊರೊಡೆಯಂ; ನಾಡೆಱೆಯಂ.

ಕುಲಸಂಬಂಧಕ್ಕೆ—ಎಮ್ಮ ಸೊಮ್ಮು; ಎಮ್ಮ ಪೋಱೆ; ಎಮ್ಮಳಿಯಂ; ಎಮ್ಮ ತಮ್ಮಂ.

ಜಾತಿಗೆ—ಆನೆಯ ಘಟೆ; ಕುದುರೆಯ ಥಟ್ಟು; ಗಿಳಿಯ ಪಿಂಡು.

ಅವಯವಕ್ಕೆ—ಮರದ ಕೊಂಬು; ಪೂವಿನೆಸಳ್; ಕೊಡೆಯ ಕಾವು.

ಕುಱುಪಿಂಗೆ—ಟೊಪ್ಪಿಗೆಯ ಮಾನಿಸಂ; ತತ್ತ್ರಳದ ರಾವುತಂ; ಸಿಂಧುದೇಶದ ಕುದುರೆ. (M. A.—ನಸಂ; ಕ—).

ಸನ್ನಿಧಾನಕ್ಕೆ—ಕೆಱೆಯ ಕೋಡಿ; ಊರ ಮುಂದು; ಅದಱ ಕೆಲಂ.

ಸಂಸ್ಪರ್ಶಕ್ಕೆ—ಕಳಸದ ತಳಿರ್; ನೀರ ಹಾವಸೆ; ತೋಳ ಬಂದಿ.

ಸಂಬಂಧದ ಸಂಬಂಧಕ್ಕೆ—ನೊಸಲ ಕಣ್ಣ ದೇವಂ; ತೋಳ ಬಾಳ ಕಾಂತಿ; ಹರಿಯ ಪೊಕ್ಕುಳ ತಾವರೆ.

ಮತ್ತಂ ಶೇಷದೊಳಂ ವಸ್ತುವಿಕಾರದೊಳಮುಂಟು—

ಶೇಷಕ್ಕೆ—ಬಳ್ಳದೞಿ; ಅದಱ ಮೞಿ.

ವಸ್ತುವಿಕಾರಕ್ಕೆ—ಪೊನ್ನ ಕೋಲ್.

ಎಲ್ಲಾ ವಿಭಕ್ತಿಗಳ್ ಷಷ್ಠಿಗತಮಾದುವಾಗಿ ಸಂಬಂಧಮೆಂಬರ್.

ಸೂತ್ರಂ.

The Locative relates to site, and takes place in making conspicuous among (ನಿರ್ಧಾರಣಂ), in showing the object (of sense) wherewith (ವಿಷಯಂ), the inherent property or substance in (ವ್ಯಾಪಕಂ), and the ways of beings in (ವ್ಯವಹಾರಂ), in denoting the time wherein (ಕಾಲಂ), and in showing where something else is (or takes place, ಸತಿಸಪ್ತಮಿ; see Ss. 246; 247; 249).

ಧೀರರಿನಾವುದು ತಾನಾ
ಧಾರಮದಧಿಕರಣಮಲ್ಲಿ ಸಪ್ತಮಿ ತಿಳಿ ನಿ |
ರ್ಧಾರಣವಿಷಯವ್ಯಾಪಕ
ಸಾರವ್ಯವಹಾರಕಾಲಸತ್ಯರ್ಥಗತಂ || 133 ||

ಪದಚ್ಛೇದಂ.

ಧೀರರಿಂ ಆವುದು ತಾಂ ಆಧಾರಂ, ಅದು ಅಧಿಕರಣಂ; ಅಲ್ಲಿ ಸಪ್ತಮಿ, ತಿಳಿ; ನಿರ್ಧಾರಣವಿಷಯವ್ಯಾಪಕಸಾರವ್ಯವಹಾರಕಾಲಸತ್ಯರ್ಥಗತಂ.

ಅನ್ವಯಂ.

ಧೀರರಿಂ ಆಧಾರಂ ತಾಂ ಆವುದು, ಅದು ಅಧಿಕರಣಂ; ಅಲ್ಲಿ ಸಪ್ತಮಿ, ತಿಳಿ; ನಿರ್ಧಾರಣವಿಷಯವ್ಯಾಪಕಸಾರವ್ಯವಹಾರಕಾಲಸತ್ಯರ್ಥಗತಂ.

ಟೀಕು.

ಧೀರರಿಂ=ವಿದ್ವಾಂಸರಿಂದೆ; ಆಧಾರಂ=ಆಧಾರಂ; ತಾಂ=ತಾಂ; ಆವುದು=ಆವುದು; ಅದು=ಅದು; ಅಧಿಕರಣಂ=ಅಧಿಕರಣಕಾರಕವೆನಿಸುವದು; ಅಲ್ಲಿ=ಆ ಅಧಿಕರಣಕಾರಕದಲ್ಲಿ; ಸಪ್ತಮಿ=ಸಪ್ತಮೀವಿಭಕ್ತಿ ಬರ್ಪುದು; ತಿಳಿ=ಅಱಿ; ನಿರ್ಧಾರಣ=ನಿರ್ಧಾರಣದಲ್ಲಿ; ವಿಷಯ=ವಿಷಯದಲ್ಲಿ; ವ್ಯಾಪಕ=ವ್ಯಾಪಕದಲ್ಲಿ; ಸಾರ=ಶ್ರೇಷ್ಠವಾದ; ವ್ಯವಹಾರ=ವ್ಯವಹಾರದಲ್ಲಿ; ಕಾಲ=ಕಾಲದಲ್ಲಿ; ಸತ್ಯರ್ಥ=ಸತಿಸಪ್ತಮಿಯರ್ಥದಲ್ಲಿ; ಗತಂ=ಎಯ್ದಲ್ಪಡುವದು.

### ವೃತ್ತಿ.

ಆವುದಾಧಾರಮದು ಅಧಿಕರಣಂ*; ಅಲ್ಲಿ ಸಪ್ತಮಿಯಕ್ಕುಂ. ಅದು ನಿರ್ಧಾರಣದೊಳಂ ವಿಷಯದೊಳಂ ವ್ಯಾಪಕದೊಳಂ ವ್ಯವಹಾರದೊಳಂ ಕಾಲದೊಳಂ ಸತ್ಯರ್ಥದೊಳಂ ವರ್ತಿಸುಗುಂ.

### ಪ್ರಯೋಗಂ.

ಅಧಿಕರಣಕ್ಕೆ—ಪಾಸಿನೊಳ್ನಿದ್ರೆ ಗೆಯ್ದಂ; ಪೞುಗೋಲೊಳ್ಕುಳ್ಳಿರ್ದಂ.

ನಿರ್ಧಾರಣಮೆಂಬುದು ಗುಣಮೆಂಬ ಕ್ರಿಯೆಯೆಂಬ ಎರಡಱಿಂ ಜಾತಿಯತ್ತಣಿಂ ವಸ್ತುವಂ ಬೇರ್ಕೆಯ್ವುದು.

ಗುಣಕ್ಕೆ—ದೇವರೊಳ್ನಿರ್ದೋಷಿಯಾಪ್ತಂ; ರತ್ನಂಗಳೊಳ್ಮಾಣಿಕ್ಯಮುತ್ತಮಂ.

ಕ್ರಿಯೆಗೆ—ಪೞಿಕಾಱರೊಳ್ಕೇತಂ ಕಾಲ್ವಲ್ಲಿದಂ; ಕಾದುವರೊಳ್ಕೇತಂ ಮೆಯ್ಗಲಿ.

ವಿಷಯಕ್ಕೆ—ಕಿವಿಯೊಳ್ಪಚ್ಚಿದಂ; ಮೊಗದೊಳ್ಕೆಲ್ದಂ.

ವ್ಯಾಪಕಕ್ಕೆ—ಪೂವಿನೊಳ್ಕಂಪು; ಕರ್ಬಿನೊಳ್ ರಸಂ; ಎಳ್ಳೊಳ್ ಎಣ್ಣೆ.

ವ್ಯವಹಾರಕ್ಕೆ—ತಪದೊಳ್ನೆಗೞ್ದಂ; ವೀರದೊಳೆಸೆದಂ.

ಕಾಲಕ್ಕೆ—ವಸಂತದೊಳ್ ಮಾವು ಬಂದುದು; ಶರದೊಳ್ದಿಗ್ವಿಜಯಮುಚಿತಂ.

ಸತ್ಯರ್ಥಕ್ಕೆ—ಬರೆ ಕಂಡಂ=ಬರ್ಪೆಡೆಯೊಳ್ಕಂಡಂ.

### ಸೂತ್ರಂ.

It happens that cases are, as it were, interchanged; for instance the *Genitive* has been used where the sense seems to require the Nominative or the Accusative.

ಇಂತೀ ಪೇೞ್ದ ವಿಭಕ್ತಿಗ
ಳೆಂತುಂ ಪಲ್ಲಟಿಸುಗುಂ ಯಥೇಷ್ಟಂ ಪ್ರಥಮಾ |
ರ್ಥಂ ತೋಱಿಯುಂ ದ್ವಿತೀಯಾ
ರ್ಥಂ ತೋಱಿಯುಮಲ್ಲಿ ಷಷ್ಠಿ ದೊರೆಕೊಂಡಿರ್ಕುಂ || 134 ||

### ಪದಚ್ಛೇದಂ.

ಇಂತು ಈ ಪೇೞ್ದ ವಿಭಕ್ತಿಗಳ್ ಎಂತುಂ ಪಲ್ಲಟಿಸುಗುಂ, ಯಥೇಷ್ಟಂ; ಪ್ರಥಮಾರ್ಥಂ ತೋಱಿಯುಂ ದ್ವಿತೀಯಾರ್ಥಂ ತೋಱಿಯುಂ ಅಲ್ಲಿ ಷಷ್ಠಿ ದೊರೆಕೊಂಡು ಇರ್ಕುಂ.

* Pâṇini I, 4, 45 || ಆಧಾರೋಧಿಕರಣಂ || . The reservoir (of an action is called) ಅಧಿಕರಣಂ i. e. relation (to site).

## ಅನ್ವಯಂ.

ಇಂತು ಈ ಪೇೞ್ದ ವಿಭಕ್ತಿಗಳ್ ಯಥೇಷ್ಟಂ ಎಂತುಂ ಪಲ್ಲಟಿಸುಗುಂ; ಪ್ರಥಮಾರ್ಥಂ ತೋಱಿಯುಂ ದ್ವಿತೀಯಾರ್ಥಂ ತೋಱಿಯುಂ ಅಲ್ಲಿ ಷಷ್ಟಿ ದೊರೆಕೊಂಡು ಇರ್ಕುಂ.

## ಟೀಕು.

ಇಂತು=ಹೀಂಗೆ; ಈ ಪೇೞ್ದ ವಿಭಕ್ತಿಗಳ್=ಈ ಪೇಳ್ದ ಸಪ್ತ ವಿಭಕ್ತಿಗಳ್; ಯಥೇಷ್ಟಂ=ಇಚ್ಛೆ ಬಂದ ಹಾಂಗೆ; ಎಂತುಂ=ಹ್ಯಾಂಗೆಯಾದೊಡಂ; ಪಲ್ಲಟಿಸುಗುಂ=ಪಲ್ಲಟವಾಗುವುವು; ಪ್ರಥಮಾರ್ಥಂ=ಪ್ರಥಮಾವಿಭಕ್ತ್ಯರ್ಥಂ; ತೋಱಿಯುಂ=ಕಾಣಿಸೆಯುಂ; ದ್ವಿತೀಯಾರ್ಥಂ=ದ್ವಿತೀಯಾವಿಭಕ್ತ್ಯರ್ಥಂ; ತೋಱಿಯುಂ=ಕಾಣಿಸೆಯುಂ; ಅಲ್ಲಿ=ಆ ಸ್ಥಾನದಲ್ಲಿ; ಷಷ್ಟಿ=ಷಷ್ಟೀವಿಭಕ್ತಿ; ದೊರೆಕೊಂಡಿರ್ಕುಂ=ಪ್ರಾಪ್ತಿಸಿರ್ಪುದು.

## ವೃತ್ತಿ.

ಈ ಪೇೞ್ದ ವಿಭಕ್ತಿಗಳ್ ಯಥಾಸಂಭವದಿನೆಂತಾದೊಡಂ ಪಲ್ಲಟಿಪುವು; ಅಲ್ಲಿ ಪ್ರಥಮಾರ್ಥದೊಳಂ ದ್ವಿತೀಯಾರ್ಥದೊಳಂ ಷಷ್ಠಿಯಕ್ಕುಂ.

## ಪ್ರಯೋಗಂ.

ಪ್ರಥಮಾರ್ಥದ ಷಷ್ಠಿಗೆ—ನಿಶ್ಶಂಕೆಯಿಂ ನೃಪನ ಪೇೞ್ಕೆ, ಚಿತ್ತಭವಗ್ರಹದ ಸೋಂಕೆ, ಸುಜನೋತ್ತಂಸಾ=ನೃಪಂ ಪೇೞ್ಕೆ, ಗ್ರಹಂ ಸೋಂಕೆಯೆಂದಿವರ್ಕರ್ಥಂ.

ದ್ವಿತೀಯಾರ್ಥದ ಷಷ್ಠಿಗೆ—ಎಲವೊ, ನೀನೆನ್ನ ಕೊಂದೆ, ಕಾಲ್ಬಿಡಿದಪಯೊ? [M. A. and B. ಪೇಳ್ವೊಡಮಟ್ಟೆ] ತೆಂಕ ನಾಡ ಮಱಿಯಲ್ಕೆಂದುಂ [M. A. B. ಇಂನುಂ] ಮನಂ ಬರ್ಕುಮೆ?=ಎಂನಂ ಕೊಂದೆ; ನಾಡಂ ಮಱಿಯಲ್ಕೆಂದಿವರ್ಕರ್ಥಂ.

## ಸೂತ್ರಂ.

Thus, instead of the Nominative, the Instrumental, the Dative and the Ablative, the *Accusative* is used; instead of the Instrumental the *Locative;* and instead of the Ablative the *Instrumental.*

ಸ್ವಾರ್ಥಂ ಪ್ರಥಮಾರ್ಥತೃತೀ
ಯಾರ್ಥಚತುರ್ಥ್ಯರ್ಥದೊಳ್ದ್ವಿತೀಯೆ ತೃತೀಯೋ |
ಕ್ತ್ಯಾರ್ಥದೊಳಾ ಸಪ್ತಮಿಯೆ ಸ
ಮರ್ಥಂ ಪಂಚಮಿಯೊಳಂ ತೃತೀಯೆ ಸಮರ್ಥಂ || 135 ||

## ಪದಚ್ಛೇದಂ.

ಸ್ವಾರ್ಥಂ ಪ್ರಥಮಾರ್ಥತೃತೀಯಾರ್ಥಚತುರ್ಥ್ಯರ್ಥದೊಳ್ ದ್ವಿತೀಯೆ; ತೃತೀಯೋಕ್ತ್ಯಾರ್ಥದೊಳ್ ಆ ಸಪ್ತಮಿಯೆ ಸಮರ್ಥಂ; ಪಂಚಮಿಯೊಳಂ ತೃತೀಯೆ ಸಮರ್ಥಂ.

### ಅನ್ವಯಂ.

ಪ್ರಥಮಾರ್ಥತೃತೀಯಾರ್ಥಚತುರ್ಥ್ಯರ್ಥದೊಳ್ ದ್ವಿತೀಯೆ ಸ್ವಾರ್ಥಂ; ತೃತೀಯೋಕ್ತಾರ್ಥದೊಳ್ ಆ ಸಪ್ತಮಿಯೆ ಸಮರ್ಥಂ; ಪಂಚಮಿಯೊಳಂ ತೃತೀಯೆ ಸಮರ್ಥಂ.

### ಟೀಕು.

ಪ್ರಥಮಾರ್ಥ=ಪ್ರಥಮಾವಿಭಕ್ತಿಯರ್ಥದಲ್ಲಿ; ತೃತೀಯಾರ್ಥ=ತೃತೀಯಾವಿಭಕ್ತಿಯರ್ಥದಲ್ಲಿ; ಚತುರ್ಥ್ಯರ್ಥದೊಳ್=ಚತುರ್ಥೀವಿಭಕ್ತಿಯರ್ಥದಲ್ಲಿ; ದ್ವಿತೀಯೆ=ದ್ವಿತೀಯಾವಿಭಕ್ತಿ; ಸ್ವಾರ್ಥಂ=ತನ್ನರ್ಥವುಳ್ಳುದಾಗಿರ್ಪುದು; ತೃತೀಯಾ=ತೃತೀಯಾವಿಭಕ್ತಿಯಿಂದೆ; ಉಕ್ತ=ಹೇಳಲ್ಪಟ್ಟ; ಅರ್ಥದೊಳ್=ಅರ್ಥದಲ್ಲಿ; ಆ ಸಪ್ತಮಿಯೆ=ಆ ಸಪ್ತಮೀವಿಭಕ್ತಿಯೆ; ಸಮರ್ಥಂ=ಸಮರ್ಥವಾಗಿರ್ಪುದು; ಪಂಚಮಿಯೊಳಂ=ಪಂಚಮೀವಿಭಕ್ತಿಯಲ್ಲಿಯುಂ; ತೃತೀಯೆ=ತೃತೀಯಾವಿಭಕ್ತಿ; ಸಮರ್ಥಂ=ಸಮರ್ಥವಾಗಿರ್ಪುದು.

### ವೃತ್ತಿ.

ಪ್ರಥಮಾರ್ಥದೊಳಂ ತೃತೀಯಾರ್ಥದೊಳಂ ಚತುರ್ಥ್ಯರ್ಥದೊಳಂ ಸಮುಚ್ಚಯದಿಂ ಪಂಚಮ್ಯರ್ಥದೊಳಂ ದ್ವಿತೀಯೆಯಕ್ಕುಂ; ತೃತೀಯಾರ್ಥದೊಳ್ ಸಪ್ತಮಿಯಕ್ಕುಂ; ಪಂಚಮ್ಯರ್ಥದೊಳ್ ತೃತೀಯೆಯಕ್ಕುಂ.

### ಪ್ರಯೋಗಂ.

ಪ್ರಥಮಾರ್ಥದ ದ್ವಿತೀಯೆಗೆ—ನುಣ್ಪುಳ್ಳನೆಂಬಲ್ಲಿ ನುಣ್ಪನುಳ್ಳಂ ಎಂದಾಯಿತು.

ತೃತೀಯಾರ್ಥದ ದ್ವಿತೀಯೆಗೆ—ದೇವರಂ ಪೂವಿಂದರ್ಚಿಸಿದನೆಂಬಲ್ಲಿ [—ಪೂಜಿಸಿದನೆಂಬಲ್ಲಿ] ಪೂವನರ್ಚಿಸಿದಂ ಎಂದಾಯ್ತು.

ಚತುರ್ಥ್ಯರ್ಥದ ದ್ವಿತೀಯೆಗೆ—ಪೊನ್ನಂ ಬಡ್ಡಿಗೆ ಕೊಟ್ಟನೆಂಬಲ್ಲಿ ಪೊನ್ನಂ ಬಡ್ಡಿಯಂ ಕೊಟ್ಟನೆಂದಾಯ್ತು.

ಪಂಚಮ್ಯರ್ಥದ ದ್ವಿತೀಯೆಗೆ—ಮಾಣಾವಕನತ್ತಣಿಂ ಕಾರ್ಯಮಂ ಬೆಸಗೊಂಡನೆಂಬಲ್ಲಿ ಮಾಣಾವಕನಂ ಕಾರ್ಯಮಂ ಬೆಸಗೊಂಡನೆಂದಾಯ್ತು. (cf. S. 128).

ತೃತೀಯಾರ್ಥದ ಸಪ್ತಮಿಗೆ—ಕೊಡಲಿಯಿಂ ಕಡಿದನೆಂಬಲ್ಲಿ ಕೊಡಲಿಯೊಳ್ಕಡಿದನೆಂದಾಯ್ತು; ಗದೆಯಿಂ ಪೊಯ್ದನೆಂಬಲ್ಲಿ ಗದೆಯೊಳ್ ಪೊಯ್ದನೆಂದಾಯ್ತು; ಕಿವಿಯಿಂ ಕೇಳ್ದನೆಂಬಲ್ಲಿ ಕಿವಿಯೊಳ್ ಕೇಳ್ದನೆಂದಾಯ್ತು (cf. S. 133).

ಪಂಚಮ್ಯರ್ಥದ ತೃತೀಯೆಗೆ—ಕೆಱೆಯತ್ತಣಿಂ ಬಂದನೆಂಬಲ್ಲಿ ಕೆಱೆಯಿಂ ಬಂದನೆಂದಾಯ್ತು; ಕರಿಶಿರದತ್ತಣಿಂ ಮುತ್ತೊಕ್ಕುಮೆಂಬಲ್ಲಿ ಕರಿಶಿರದಿಂ ಮುತ್ತೊಕ್ಕುಮೆಂದಾಯ್ತು.

ಮತ್ತಹಸ್ತಿಗಳ ಮಸ್ತಕದಿಂ ಬಿದಿರಿಂ ಫಣೀಂ
ದ್ರೋತ್ತಮಾಂಗದಿನಗುರ್ವಿಪ ಪಂದಿಯ ಕೋೞ್ಕಳಿಂ |
ಪತ್ತಿದಿಟ್ಟಗವಿಕುಂಜದೊಳೊಕ್ಕೆಳಮುತ್ತನಾ
ಯ್ದುತ್ತುಮಿರ್ಪ ಶಬರವಿಪ್ರಿಯಕಾಮಿನಿಯರ್ಕಳಿಮ್ ||ಮಣಿವಿಭೂಷಣವೃತ್ತಂ||[1]

ಆಲಿವರಲ್ಗಳುಮಿಂದ್ರಗೋಪಮುಂ ಸೂಸಿದುವಭ್ರದಿಂ ತಿಳಿಗೊಳದಿಂದೆ ಪಾಱಿದುವು ಹಂಸಕುಳಂ. (see s. S. 116).

ಸೂತ್ರಂ.

Further, instead of the Genitive and the Accusative, the *Dative* is put; instead of the Locative the Nominative, Genitive and Dative appear; and instead of the Accusative the Nominative.

ಕೃತಿಯುಕ್ತಂ ಷಷ್ಠಿಯೊಳಂ
ದ್ವಿತೀಯೆಯೊಳಮಾ ಚತುರ್ಥಿ ಸಪ್ತಮಿಯೊಳೆ ಸಂ |
ಗತಮಾ ಪ್ರಥಮಾಷಷ್ಠೀ
ಚತುರ್ಥಿಗಳ್ ಪ್ರಥಮೆಯುಂ ದ್ವಿತೀಯೆಯೊಳಕ್ಕುಂ || 136 ||

ಪದಚ್ಛೇದಂ.

ಕೃತಿಯುಕ್ತಂ ಷಷ್ಠಿಯೊಳಂ ದ್ವಿತೀಯೆಯೊಳಂ ಆ ಚತುರ್ಥಿ; ಸಪ್ತಮಿಯೊಳೆ ಸಂಗತಂ ಆ ಪ್ರಥಮಾಷಷ್ಠೀಚತುರ್ಥಿಗಳ್; ಪ್ರಥಮೆಯುಂ ದ್ವಿತೀಯೆಯೊಳ್ ಅಕ್ಕುಂ.

ಅನ್ವಯಂ.

ಷಷ್ಠಿಯೊಳಂ ದ್ವಿತೀಯೆಯೊಳಂ ಆ ಚತುರ್ಥಿ ಕೃತಿಯುಕ್ತಂ; ಸಪ್ತಮಿಯೊಳೆ ಆ ಪ್ರಥಮಾಷಷ್ಠೀಚತುರ್ಥಿಗಳ್ ಸಂಗತಂ; ದ್ವಿತೀಯೆಯೊಳ್ ಪ್ರಥಮೆಯುಂ ಅಕ್ಕುಂ.

ಟೀಕು.

ಷಷ್ಠಿಯೊಳಂ=ಷಷ್ಠೀವಿಭಕ್ತಿಯಲ್ಲಿಯುಂ; ದ್ವಿತೀಯೆಯೊಳಂ=ದ್ವಿತೀಯಾವಿಭಕ್ತಿಯಲ್ಲಿಯುಂ; ಆ ಚತುರ್ಥಿ=ಆ ಪ್ರಸಿದ್ಧವಾದ ಚತುರ್ಥೀವಿಭಕ್ತಿ; ಕೃತಿಯುಕ್ತಂ=ಕಾವ್ಯಯುಕ್ತಂ ಅಪ್ಪುದು; ಸಪ್ತಮಿಯೊಳೆ=ಸಪ್ತಮೀವಿಭಕ್ತಿಯಲ್ಲಿಯೆ; ಆ ಪ್ರಥಮಾಷಷ್ಠೀಚತುರ್ಥಿಗಳ್=ಆ ಪ್ರಥಮಾವಿಭಕ್ತಿ ಷಷ್ಠೀವಿಭಕ್ತಿ ಚತುರ್ಥೀವಿಭಕ್ತಿಗಳ್; ಸಂಗತಂ=ಸಂಗತಂಗಳ್ ಅಪ್ಪುವು; ದ್ವಿತೀಯೆಯೊಳ್=ದ್ವಿತೀಯಾವಿಭಕ್ತಿಯಲ್ಲಿ; ಪ್ರಥಮೆಯುಂ=ಪ್ರಥಮಾವಿಭಕ್ತಿಯುಂ; ಅಕ್ಕುಂ=ಅಪ್ಪುದು.

ವೃತ್ತಿ.

ಷಷ್ಠಿಯೊಳಂ ದ್ವಿತೀಯೆಯೊಳಂ ಚತುರ್ಥಿಯಕ್ಕುಂ; ಸಪ್ತಮಿಯೊಳ್ಪ್ರಥಮೆ ಷಷ್ಠಿ ಚತುರ್ಥಿಯಕ್ಕುಂ; ದ್ವಿತೀಯೆಯೊಳ್ಪ್ರಥಮೆಯಕ್ಕುಂ.

1) Called also ಕಳಾಭಾಷಣವೃತ್ತಂ; it is 4 times: — ◡ — | ◡◡◡ | — ◡◡ | — ◡◡ | — ◡◡ | — ◡ — ||

ಪ್ರಯೋಗಂ.

ಷಷ್ಠಿಯ ಚತುರ್ಥಿಗೆ—ನಾಡೊಡೆಯಂ, ನಾಱ್ಕೊಡೆಯಂ (s. S. 114); ಕೊಡೆಯೊಡೆಯಂ, ಕೊಡೆಗೊಡೆಯಂ; ಎರ್ದೆಯಾಣ್ಮಂ, ಎರ್ದೆಗಾಣ್ಮಂ.

ದ್ವಿತೀಯೆಯ ಚತುರ್ಥಿಗೆ—ಶಿಷ್ಯನಂ ಕಲ್ಪಿಸಿದನೆಂಬಲ್ಲಿ ಶಿಷ್ಯಂಗೆ ಕಲ್ಪಿಸಿದಂ; ಆಕೆಯಂ ತಿಳಿಪಿದನೆಂಬಲ್ಲಿ ಆಕೆಗೆ ತಿಳಿಪಿದಂ.

ಸಪ್ತಮಿಯ ಪ್ರಥಮೆಗೆ—ಒಂದು ದಿವಸದೊಳ್ಬಂದನೆಂಬಲ್ಲಿ ಒಂದು ದಿವಸಂ ಬಂದಂ.

ಸಪ್ತಮಿಯ ಷಷ್ಠಿಗೆ—ಚಾಗಿಗಳೊಳ್ ಬಲ್ಲಹಂ, ಚಾಗಿಗಳ ಬಲ್ಲಹಂ; ಈವರೊಳ್ದೇವಂ, ಈವರ ದೇವಂ; ರಸಿಕರೊಳ್ ಚಕ್ರವರ್ತಿ, ರಸಿಕರ ಚಕ್ರವರ್ತಿ.

ಸಪ್ತಮಿಯ ಚತುರ್ಥಿಗೆ—ತಾವರೆಯೊಳ್ ಪುಟ್ಟಿದನೆಂಬಲ್ಲಿ ತಾವರೆಗೆ ಪುಟ್ಟಿದಂ; ಬಿಂಬದೊಳ್ ತೇಜಂ, ಬಿಂಬಕ್ಕೆ ತೇಜಂ; ಅಲರೊಳ್ ಬೆಳ್ಪೆಂಬಲ್ಲಿ ಅಲರ್ಗೆ ಬೆಳ್ಪು.

ದ್ವಿತೀಯೆಯ ಪ್ರಥಮೆಗೆ—ಒಂದು ವರ್ಷಮನಿರ್ದಂ, ಒಂದು ವರ್ಷಮಿರ್ದಂ.

ಇಂತು ನುಡಿವ ಬಿನ್ನಣದಿಂ ಕಾರಕಮುಂ ನಿಯತಾರ್ಥಮೆಂದಱಿವುದು.

ಸೂತ್ರಂ.

Nouns of race (ಜಾತಿ, Collective nouns) and others are often put in the Singular with their Verb in the Plural, and the Subject (being Neuter) in the Plural is frequently followed by its Adjective (ವಿಶೇಷಣಂ) in the Singular.

ಅಕ್ಕುಂ ಜಾತಿಯೊಳೇಕ
ತ್ವಕ್ಕೆ ಬಹುತ್ವಂ ಬಹುತ್ವದೆಡೆಗೇಕತ್ವಂ |
ಪೊಕ್ಕು ವಿಶೇಷಣಮಕ್ಕುಂ
ಮೊಕ್ಕಳಮಾ ಜಾತಿಯಲ್ಲದಲ್ಲಿಯುಮೆಂಬರ್ || 137 ||

ಪದಚ್ಛೇದಂ.

ಅಕ್ಕುಂ ಜಾತಿಯೊಳ್ ಏಕತ್ವಕ್ಕೆ ಬಹುತ್ವಂ; ಬಹುತ್ವದ ಎಡೆಗೆ ಏಕತ್ವಂ ಪೊಕ್ಕು, ವಿಶೇಷಣಂ ಅಕ್ಕುಂ, ಮೊಕ್ಕಳಂ ಆ ಜಾತಿ ಅಲ್ಲದಲ್ಲಿಯುಂ ಎಂಬರ್.

ಅನ್ವಯಂ.

ಜಾತಿಯೊಳ್ ಏಕತ್ವಕ್ಕೆ ಬಹುತ್ವಂ ಅಕ್ಕುಂ; ಮೊಕ್ಕಳಂ ಆ ಜಾತಿ ಅಲ್ಲದಲ್ಲಿಯುಂ ಬಹುತ್ವದ ಎಡೆಗೆ ಏಕತ್ವಂ ಪೊಕ್ಕು, ವಿಶೇಷಣಂ ಅಕ್ಕುಂ ಎಂಬರ್.

ಟೀಕು.

ಜಾತಿಯೊಳ್=ಜಾತಿಯಲ್ಲಿ; ಏಕತ್ವಕ್ಕೆ=ಏಕವಚನಕ್ಕೆ; ಬಹುತ್ವಂ=ಕ್ರಿಯಾಪದದ ಬಹುವಚ

ನಂ; ಅಕ್ಕುಂ=ಅಪ್ಪುದು; ಪೊಕ್ಕಳಂ=ಪೆಗ್ಗಳವಾಗಿ; ಆ ಜಾತಿಯಲ್ಲದಲ್ಲಿಯುಂ=ಆ ಜಾತಿಯಲ್ಲದ ಸ್ಥಾನದಲ್ಲಿಯುಂ; ಬಹುತ್ವದ=ಬಹುವಚನದ; ಎಡೆಗೆ=ಸ್ಥಾನಕ್ಕೆ; ಏಕತ್ವಂ=ಏಕವಚನಂ; ಪೊಕ್ಕು=ಪ್ರವೇಶವಾಗಿ; ವಿಶೇಷಣಂ=ವಿಶೇಷಣಂ; ಅಕ್ಕುಂ=ಅಪ್ಪುದು; ಎಂಬರ್=ಪೇಳ್ವರ್.

## ವೃತ್ತಿ.

ಜಾತಿಯೊಳೇಕವಚನಮಿರ್ದುಂ ಬಹುವಚನಮುಂ ಪೇೞ್ವುದು; ಅದುಕಾರಣಂ ಕ್ರಿಯಾಪದಂ ಬಹುವಚನಮಾಗಲಾರ್ಪುದು. ಜಾತಿಯಲ್ಲದಲ್ಲಿಯುಂ ಬಹುವಚನಕ್ಕೇಕವಚನಂ ವಿಶೇಷಣಮಾಗಿ ಪೊಕ್ಕು, ಬಹುವಚನಮುಂ ಪೇೞ್ವುದು.

## ಪ್ರಯೋಗಂ.

ಜಾತಿಗೆ—ಆನೆ ನೂಂಕಿದುವು, ಆನೆಗಳ್ನೂಂಕಿದುವು; ಕುದುರೆ ಏಱಿದುವು, ಕುದುರೆಗಳೇಱಿದುವು; ಕಾಲಾಳ್ಕವಿದುವು, ಕಾಲಾಳ್ಗಳ್ ಕವಿದುವು.

ಜಾತಿಯಲ್ಲದಲ್ಲಿಗೆ—ಮಹೇಂದ್ರಮಹದೈಶ್ವರ್ಯಂಗಳಿವೆಲ್ಲಮಧ್ರುವಂ, ಇವೆಲ್ಲಮಧ್ರುವಂಗಳ್; ಮನಂ ಸಂಚಲಮಾದುವು, ಮನಂಗಳ್ ಸಂಚಲಂಗಳಾದುವು.

ತ್ರಿಭುವನಮುಂ ಪೇೞ್ವೊಡಂ ಕನ್ನಡದೊಳ್ ತ್ರಿಭುವನಂಗಳೆನಲಕ್ಕುಂ.

## ಸೂತ್ರಂ.

ಏಕತೆಯೆ ತನಗೆ ಬಹುತೆಯ
ನಾಕರಿಸದು ಜಾತಿ ತಾಂ ವಿಶೇಷಣಮುಖದಿಂ |
ದಾ ಕಾರಕಮೇಕತ್ವಮ
ನೇಕತ್ವಮನಾ ಕ್ರಿಯಾಪದಂ ಪಡೆಯಲೊಡಂ || 138 ||

But whenever an action-defining noun (ಕಾರಕಂ, S. 93), belonging to the Collective class, and an accompanying Adjective stand in the Singular, and also whenever such a noun and its Predicate (ಕ್ರಿಯಾಪದಂ) stand in the Singular, the Substantive (ವಿಶೇಷ್ಯಂ) always conveys the meaning of the Singular. — For the two Pronouns ಅದು and ಇದು (S. 78) the forms "ಆ" and "ಈ" are often substituted, and these can be put also before Collectives which stand in the Plural or express the sense of the Plural (cf. S. 169).

## ಪದಚ್ಛೇದಂ.

ಏಕತೆಯೆ, ತನಗೆ ಬಹುತೆಯಂ ಆಕರಿಸದು, ಜಾತಿ ತಾಂ—ವಿಶೇಷಣಮುಖದಿಂದೆ ಆ ಕಾರಕಂ ಏಕತ್ವಮಂ, ಏಕತ್ವಮಂ ಆ ಕ್ರಿಯಾಪದಂ ಪಡೆಯಲೊಡಂ.

## ಅನ್ವಯಂ.

ವಿಶೇಷಣಮುಖದಿಂದೆ ಆ ಕಾರಕಂ ಏಕತ್ವಮಂ ಆ ಕ್ರಿಯಾಪದಂ ಏಕತ್ವಮಂ ಪಡೆಯಲೊಡಂ ಜಾತಿ ತಾಂ ಏಕತೆಯೆ; ತನಗೆ ಬಹುತೆಯಂ ಆಕರಿಸದು.

### ಟೀಕು.

ವಿಶೇಷಣಮುಖದಿಂದೆ=ವಿಶೇಷಣದ ಮುಖದಿಂದೆ; ಆ ಕಾರಕಂ=ಆ ಪ್ರಸಿದ್ಧವಾದ ಕಾರಕ ಪದಂ; ಏಕತ್ವಮಂ=ಏಕವಚನಮಂ ಪಡೆಯಲೊಡನೆ; ಆ ಕ್ರಿಯಾಪದಂ=ಆ ಪ್ರಸಿದ್ಧವಾದ ಕ್ರಿಯಾ ಪದಂ; ಏಕತ್ವಮಂ=ಏಕವಚನಮಂ; ಪಡೆಯಲೊಡಂ=ಪಡೆಯಲೊಡನೆ; ಜಾತಿ=ವಿಶೇಷ್ಯವಾದ ಜಾತಿ; ತಾಂ=ತಾಂ; ಏಕತೆಯೆ=ಏಕವಚನವೆ ಅಪ್ಪುದು; ತನಗೆ=ವಿಶೇಷ್ಯವಾದ ಜಾತಿ ತನಗೆ; ಬಹುತೆಯಂ=ಬಹುವಚನಮಂ; ಆಕರಿಸದು=ಅಂಗೀಕರಿಸದು.

### ವೃತ್ತಿ.

ವಿಶೇಷಣವಾಗಿ ಕಾರಕಮೇಕವಚನದೊಳಿರ್ದೊಡಂ ಕ್ರಿಯಾಪದನೇಕವಚನದೊಳಿರ್ದೊಡಂ ವಿಶೇಷ್ಯಮಪ್ಪ ಜಾತಿಗೇಕತ್ವಮಲ್ಲದೆ ಬಹುತ್ವಮಿಲ್ಲ.

### ಪ್ರಯೋಗಂ.

ಕಾರಕಕ್ಕೆ—ಇಂತುಟಾನೆ; ಇಂತುಟು ಕುದುರೆ.

ಕ್ರಿಯೆಗೆ—ನಡೆದುದು ಹಂಸೆ; ಕೇಗಿದುದು ಸೋಗೆ; ಉಲಿದುದು ಕೋಗಿಲೆ; ಪಾಡಿದುದು ತುಂಬಿ.

ಅದು ಇದು ಎಂಬೇಕವಚನಕ್ಕೆ ಆ ಈ ಎಂಬಾದೇಶಮಾಗಿ, ಜಾತಿಯ ಏಕವಚನಕ್ಕೆ ಬಹುಳತೆಯಿಂ ಬಹುವಚನಮುಂಟು—ಆಯೆರಳೆ ಪೋದುವು; ಈ ಪುಲ್ಲೆ ಬಂದುವು.

### ಸೂತ್ರಂ.

ನೀನಱಿ ಸಂಖ್ಯೇಯದ ಸಂ
ಖ್ಯಾನದ ದೊರೆವೆತ್ತ ಭಾವದೇಕತೆ ಬಹುತಾ |
ಧೀನಂ ವಿಶೇಷಣಂ ಬಹು
ತಾನತಮೆ ವಿಶೇಷ್ಯಮೇಕವಚನಮೆಯಕ್ಕುಂ || 139 ||

When, however, nouns of a Numerical character (ಸಂಖ್ಯೇಯಂ), Numerals (ಸಂಖ್ಯಾನಂ), and nouns expressing the Natural condition of objects (ಭಾವಂ) are in the Singular, they always have the sense of the Plural. Such Substantives in the Singular may be accompanied by Adjectives in the Plural.

### ಪದಚ್ಛೇದಂ.

ನೀಂ ಅಱಿ! ಸಂಖ್ಯೇಯದ ಸಂಖ್ಯಾನದ ದೊರೆವೆತ್ತ ಭಾವದ ಏಕತೆ ಬಹುತಾಧೀನಂ; ವಿಶೇಷಣಂ ಬಹುತಾನತಮೆ, ವಿಶೇಷ್ಯಂ ಏಕವಚನಮೆ ಅಕ್ಕುಂ.

### ಅನ್ವಯಂ.

ಸಂಖ್ಯೇಯದ ಸಂಖ್ಯಾನದ ದೊರೆವೆತ್ತ ಭಾವದ ಏಕತೆ ಬಹುತಾಧೀನಂ, ನೀಂ ಅಱಿ! ವಿಶೇಷಣಂ ಬಹುತಾನತಮೆ, ವಿಶೇಷ್ಯಂ ಏಕವಚನಮೆ ಅಕ್ಕುಂ.

ಟೀಕು.

ಸಂಖ್ಯೇಯದ=ಸಂಖ್ಯಾವಸ್ತುಗಳ; ಸಂಖ್ಯಾನದ=ಸಂಖ್ಯಾವಾಚಿಗಳ; ದೊರೆವೆತ್ತ ಭಾವದ=ಪ್ರಸಿದ್ಧಿವಡೆದ ಭಾವದ; ಏಕತೆ=ಏಕವಚನಂ; ಬಹುತಾಧೀನಂ=ಬಹುವಚನದಾಧೀನಂ ಅಪ್ಪುದು; ನೀಂ=ನೀಂ; ಅಱಿ=ತಿಳಿ; ವಿಶೇಷಣಂ=ವಿಶೇಷಣಪದಂ; ಬಹುತಾನತಮೆ=ಬಹುವಚನದಾಧೀನವೆ; ವಿಶೇಷ್ಯಂ=ವಿಶೇಷ್ಯಪದಂ; ಏಕವಚನಮೆ=ಏಕವಚನವೆ; ಅಕ್ಕುಂ=ಅಪ್ಪುದು.

ವೃತ್ತಿ.

ಸಂಖ್ಯಾವಸ್ತುವಿನೊಳಂ ಸಂಖ್ಯೆಯೊಳಂ ಭಾವದೊಳಂ ನೆಲಸಿದೇಕವಚನಂ ಬಹುವಚನಮುಂ ಪೇೞ್ದುದು; ವಿಶೇಷಣಂ ಬಹುವಚನಮಾಗಲೊಡಂ ವಿಶೇಷ್ಯಮೇಕವಚನಮಾಗಲಕ್ಕುಂ.

ಪ್ರಯೋಗಂ.

ಸಂಖ್ಯೇಯಕ್ಕೆ—ಪತ್ತು ದೆಸೆ, ಪತ್ತು ದೆಸೆಗಳ್; ಮೂಲೋಕಂ, ಮೂಲೋಕಂಗಳ್; ನಾಲ್ಕು ಯುಗಂ, ನಾಲ್ಕು ಯುಗಂಗಳ್; (about ತ್ರಿಭುವನಂಗಳ್ see s. S. 137).

ಸಂಖ್ಯೆಗೆ—ಒಂದು ನಾಲ್ಕು, ಒಂದು ನಾಲ್ಕುಗಳ್; ಎರಡೈದು, ಎರಡೈದುಗಳ್; ಪತ್ತು ನೂಱು, ಪತ್ತು ನೂಱುಗಳ್.

ಭಾವಕ್ಕೆ—ಕಣ್ಗಳ ಕೂರ್ಪು, ಕಣ್ಗಳ ಕೂರ್ಪುಗಳ್; ಪೂಗಳ ಬೆಳ್ಪು, ಪೂಗಳ ಬೆಳ್ಪುಗಳ್; ಕುರುಳ್ಗಳ ಕರ್ಪು, ಕುರುಳ್ಗಳ ಕರ್ಪುಗಳ್.

ವಿಶೇಷ್ಯದೇಕವಚನಕ್ಕೆ—ನೇರಿದುವು ಬೆರಲ್; ತೋಱಿದುವು [also in M. A.] ಜಘನಂ; ಬಟ್ಟಿದುವು ಮೊಲೆ. (cf. S. 77).

ಸೂತ್ರಂ.

Adjectives which have the form of the Nominative, whereas their respective Substantives appear in other cases, receive, in parsing (ಅನ್ವಯಿಾಕಾರಂ), the case of their Substantives.

ವಿದಿತವಿಶೇಷಣಪದಮವು
ಮೊದಲ ವಿಭಕ್ತಿಗಳನಾಂತು ವಾಕ್ಯದ ಮೊದಲೊಳ್ |
ಪದವೆತ್ತುವಗ್ರಕಾರಕ
ಪದದ ವಿಭಕ್ತಿಯನೆ ತಳೆವುವನ್ವಯಮುಖದೊಳ್ || 140 ||

ಪದಚ್ಛೇದಂ.

ವಿದಿತವಿಶೇಷಣಪದಂ ಅವು ಮೊದಲ ವಿಭಕ್ತಿಗಳಂ ಆಂತು, ವಾಕ್ಯದ ಮೊದಲೊಳ್ ಪದವೆತ್ತು, ಉವು ಅಗ್ರಕಾರಕಪದದ ವಿಭಕ್ತಿಯನೆ ತಳೆವುವು ಅನ್ವಯಮುಖದೊಳ್.

### ಅನ್ವಯಂ.

ಉವು ಅನ್ವಯಮುಖದೊಳ್ ಅಗ್ರಕಾರಕಪದದ ವಿಭಕ್ತಿಯನೆ ತಳೆವುವು. ಉಳಿದದು ಯಥಾನ್ವಯಂ.

### ಟೀಕು.

ವಿದಿತ=ಪ್ರಸಿದ್ಧವಾದ; ವಿಶೇಷಣಪದಂ=ವಿಶೇಷಣಪದಂಗಳ್; ಮೊದಲ ವಿಭಕ್ತಿಗಳಂ=ಪ್ರಥಮಾವಿಭಕ್ತಿಗಳಂ; ಅಂತು=ತಾಳ್ದು; ವಾಕ್ಯದ=ವಾಕ್ಯಂಗಳ; ಮೊದಲೊಳ್=ಆದಿಯಲ್ಲಿ; ಪದವೆತ್ತು=ಪದವಾಗಿ; ಉವು=ಆ ಪ್ರಥಮಾಂತವಾದ ಪದಂಗಳ್; ಅನ್ವಯಮುಖದೊಳ್=ಅರ್ಥದ ಮುಖದಲ್ಲಿ; ಅಗ್ರ=ತುದಿಯ; ಕಾರಕಪದದ=ಕಾರಕವಾದ ಪದದ; ವಿಭಕ್ತಿಯನೆ=ವಿಭಕ್ತಿಯರ್ಥವನೆ; ತಳೆವುವು=ಧರಿಸುವುವು.

### ವೃತ್ತಿ.

ವಿಶೇಷಣಪದಂಗಳ್ಪ್ರಥಮಾವಿಭಕ್ತಿಯಂ ಪಡೆದು, ವಾಕ್ಯದ ಮೊದಲೊಳಿರ್ದು, ಅನ್ವಯಿಸುವಲ್ಲಿ ತುದಿಯ ಕಾರಕಪದದ ವಿಭಕ್ತಿಯನೆ ತಳೆವುವು.

### ಪ್ರಯೋಗಂ.

ವೀರನುದಾರಂಶುಚಿಗಂ
ಭೀರಂನಯಶಾಲಿಕೈದುವೊತ್ತರದೇವಂ |
ಗಾರೆಜಿಗನೃಪತುಂಗಂಗೆ (ಎಂಬ ಕಂದಭಾಗದೊಳ್)

ವೀರಂಗೆ ಉದಾರಂಗೆ ಶುಚಿಗೆ ಗಂಭೀರಂಗೆ ನಯಶಾಲಿಗೆ ಕೈದುವೊತ್ತರದೇವಂಗೆ ನೃಪತುಂಗಂಗೆ ಆರೆಜಿಗರೆಂಬುದನ್ವಯಂ (s. s. S. 75).

ಸಂಗರಸತ್ತ್ವಂಕುರುರಾಜಂಕರ್ಣಂಗೆ (ಎಂಬಲ್ಲಿ) ಸಂಗರಸತ್ತ್ವಂಗಂ ಕುರುರಾಜಂಗಂ ಕರ್ಣಂಗಮೆಂಬುದನ್ವಯಂ.

### ಸೂತ್ರಂ.

ಕೂಡಿ ನುಡಿವೆಡೆಯೊಳೆಂದುಂ
ಕೂಡದು ಲಿಂಗತ್ರಯಕ್ಕೆ ತರತಮಭಾವಂ |
ನೀಡುಂ ವಾಕ್ಯದ ಕಡೆಯೊಳ್
ಕೂಡಿರ್ದುದದಾವುದದುವೆ ಮುಖ್ಯಮೆನಿಕ್ಕುಂ || 141 ||

When Subjects of different *genders* have one Predicate (which must be in the Plural, S. 142), it cannot be said that one gender is domineering over the other; in such a case the Predicate simply conforms itself to the gender of the Subject last in place. (cf. S. 223).

### ಪದಚ್ಛೇದಂ.

ಕೂಡಿ ನುಡಿವ ಎಡೆಯೊಳ್ ಎಂದುಂ ಕೂಡದು ಲಿಂಗತ್ರಯಕ್ಕೆ ತರತಮಭಾವಂ; ನೀಡುಂ ವಾಕ್ಯದ ಕಡೆಯೊಳ್ ಕೂಡಿ ಇರ್ದುದು ಅದು ಆವುದು, ಅದುವೆ ಮುಖ್ಯಂ ಎನಿಕ್ಕುಂ.

ಅನ್ವಯಂ.

ಕೂಡಿ ನುಡಿವೆಡೆಯೊಳ್ ಎಂದುಂ ಲಿಂಗತ್ರಯಕ್ಕೆ ತರತಮಭಾವಂ ಕೂಡದು; ನೀಡುಂ ವಾಕ್ಯದ ಕಡೆಯೊಳ್ ಕೂಡಿರ್ದುದು ಅದು ಆವುದು, ಅದುವೆ ಮುಖ್ಯಂ ಎನಿಕ್ಕುಂ.

ಟೀಕು.

ಕೂಡಿ=ಒಂದಾಗಿ; ನುಡಿವೆಡೆಯೊಳ್=ಪೇಳ್ವ ಸ್ಥಾನದಲ್ಲಿ; ಎಂದುಂ=ಆವಾಗಳುಂ; ಲಿಂಗತ್ರಯಕ್ಕೆ=ಸ್ತ್ರೀಪುಂನಪುಂಸಕಂಗಳೆಂಬ ಲಿಂಗತ್ರಯಕ್ಕೆ; ತರತಮಭಾವಂ=ತಾರತಮ್ಯಭಾವಂ; ಕೂಡದು=ಪೊರ್ದುಗೆಯಾಗದು; ನೀಡುಂ=ವಿಶೇಷವಾಗಿ; ವಾಕ್ಯದ=ವಾಕ್ಯಂಗಳ; ಕಡೆಯೊಳ್=ಅಂತ್ಯದಲ್ಲಿ; ಕೂಡಿರ್ದುದು=ಪೊರ್ದುಗೆಯಾಗಿರ್ದುದು; ಅದು=ಅದು; ಆವುದು=ಆವುದು; ಅದುವೆ=ಆ ಲಿಂಗವೆ; ಮುಖ್ಯಂ=ವಿಶೇಷಂ; ಎನಿಕ್ಕುಂ=ಎನಿಸುವುದು.

ವೃತ್ತಿ.

ಕೂಡಿ ನುಡಿವ ಲಿಂಗತ್ರಯಕ್ಕೆ ತಮ್ಮೊಳ್ಮುಖ್ಯತೆಯಮುಖ್ಯತೆಯುಮಿಲ್ಲ; ವಾಕ್ಯದ ಕಡೆಯೊಳಾವ ಲಿಂಗಮಿರ್ದೊಡದುವೆ ಮುಖ್ಯಮಕ್ಕುಂ.

ಪ್ರಯೋಗಂ.

ಸೇನೆಯುಮರಸಿಯುಮರಸನುಂ ಬಂದರ್; ಆನೆಯುಮರಸನುಮರಸಿಯುಂ ಬಂದರ್; ಅರಸನುಮರಸಿಯುಂ ಬಂದರ್; ಅರಸನುಂ ಅರಸಿಯುಂ ಚತುರಂಗಬಲಮುಂ ಬಂದುವು (—ಬಂದುದು ಎಂತ ಪಾಠಾಂತರಂ).

ಸೂತ್ರಂ.

ವ್ಯವಹರಿಸುವಿನಂ ಪ್ರಥಮೈ
ಕವಚನಮುಂ ಪಲವನೋದಿ ವಾಕ್ಯದ ನಿರ್ವಾ |
ಹವನಳವಡಿಪೆಡೆಯೊಳ್ಪುಗಿ
ಸುವರ್ಕ್ರಿಯಾನೇಕವಚನಮುಂ ಮಾರ್ಗವಿದರ್ || 142 ||

The Verb at the end of a sentence (ವಾಕ್ಯನಿರ್ವಾಹಂ) preceded by several subjects in the Singular, takes the form of the Plural by way of supplying (or inference, ಅಧ್ಯಾಹಾರಂ).

ಪದಚ್ಛೇದಂ.

ವ್ಯವಹರಿಸುವಿನಂ ಪ್ರಥಮೈಕವಚನಮುಂ ಪಲವಂ ಓದಿ ವಾಕ್ಯದ ನಿರ್ವಾಹವಂ ಅಳವಡಿಪ ಎಡೆಯೊಳ್ ಪುಗಿಸುವರ್ ಕ್ರಿಯಾನೇಕವಚನಮುಂ ಮಾರ್ಗವಿದರ್.

ಅನ್ವಯಂ.

ಪ್ರಥಮೈಕವಚನಮುಂ ಪಲವಂ ಓದಿ ವ್ಯವಹರಿಸುವಿನಂ ವಾಕ್ಯದ ನಿರ್ವಾಹವಂ ಅಳವಡಿಪೆಡೆಯೊಳ್ ಕ್ರಿಯಾನೇಕವಚನಮುಂ ಮಾರ್ಗವಿದರ್ ಪುಗಿಸುವರ್.

ಟೀಕು.

ಪ್ರಥಮೈಕವಚನಮಂ=ಪ್ರಥಮಾವಿಭಕ್ತಿಯ ಏಕವಚನಮಂ; ಪಲವಂ=ಹಲವಂ; ಓದಿ=ಹೇಳಿ; ವ್ಯವಹರಿಸುವಿನಂ=ವ್ಯವಹರಿಸುತ್ತಿರೆ; ವಾಕ್ಯದ=ವಾಕ್ಯಂಗಳ; ನಿರ್ವಾಹವಂ=ನಿರ್ಣಯಮಂ; ಅಳವಡಿಪೆಡೆಯೊಳ್=ಅಳವಡಿಸುವ ಸ್ಥಾನದಲ್ಲಿ; ಕ್ರಿಯಾ=ಕ್ರಿಯಾಪದದ; ಅನೇಕವಚನಮಂ=ಬಹುವಚನಮಂ; ಮಾರ್ಗವಿದರ್=ವೈಯಾಕರಣಮಾರ್ಗವಿದರ್; ಪುಗಿಸುವರ್=ಪ್ರವೇಶವಂ ಮಾಡುವರ್.

ವೃತ್ತಿ.

ಪ್ರಥಮೈಕವಚನಮಂ ಮೊದಲೊಳ್ಪಲವಂ ಪೇಳ್ದು, ವಾಕ್ಯನಿರ್ವಾಹದೊಳ್ ಕ್ರಿಯಾಬಹುವಚನಮಂ ಪೊಗಿಸುವರ್.

ಪ್ರಯೋಗಂ.

ಅವತಂಸೋತ್ಪಲ-ತಾಡನಂ, ಕನಕ-ಕಾಂಚೀ-ಬಂಧನಂ, ನೂಪುರಾ
ರವ-ಝುಂಕಾರಿತ-ಚಾರು-ವಾಮ-ಚರಣಾಘಾತಂ, ಚಲದ್ಭ್ರೂಲತಾ |
ಗ್ರ-ವಿಭಾಗೋತ್ಕಟ-ತರ್ಜನಂ, ತರಳತಾ-ತಾಮ್ರಾಧರಂ ಚಕ್ರಿಗಿ
ತ್ತುವಲಂಪಂ ಪ್ರಣಯ-ಪ್ರಕೋಪ-ಸಮಯ-ಪ್ರಾರಂಭದೊಳ್ಕಾಂತೆಯಾ ||

ಮತ್ತೇಭವಿಕ್ರೀಡಿತವೃತ್ತಂ || 1)

ಚಕ್ರಿಗಿತ್ತುವು ಅಲಂಪಂ ಎಂಬಲ್ಲಿ ಇವೆಲ್ಲವೆಂಬುದಧ್ಯಾಹಾರಮಾಗಿ (—ಅಧ್ಯಾಹಾರ್ಯಮಾಗಿ) ಬಹುವಚನಂ ಸಲ್ಗುದು.

ಸೂತ್ರಂ.

ಅವನವಳದೆಂಬಿವಿರ್ದಂ
ತೆವೊಲಿರ್ದಪುವಾವನಾವಳಾವುದು ತಾನೆಂ |
ಬಿವಮಂ ಪಾರದೆ ನಿಲಲಱಿ
ಯವನ್ವಯಂ ತಾಗುವಲ್ಲಿ ವಾಕ್ಯೋವಿದರಿಂ || 143 ||

ಅವಂ, ಅವಳ್ (cf. Ss. 150; 154), ಅದು (S. 138) may, in the logical connexion of words (ಅನ್ವಯಂ), stand by themselves (at the end of a relative-demostrative compound or where such a compound might be construed, cf. S. 73); but ಆವಂ, ಆವಳ್, ಆವುದು (cf. S. 151), where they occur in such a connexion, require a following ಅವಂ, ಅವಳ್, ಅದು. This last rule holds good also, in its way, regarding ತಾನು.

ಪದಚ್ಛೇದಂ.

ಅವಂ ಅವಳ್ ಅದು ಎಂಬ ಇವು ಇರ್ದ ಅಂತೆವೊಲ್ ಇರ್ದಪುವು; ಆವಂ ಆವಳ್ ಆವುದು ತಾಂ ಎಂಬ ಇವು ಅವಂ ಪಾರದೆ, ನಿಲಲ್ ಅಱಿಯವು, ಅನ್ವಯಂ ತಾಗುವಲ್ಲಿ ವಾಕ್ಯೋವಿದರಿಂ.

1) This is 4 times: ◡◡ — | — ◡◡ | — ◡ — | ◡◡◡ | — — — | ◡ — — | ◡ — ||

### ಅನ್ವಯಂ.

ವಾಕ್ಯೋವಿದರಿಂ ಅನ್ವಯಂ ತಾಗುವಲ್ಲಿ. ಉಳಿದದು ಯಥಾನ್ವಯಂ.

### ಟೀಕು.

ವಾಕ್ಯೋವಿದರಿಂ=ವಾಕ್ಯಾರ್ಥರಿಂದೆ; ಅನ್ವಯಂ ತಾಗುವಲ್ಲಿ=ಸಂಘಟನೆಯಾಗುವಲ್ಲಿ; ಅವಂ=ಅವನೆಂದು; ಅವಳ್=ಅವಳೆಂದು; ಅದು=ಅದೆಂದು; ಎಂಬಿವು=ಎಂಬೀ ಪದಂಗಳ್; ಇರ್ದಂತೆವೊಲ್=ಇರ್ದ ಹಾಂಗೆ; ಇರ್ದಪುವು=ಇರುತಿರ್ಪುವು; ಆವಂ=ಆವನೆಂದುಂ; ಆವಳ್=ಆವಳೆಂದುಂ; ಆವುದು=ಆವುದೆಂದುಂ; ತಾಂ=ತಾನೆಂದುಂ; ಎಂಬಿವು=ಎಂಬೀ ಪದಂಗಳ್; ಅವಂ=ಆ ಪದಂಗಳಂ; ಪಾರದೆ=ಬಯಸದೆ; ನಿಲಲಱಿಯವು=ಇರಲಱಿಯವು.

### ವೃತ್ತಿ.

ಅವಂ ಅವಳ್ ಅದು ಎಂಬಿವನ್ವಯಸ್ವತಂತ್ರಂಗಳ್; ಆವಂ ಆವಳ್ ಆವುದು ತಾನೆಂಬಿವು ಅವಂ ಅವಳ್ ಅದು ಎಂಬಿವಂ ಪಾರದೆ ಅನ್ವಯಿಸಿ ಕೊಳಲಱಿಯವಾಗಿ, ಪರತಂತ್ರಂಗಳ್.

### ಪ್ರಯೋಗಂ.

ಸ್ವತಂತ್ರಾನ್ವಯಕ್ಕೆ—ಪೊನ್ನುಳ್ಳವನೆ ಕುಲೀನನೆಂದೊಡೆ, ಆವಂ ಪೊನ್ನುಳ್ಳವನೆ ಕುಲೀನನೆನವೇಡ; ಸೊಬಗುಳ್ಳವಳೆ ಪೆಣ್ಣೆಂದೊಡೆ, ಆವಳ್ ಸೊಬಗುಳ್ಳವಳೆ ಪೆಣ್ಣೆನವೇಡ; ಅದೆ ರೂಢಮೆಂದೊಡೆ, ಆವುದು ರೂಢಿಯನುಳ್ಳದದುವೆ ಲೇಸೆನವೇಡ.

ಪರತಂತ್ರಾನ್ವಯಕ್ಕೆ—ಆವನಧಿಕಪುಣ್ಯಾನವನೆ ಸೇವ್ಯಂ; ಆವಳ್ ಪತಿವ್ರತೆಯವಳೆ ಮಾನ್ಯೆ; ಆವುದು ಚೆಲ್ವಾದುದದು ದರ್ಶನೀಯಂ;—ತಾನವಂ ಚದುರಂ; ತಾನವಳ್ ಚದುರೆ; ತಾನದು ಪಿರಿದು. ಇದು ವಾಕ್ಯಾನ್ವಯಂ.

### ಸೂತ್ರಂ.

ಯುಗಳಾರ್ಥದ ಬಹುವಚನ
ಕ್ಕೊಗೆತಂದಾವಿಷ್ಟಲಿಂಗದೆಡೆಗೇಕತ್ವಂ |
ನೆಗಟ್ದುಂ[1] ಕ್ರಿಯಾವಿಶೇಷಣ
ಮಗಲದೆ ನಿಂದೆಡೆಗಮಱಿವರಿಂದೇಕತ್ವಂ || 144 ||

In words denoting a Pair (ಯುಗಳಾರ್ಥಂ) and in words of All-entering (ಆವಿಷ್ಟಲಿಂಗಂ) the Singular is used instead of the Plural. Adverbs (ಕ್ರಿಯಾವಿಶೇಷಣಂ, although they may have a Plural sense for the variety of manner possibly included in them) stand in the Singular.

### ಪದಚ್ಛೇದಂ.

ಯುಗಳಾರ್ಥದ ಬಹುವಚನಕ್ಕೆ ಒಗೆತಂದ ಆವಿಷ್ಟಲಿಂಗದ ಎಡೆಗೆ ಏಕತ್ವಂ ನೆಗಟ್ದುಂ; ಕ್ರಿಯಾವಿಶೇಷಣಂ ಅಗಲದೆ ನಿಂದೆಡೆಗಂ ಅಱಿವರಿಂದೆ ಏಕತ್ವಂ.

1) This also is an instance of ಶಿಥಿಲತ್ವಂ; vide the end of S. 36.

ಯಥಾನ್ವಯಂ.

ಟೀಕು.

ಯುಗಳಾರ್ಥದ=ಎರಡು ವಸ್ತುವಿನರ್ಥದ; ಬಹುವಚನಕ್ಕೆ=ಬಹುವಚನಕ್ಕೆ; ಒಗೆತಂದ=ಹುಟ್ಟಿ ಬಂದ; ಆವಿಷ್ಟಲಿಂಗದ=ಆವಿಷ್ಟವೆಂಬ ಲಿಂಗದ (of a noun in which, as it stands, all genders and numbers are included); ಎಡೆಗೆ=ಸ್ಥಾನಕ್ಕೆ; ಏಕತ್ವಂ=ಏಕವಚನಂ; ನೆಗಲ್ಗುಂ=ಪ್ರಾಪ್ತಿಸುವದು; ಕ್ರಿಯಾವಿಶೇಷಣಂ=ಕ್ರಿಯಾವಿಶೇಷಣಂ; ಅಗಲದೆ=ತೊಲಗದೆ; ನಿಂದೆಡೆಗಂ=ನೆಲೆಗೊಂಡ ಸ್ಥಾನಕ್ಕೆಯುಂ; ಅಱಿವರಿಂದೆ=ಬಲ್ಲವರಿಂದೆ; ಏಕತ್ವಂ=ಏಕವಚನಂ ಪ್ರಾಪ್ತಿಸುವದು.

ವೃತ್ತಿ.

ಯುಗಳಾರ್ಥದೊಳ್ವರ್ತಿಸುವ ಬಹುವಚನಕ್ಕಮಾವಿಷ್ಟಲಿಂಗಕ್ಕಂ ಕ್ರಿಯಾವಿಶೇಷಣಕ್ಕಂ ಬಲ್ಲರಿಂದೇಕವಚನಮಕ್ಕುಂ.

ಪ್ರಯೋಗಂ.

ಪದಯುಗಳಂಗಳ್ಗೆ—ಪದಯುಗಂ.

ಆವಿಷ್ಟಲಿಂಗಕ್ಕೆ—ವೇದಂಗಳ್ಪ್ರಮಾಣಂ; ಪ್ರತಿಭೆಯುಮಭ್ಯಾಸಮುಂ ವಿದ್ವತ್ಸೇವೆಯುಂ ಕಾವ್ಯಪರಿಚಯಮುಂ ಕವಿತೆಗೆ ಕಾರಣಂ.

ಕ್ರಿಯಾವಿಶೇಷಣಕ್ಕೆ—ಏನೆಂಬ ಪೆಂಪೊ! ಎಂತಹವರ್ಗಳೆಂಬ (see S. 160) ಪೇರ್ಮೆಯೊ! (ಎಂಬಲ್ಲಿ) ಏನ್ ಎಂಬೀ ಕ್ರಿಯೆಗೆ ಏನ್ ಎಂಬ ಕಾರಕಂ ವಿಶೇಷಣಮಾಗಿ, ಬಹುವಚನಮಾಯ್ತು. [ಎಂಥಾವರ್ಗಳೆಂಬ ಕ್ರಿಯಾವಿಶೇಷಣಂ ಪ್ರತ್ಯೇಕಂ ಸಂಬಂಧಂ].

ಏನೆಂಬ ಪೆಂಪೊ ಮನುವುಂ
ತಾನುಂ ಸಚ್ಚರಿತರಮರಕುಜಮುಂ ತಾನುಂ |
ದಾನಿಗಳಂಭೋನಿಧಿಯುಂ
ತಾನುಂ ಗಂಭೀರನೆನಿಪನುದಯಾದಿತ್ಯಂ || ಕಂದಂ ||

ತಿಬ್ಬಂ ಮಾಡಿದಂ=ತಿಬ್ಬವೆಹಗಹುದಹಗೆ ಮಾಡಿದಂ; ದೋಷರಹಿತಂ ಪೇೞ್ದಂ=ದೋಷರಹಿತವೆಹಗಹುದಹಗೆ ಪೇೞ್ದಂ[1]. ಇದೀಗ ಕ್ರಿಯಾವಿಶೇಷಣಂ.

ಸೂತ್ರಂ.

In each sentence there must be a

ಸಾರಮುದಧ್ಯಾರೋಪಂ
ಕಾರಕಕಂ ಕ್ರಿಯೆಗಮುಗಲೆ ನೇಯದ ದೋಷಂ |

1) ಎಹಗೆ=ಹ್ಯಾಗೆ; ಅಹಗೆ=ಹಾಗೆ; (ಇಹಗೆ=ಹೀಗೆ).

proper Construction (ನೇಯಂ; s. S. 281). Thus the action-defining noun

ಧೀರರ್ಕಳಿಂ ವಿಶಂಕೆಯೆ
ಕಾರಕ್ಕಂ ಪೇೞ್ವುದಾ ಸಮುಚ್ಚಯದುಮುಗಂ || 145 ||

(ಕಾರಕಂ), the meaning of the action (or verb, ಕ್ರಿಯೆ, whether to be inferred or whether expressed), the number of ಎ which express suspicion or uncertainty (ವಿಶಂಕೆ, S. 314), and the different ಉಂ which are conjunctions (ಸಮುಚ್ಚಯಾರ್ಥಂ, S. 122b) must be rightly assigned (ಅಧ್ಯಾರೋಪಂ; cf. S. 142). Further the distinction of Subjects which have one Predicate (ವಾಕ್ಯದೀಪಕಂ) is required, and the action-defining noun's cases must be supplied (or assigned).

## ಪದಚ್ಛೇದಂ.

ಸಾರಂ ಅದು ಅಧ್ಯಾರೋಪಂ ಕಾರಕಕಂ ಕ್ರಿಯೆಗಂ, ಅಗಲೆ ನೇಯದ ದೋಷಂ; ಧೀರರ್ಕಳಿಂ ವಿಶಂಕೆಯ ಎಕಾರಕ್ಕಂ ಪೇೞ್ವಿದು ಆ ಸಮುಚ್ಚಯದ ಉಮುಗಂ.

## ಅನ್ವಯಂ.

ಕಾರಕಕಂ ಕ್ರಿಯೆಗಂ ಅಧ್ಯಾರೋಪಂ ಅದು ಸಾರಂ, ಅಗಲೆ ನೇಯದ ದೋಷಂ; ಧೀರರ್ಕಳಿಂ ವಿಶಂಕೆಯ ಎಕಾರಕ್ಕಂ ಆ ಸಮುಚ್ಚಯದ ಉಮುಗಂ ಪೇೞ್ವಿದು.

## ಟೀಕು.

ಕಾರಕಕಂ=ಕಾರಕಕ್ಕೆಯುಂ; ಕ್ರಿಯೆಗಂ=ಕ್ರಿಯೆಗೆಯುಂ; ಅಧ್ಯಾರೋಪಂ=ಅಧ್ಯಾಹಾರಂ; ಅದು=ಅದು; ಸಾರಂ=ಶ್ರೇಷ್ಠವಾಗಿರ್ಪುದು; ಅಗಲೆ=ಹೊಂದುಗೆಯಾಗದಿರೆ; ನೇಯದ ದೋಷಂ=ನೇಯದ ದೋಷಂ ಬರ್ಪುದು; ಧೀರರ್ಕಳಿಂ=ವಿದ್ವಾಂಸರಿಂದೆ; ವಿಶಂಕೆಯ=ವಿಶಂಕಾರ್ಥದ; ಎಕಾರಕ್ಕಂ=ಎತ್ವಕ್ಕೆಯುಂ; ಆ ಸಮುಚ್ಚಯದ=ಆ ಸಮುಚ್ಚಯಾರ್ಥದ; ಉಮುಗಂ=ಉಂಕಾರಕ್ಕೆಯುಂ; ಪೇೞ್ವಿದು=ಅಧ್ಯಾಹಾರಮಂ ಪೇಳ್ವುದು.

## ವೃತ್ತಿ.

ಕಾರಕಕ್ಕಂ ಕ್ರಿಯೆಗಂ ನೇಯದ ದೋಷಮಿಲ್ಲದಂತಧ್ಯಾರೋಪಮಂ ಮಾೞ್ಪುದು; ವಿಶಂಕೆಯ ಎತ್ವಕ್ಕೆಯುಂ ಸಮುಚ್ಚಯದುಮುವಿಗಂ ಅಧ್ಯಾರೋಪಮುಂಟು. ತಾಂ ಮಾಡಿದಧ್ಯಾರೋಪಮಸಮರ್ಥಮಾಗಿ ಮತ್ತೆ ಕೆಲವರ್ಕೆ ಪತ್ತುವೊಡೆ ಅದು ನೇಯದ ದೋಷಂ.

## ಪ್ರಯೋಗಂ.

ನೇಯಕ್ಕೆ (M. B.)—

ಆರಕ್ತಮಾಗಿ ನೇಱಲ
ದೊರೆಯನ್ನನುಕರಿಪುದಾದುದಾಗಸಮೆನೆ ಸಂ |
ಧ್ಯಾರುಚಿಯಿನಕ್ಕುಮೆಂದವ
ಧಾರಿಸಿ ನೆಱೆಯಱದು ಕೊಳ್ವುದಿದನೇಯಾರ್ಥಂ || ಕಂದಂ ||

ಸಂಧ್ಯಾರುಚಿಯಿನೆಂದು ಬಗೆವುದನೇಯುಂ, ಕೆಂಧೂಳಿಯಿಂದಾಗಸಂ ಕೆಂಪಾದುದಾಗಿ.

ಕಾರಕಕ್ಕೆ—ಏಕೆ? ನಿರ್ವಾಹಣಕ್ಕೆ ಸಲ್ಗುವೊ, ಪೂಣ್ದೊಡಂ ಕೃತಿಬಂಧಮುಂ? ಎಂಬಲ್ಲಿ ಕೃತಿಬಂಧಮೆಂಬುದಧ್ಯಾಹಾರ್ಯಂ. ಕರ್ಣನುಂ ದಾನಿ ಮೇಣಾರ್ತನುಮೆಂಬಲ್ಲಿ ದಾನಿಯೆಂಬುದಧ್ಯಾರೋಪಂ.

ಕ್ರಿಯೆಗೆ—ಪುರುಷೋತ್ತಮಂ ಮನುಷ್ಯಮಾತ್ರಮೆಯೆನೆ, ಅಲ್ಲಮೆಂಬುದಧ್ಯಾಹಾರ್ಯಂ. ಧೃತರಾಷ್ಟ್ರಂ ನುಡಿದಾರ್ತ್ತನೆ ಹರಿಭರಂ ಗೈದಾರ್ತ್ತನೆಯೆಂದೊಡೆ ಆರನೆಂಬುದಧ್ಯಾಹಾರ್ಯಂ. [ಆಱನೆ—M. A. and B.] (-ದಾರ್ತನೆ—ದಾರ್ತನೆ).

ವಿಶಂಕೆಯ ಎತ್ತಕ್ಕೆ—ಉಱಿಮಂಜಮೆ? ಬೆರ್ಚಮೆ? ಬೆಸಕೆಱಗೆಮೆ? ದೇವ! ಎಂಬಲ್ಲಿ ಉಱಿಮೆಯೆಂಬೆತ್ತಮಧ್ಯಾಹಾರ್ಯಂ.

ಸಮುಚ್ಚಯದುಮುವಿಂಗೆ—ಆಯುಂ ಸಿರಿ ತಾಯುಂ ತಂದೆ ಕಣ್ಣುಂ ಗತಿಯೆನಿಸಿದಪಂ ಸಿಂಹಸೇನಕ್ಷಿತೀಶನೆಂಬಲ್ಲಿ ಕಡೆಯ ಸಮುಚ್ಚಯದುಮ್ ಅಧ್ಯಾಹಾರ್ಯಂ.

ವಾಕ್ಯದೀಪಕಂ ಪ್ರತ್ಯೇಕಸಂಬಂಧಂ—ಆತನುಮವನುಂ ಬಂದನೆಂಬಲ್ಲಿ ಆತನುಂ ಬಂದಂ, ಅವನುಂ ಬಂದನೆಂದು ಮಾಳ್ಪುದು.

ಕಾರಕಮುಖದಿಂ ವಿಭಕ್ತಿಪರಿಣಾಮಿಸುವುದಾಗಿ, ವಿಭಕ್ತಿಪರಿಣಾಮಕ್ಕೆ—

ಕಡುಗಲಿ! ಸೆಣಸುವ ಭಟರಾರ್?
ಒಡೆಯುಂಗತಿಹಿತವರಾರ್? ಧುರಕ್ಕೊದಗುವರಾರ್? |
ತೊಡರ್ದೊಡೆ ಭಂಗಂ ಬರ್ಕುಂ.
ಸಡಗರಮಿದು! ಜಯಮೆ ಮೆಱೆವುದಱ ಬೊಪ್ಪಲನಂ (ಬಪ್ಪಲನಂ)! ||ಕಂದಂ||

ಕಡುಗಲಿಯೆಂಬಲ್ಲಿ ಆತನೆಂಬ ಪ್ರಥಮೆಯುಂ, ಸೆಣಸುವ ಭಟರಾರ್ ಎಂಬಲ್ಲಿ ಆತನನೆಂಬ ದ್ವಿತೀಯೆಯುಂ, ಒಡೆಯುಂಗತಿಹಿತವರಾರ್ ಎಂಬಲ್ಲಿ ಆತನಿಂ ಎಂಬ ತೃತೀಯೆಯುಂ, ಧುರಕ್ಕೊದಗುವರಾರ್ ಎಂಬಲ್ಲಿ ಆತಂಗೆಂಬ ಚತುರ್ಥಿಯುಂ, ತೊಡರ್ದೊಡೆ ಭಂಗಂ ಬರ್ಕುಮೆಂಬಲ್ಲಿ ಆತನತ್ತಣಿಂದೆಂಬ ಪಂಚಮಿಯುಂ, ಸಡಗರಮಿದೆಂಬಲ್ಲಿ ಆತನ ಎಂಬ ಷಷ್ಠಿಯುಂ, ಜಯಮೆ ಮೆಱೆವುದೆಂಬಲ್ಲಿ ಆತನೊಳೆಂಬ ಸಪ್ತಮಿಯುಂ; ಈ ತೆಱದಿನಧ್ಯಾರೋಪಿಸಿ ಕೊಳ್ವುದು.

ಸೂತ್ರಂ.

The Declension of the Pronouns ಆಂ, ನೀಂ, ತಾಂ

ಪೀನಂ ಪ್ರಥಮೆಗೆ ನೀನಾ
ನ್ತಾನೆಂದಱ ನಿನಗೆಯೆನಗೆ ತನಗೆಂದು ಚತು |

(ಆನ್, ನೀನ್, ತಾನ್; ಆಮ್, ನೀಮ್, ತಾಮ್; see Ss. 104; 161) in the Singular. (Their Plural appears in Ss. 147, 148).

ಥೀಕ್ಷ್ಯೀರ್ನಿರ್ದೇಶಕ್ಕಿತರ
ಸ್ಥಾನಕ್ಕಸ್ವರದಿನಿರ್ಪ ನಿನ್ ಎನ್ ತಂಗಳ್ || 146 ||

ಪದಚ್ಛೇದಂ.

ಪೇನಂ, ಪ್ರಥಮೆಗೆ ನೀಂ ಆಂ ತಾಂ ಎಂದು, ಅಱಿ! ನಿನಗೆ ಎನಗೆ ತನಗೆ ಎಂದು, ಚತುರ್ಥೀ ನಿರ್ದೇಶಕ್ಕೆ; ಇತರಸ್ಥಾನಕ್ಕೆ ಅಸ್ವರದಿಂ ಇರ್ಪ ನಿನ್ ಎನ್ ತಂಗಳ್.

ಅನ್ವಯಂ.

ಇತರಸ್ಥಾನಕ್ಕೆ ಅಸ್ವರದಿಂ ಇರ್ಪ ನಿನ್ನೆಂತಂಗಳ್ ಪೇನಂ ಪ್ರಥಮೆಗೆ, ನೀಂ ಆಂ ತಾಂ ಎಂದು, ಅಱಿ! ಚತುರ್ಥೀನಿರ್ದೇಶಕ್ಕೆ ನಿನಗೆ ಎನಗೆ ತನಗೆ ಎಂದು.

ಟೀಕು.

ಇತರಸ್ಥಾನಕ್ಕೆ=ಪ್ರಥಮೆ ಚತುರ್ಥಿಯಲ್ಲದುಳಿದ ವಿಭಕ್ತಿಸ್ಥಾನಕ್ಕೆ; ಅಸ್ವರದಿಂ=ವ್ಯಂಜನರೂಪದಿಂದೆ; ಇರ್ಪ ನಿನ್ನೆಂತಂಗಳ್=ಇರ್ಪ ನಿನ್ ಎನ್ ತನ್ ಎಂಬಿವು; ಪೇನಂ=ವಿಶೇಷವಾಗಿ; ಪ್ರಥಮೆಗೆ=ಪ್ರಥಮಾವಿಭಕ್ತಿಗೆ; ನೀಂ=ನೀನೆಂದು; ಆಂ=ಆನೆಂದು; ತಾಂ=ತಾನೆಂದು; ಅಱಿ=ತಿಳಿ; ಚತುರ್ಥೀನಿರ್ದೇಶಕ್ಕೆ=ಚತುರ್ಥೀವಿಭಕ್ತಿಯ ನಿರ್ಣಯಕ್ಕೆ; ನಿನಗೆ=ನಿನಗೆ ಎಂದು; ಎನಗೆ=ಎನಗೆ ಎಂದು; ತನಗೆ=ತನಗೆ ಎಂದು ತಿಳಿ.

ವೃತ್ತಿ.

ಪಿರಿದುಂ ಪ್ರಥಮೆಗೆ ನೀನ್ ಆನ್ ತಾನ್ ಎಂದಱಿವುದು; ಚತುರ್ಥಿಗೆ ನಿನಗೆ ಎನಗೆ ತನಗೆ ಎಂದಱಿವುದು. ಮಿಕ್ಕೆಡೆಯೊಳ್ ಸ್ವರರಹಿತವಾಗಿ, ನಿನ್ ಎನ್ ತನ್ ಎಂದು, ಪ್ರಕೃತಿಯಪ್ಪುವು.

ಪ್ರಯೋಗಂ.

ವಿಭಕ್ತಿಯೋಗಕ್ಕೆ—ನಿನ್ನಂ, ನಿನ್ನಿಂ, ನಿನ್ನತ್ತಣಿಂ, ನಿನ್ನ, ನಿನ್ನೊಳ್. ಪ್ರಥಮೆ ಚತುರ್ಥಿಗಳ್ ಸೂತ್ರದೊಳ್ಪೇೞ್ದುವು.

ಸೂತ್ರಂ.

ನಿನತೆನತು ತನತೆನಿಪ್ಪಿವು
ಜನಿಯಿಸುಗುಂ ನಿನ್ನದೆನ್ನದುಂ ತನ್ನದೆನಿ |
ಪ್ಪಿನಿತಱೊಳಂ ಮೇಣ್ ದ್ವಿತ್ವದಿ
ನನೇಕದೊಳ್ನತ್ವದೆಡೆಗೆ ಮತ್ವಂ ಬರೆಯುಂ || 147 ||

For ನಿನ್ನದು (ನಿನ್ನ+ಅದು), ಎನ್ನದು, ತನ್ನದು may be substituted ನಿನತು, ಎನತು, ತನತು, or ನಿನತ್ತು, ಎನತ್ತು, ತನತ್ತು. The Pronouns' Plural is ನಿಮತು, ಎಮತು, ತಮತು, or ನಿಮತ್ತು, ಎಮತ್ತು, ತಮತ್ತು. (cf. S. 77).

### ಪದಚ್ಛೇದಂ.

ನಿನತು ಎನತು ತನತು ಎನಿಪ್ಪ ಇವು ಜನಿಯಿಸುಗುಂ ನಿನ್ನದು ಎನ್ನದುಂ ತನ್ನದು ಎನಿಪ್ಪ ಇನಿತಱೊಳಂ ಮೇಣ್ ದ್ವಿತ್ವದಿಂ, ಅನೇಕದೊಳ್ ನತ್ವದ ಎಡೆಗೆ ಮತ್ವಂ ಬರೆಯುಂ.

### ಅನ್ವಯಂ.

ನಿನ್ನದು ಎನ್ನದುಂ ತನ್ನದು ಎನಿಪ್ಪಿನಿತಱೊಳಂ ನಿನತು ಎನತು ತನತು ಎನಿಪ್ಪಿವು ಮೇಣ್ ದ್ವಿತ್ವದಿಂ ಜನಿಯಿಸುಗುಂ, ಅನೇಕದೊಳ್ ನತ್ವದ ಎಡೆಗೆ ಮತ್ವಂ ಬರೆಯುಂ.

### ಟೀಕು.

ನಿನ್ನದು=ನಿನ್ನದೆಂದು; ಎನ್ನದುಂ=ಎನ್ನದೆಂದುಂ; ತನ್ನದು=ತನ್ನದೆಂದು; ಎನಿಪ್ಪ=ಎನಿಸುವ; ಇನಿತಱೊಳಂ=ಇಷ್ಟಱಲ್ಲಿಯುಂ; ನಿನತು=ನಿನತೆಂದು; ಎನತು=ಎನತೆಂದು; ತನತು=ತನತೆಂದು; ಎನಿಪ್ಪ=ಎನಿಸುವ; ಇವು=ಈ ಶಬ್ದಂಗಳ್; ಮೇಣ್=ವಿಕಲ್ಪದಿಂದೆ; ದ್ವಿತ್ವದಿಂ=ಒತ್ತಿನೊಡನೆ; ಜನಿಯಿಸುಗುಂ=ಹುಟ್ಟುವುವು; ಅನೇಕದೊಳ್=ಬಹುವಚನದಲ್ಲಿ; ನತ್ವದ=ನಿನ್ನದೆನ್ನದು ತನ್ನದೆಂಬ ನಕಾರದ; ಎಡೆಗೆ=ಸ್ಥಾನಕ್ಕೆ; ಮತ್ವಂ=ನಿಮ್ಮದೆಮ್ಮದು ತಮ್ಮದೆಂದು ಮಕಾರಂ; ಬರೆಯುಂ=ಬಂದೊಡಂ, ವಿಕಲ್ಪದಿಂದೆ, ನಿಮತ್ತು ಎಮತ್ತು ತಮತ್ತು ಎಂದು, ದ್ವಿತ್ವದಿಂ ಹುಟ್ಟುವದು.

### ವೃತ್ತಿ.

ನಿನ್ನದು ಎನ್ನದು ತನ್ನದು ಎಂಬಿವರ್ಕೆ ನಿನತು ಎನತು ತನತು ಎಂದಾದೇಶಮಕ್ಕುಂ; ಮೇಣೆಂಬ ವಿಕಲ್ಪದಿಂದವರ್ಕೆ ದ್ವಿತ್ವಮುಂಟು—ನಿನತ್ತು ಎನತ್ತು ತನತ್ತು ಎಂದು. ನಿನತು ಎನತು ತನತು ಎಂಬ ನಕಾರಕ್ಕೆ ಬಹುವಚನದೊಳ್ ಮತ್ವಮುಂಟು—ನಿಮತು ಎಮತು ತಮತು. ವಿಕಲ್ಪದಿಂದವಱ ದ್ವಿರ್ಭಾವಮುಂಟು—ನಿಮತ್ತು ಎಮತ್ತು ತಮತ್ತು ಎಂದು.

### ಪ್ರಯೋಗಂ.

ನಿನತಾದಿಗೆ—ನಿನತು ಬಲವೆನತು ಶೌರ್ಯಂ
ತನತು ಮಹಾಧೈರ್ಯಮವನಿಪತಿಗೆ || ಕಂದಭಾಗಂ ||

ಇವಱ ದ್ವಿರ್ಭಾವಕ್ಕೆ—ಮುನಿಸಿದು ನಿನತ್ತು ಸ್ವೈರಣೆಯೆನತ್ತು ಕೆಳದಿಗೆ ತನತ್ತು ಸಂದಿಸುವೆ ಸಕಮ್.

### ಸೂತ್ರಂ.

Insertion of ಉತು between ನಿಮ್ಮ, ಎಮ್ಮ, ತಮ್ಮ and Numerals with an initial Vowel, excepting ಒಂದು (ಒಂಬತ್ತು).

ಇದಿರೊಳ್ಳ ರಾದಿಸಂಖ್ಯೆಗ
ಳೊದವಿರೆ ನಿಮ್ಮೆಮ್ಮ ತಮ್ಮೆನಿಪ್ಪಿವು ಪಿಂತ |
ಣೊಗ್ಗದವಿರೆ ನಡುವಣ್ಣುತುವ
ಪ್ಪುದಿವಱ ಬಹುವಚನದಲ್ಲಿ ಪುಗಿಸದಿರೊಂದುಂ || 148 ||

### ಪದಚ್ಛೇದಂ.

ಇದಿರೊಳ್ ಸ್ವರಾದಿಸಂಖ್ಯೆಗಳ್ ಒದವಿ ಇರೆ, ನಿಮ್ಮ ಎಮ್ಮ ತಮ್ಮ ಎನಿಪ್ಪ ಇವು ಪಿಂತಣ್ಗೆ ಒದವಿ ಇರೆ, ನಡುವಣ್ಗೆ ಉತು ಅಪ್ಪುದು. ಇವಱ ಬಹುವಚನದಲ್ಲಿ ಪುಗಿಸದೆ ಇರ್ ಒಂದಂ.

### ಅನ್ವಯಂ.

ಇವಱ ಬಹುವಚನದಲ್ಲಿ ಒಂದಂ ಪುಗಿಸದಿರ್. ಉಳಿದದು ಯಥಾನ್ವಯಂ.

### ಟೀಕು.

ಇದಿರೊಳ್=ಪರದಲ್ಲಿ; ಸ್ವರಾದಿಸಂಖ್ಯೆಗಳ್=ಸ್ವರಾಕ್ಷರಂಗಳಾದಿಯಾದ ಸಂಖ್ಯಾವಾಚಿಗಳ್; ಒದವಿರೆ=ಪ್ರಾಪ್ತಿಸಿರೆ; ನಿಮ್ಮ=ನಿಮ್ಮ ಎಂದು; ಎಮ್ಮ=ಎಮ್ಮ ಎಂದು; ತಮ್ಮ=ತಮ್ಮ ಎಂದು; ಎನಿಪ್ಪ=ಎನಿಸುವ; ಇವು=ಈ ಪದಂಗಳ್; ಪಿಂತಣ್ಗೆ=ಹಿಂದುಗಡೆಗೆ; ಒದವಿರೆ=ಪ್ರಾಪ್ತಿಸಿರೆ; ನಡುವಣ್ಗೆ=ಮಧ್ಯಕ್ಕೆ; ಉತು=ಉತು ಎಂದು; ಅಪ್ಪುದು=ಅಕ್ಕುಂ; ಇವಱ=ಈ ಪದಂಗಳ; ಬಹುವಚನದಲ್ಲಿ=ಬಹುತ್ವದಲ್ಲಿ; ಒಂದಂ=ಒಂದೆಂಬುದಂ; ಪುಗಿಸದಿರ್=ಪ್ರವೇಶವಂ ಮಾಡದಿರ್.

### ವೃತ್ತಿ.

ಸ್ವರಾದಿಸಂಖ್ಯೆಗಳ್ ಪರಮಾಗೆ, ಮೊದಲೊಳ್ ನಿಮ್ಮ ಎಮ್ಮ ತಮ್ಮ ಎಂಬಿವು ಬರೆ, ಮಧ್ಯದೊಳುತುವಕ್ಕುಂ. ಒಂದೆಂಬುದೇಕವಚನಮಾಗದು.

### ಪ್ರಯೋಗಂ.

ನಿಮ್ಮುತ್ತಿರ್ವರುಂ ಎಮ್ಮುತ್ತೈವರುಂ ತಮ್ಮುತ್ತಱುವರುಂ; ಏೞ್ಬರುಂ (ಎೞ್ಬರುಂ) ಎಣ್ಬರುಂ ಎಂಬಿವರ್ಕಮಂತೆ. ಒಂಬತ್ತೆಂಬುದರ್ಕೆ ಲಕ್ಷಣಮುಂಟಾದೊಡಮುಚ್ಚಾರಣಶುಭಗಮಲ್ಲಾಗಿ, ಮಾಣ್ದುದು.

### ಸೂತ್ರಂ.

For ಎತ್ತಣದು (Ss. 110; 111) and ಆರದು (S. 151) may be substituted ಎತ್ತಣ್ತು and ಆರ್ತು.

ಎತ್ತಣದೆಂಬೀ ಶಬ್ದಮ
ನೆತ್ತಣ್ತೆಂದಿಂತು ಕೂಡಿ ನುಡಿಯಲ್ಕಕ್ಕುಂ |
ಮತ್ತಾರದೆಂಬುದಂ ವಿಬು
ಧೋತ್ತಮರಾರ್ತೆಂದು ಕೂಡಿ ನುಡಿಯಲ್ಕಕ್ಕುಂ || 149 ||

### ಪದಚ್ಛೇದಂ.

ಎತ್ತಣದು ಎಂಬ ಈ ಶಬ್ದಮಂ, ಎತ್ತಣ್ತು ಎಂದು, ಇಂತು ಕೂಡಿ ನುಡಿಯಲ್ಕೆ ಅಕ್ಕುಂ; ಮತ್ತೆ ಆರದು ಎಂಬುದಂ ವಿಬುಧೋತ್ತಮರ್, ಆರ್ತು ಎಂದು, ಕೂಡಿ ನುಡಿಯಲ್ಕೆ ಅಕ್ಕುಂ.

### ಯಥಾನ್ವಯಂ.

### ಟೀಕು.

ಎತ್ತಣದು=ಎತ್ತಣದು; ಎಂಬೀ ಶಬ್ದಮಂ=ಎಂಬೀ ಶಬ್ದಮಂ; ಎತ್ತಣ್ತು=ಎತ್ತಣ್ತೆಂದು; ಇಂತು=ಹೀಂಗೆ; ಕೂಡಿ ನುಡಿಯಲ್ಕೆ=ಕೂಡಿ ನುಡಿವುದರ್ಕೆ; ಅಕ್ಕುಂ=ಅಪ್ಪುದು; ಮತ್ತೆ=ಬಳಿಕಂ; ಆರದೆಂಬುದಂ=ಆರದೆಂಬ ಶಬ್ದಮಂ; ವಿಬುಧೋತ್ತಮರ್=ವಿದ್ವಚ್ಛ್ರೇಷ್ಠರ್; ಆರ್ತೆಂದು=ಆರ್ತು ಎಂದು; ಕೂಡಿ ನುಡಿಯಲ್ಕೆ=ಕೂಡಿ ನುಡಿವುದರ್ಕೆ; ಅಕ್ಕುಂ=ಅಪ್ಪುದು.

### ವೃತ್ತಿ.

ಎತ್ತಣದೆಂಬೀ ಶಬ್ದಕ್ಕೆ ಎತ್ತಣ್ತೆಂದುಂ ಆರದೆಂಬ ಶಬ್ದಕ್ಕೆ ಆರ್ತೆಂದುಮಾದೇಶಮಕ್ಕುಂ.

### ಪ್ರಯೋಗಂ.

ದೆಸೆಯೆತ್ತಣ್ತಾಗಸಮೆತ್ತಣ್ತೆತ್ತಣ್ತುರ್ವಿಯೆನಿಸಿ, ಪರ್ಬಿದುದು ತಮಂ. ಆರ್ತೀ ತುರಂಗಮಿಂತಿದನಾರ್ ತಂದರ್ ದಿವ್ಯವಸ್ತುಮುಮ್.

### ಸೂತ್ರಂ.

Derivation of the Masculines ಅವಂ (S. 143), ಇವಂ, ಉವಂ and ಆತಂ, ಈತಂ (cf. S. 138), ಊತಂ from the Neuters ಅದು, ಇದು, ಉದು (cf. S. 78). Their Plural with ಅರ್ (S. 98) and ಂಗಳ್ (S. 103).

ಅದುವಿದುವುದುವೆಂಬಿವಱಂ
ತ್ಯದುಕಾರಕ್ಕೊದವುಗುಂ ವಕಾರಂ ಪುಲ್ಲಿಂ |
ಗದೊಳಲ್ಲಿ ತಕಾರಂ ಮೇ
ಣೊದವಿರೆ ಚೆಚ್ಚರದೆ ಬರ್ಪುದಾದಿಗೆ ದೀರ್ಘಂ || 150 ||

### ಪದಚ್ಛೇದಂ.

ಅದು ಇದು ಉದು ಎಂಬ ಇವಱ ಅಂತ್ಯದುಕಾರಕ್ಕೆ ಒದವುಗುಂ ವಕಾರಂ ಪುಲ್ಲಿಂಗದೊಳ್; ಅಲ್ಲಿ ತಕಾರಂ ಮೇಣ್ ಒದವಿ ಇರೆ, ಚೆಚ್ಚರದೆ ಬರ್ಪುದು ಆದಿಗೆ ದೀರ್ಘಂ.

### ಅನ್ವಯಂ.

ಪುಲ್ಲಿಂಗದೊಳ್ ಅದು ಇದು ಉದು ಎಂಬಿವಱ ಅಂತ್ಯದುಕಾರಕ್ಕೆ ವಕಾರಂ ಒದವುಗುಂ; ಅಲ್ಲಿ ಮೇಣ್ ತಕಾರಂ ಒದವಿ ಇರೆ, ಚೆಚ್ಚರದೆ ಆದಿಗೆ ದೀರ್ಘಂ ಬರ್ಪುದು.

### ಟೀಕು.

ಪುಲ್ಲಿಂಗದೊಳ್=ಪುಲ್ಲಿಂಗದಲ್ಲಿ; ಅದು=ಅದೆಂದು; ಇದು=ಇದೆಂದು; ಉದು=ಉದೆಂದು; ಎಂಬಿವಱ=ಎಂಬೀ ಶಬ್ದಂಗಳ; ಅಂತ್ಯದುಕಾರಕ್ಕೆ=ಕಡೆಯ ದುಕಾರಕ್ಕೆ; ವಕಾರಂ=ವತ್ವಂ; ಒದವುಗುಂ=ಪ್ರಾಪ್ತಿಸುವುದು; ಅಲ್ಲಿ=ಈ ಶಬ್ದಂಗಳ್ಪುಲ್ಲಿಂಗವಾಗುವಲ್ಲಿ; ಮೇಣ್=ವಿಕಲ್ಪದಿಂದೆ; ತಕಾ

ರಂ=ತತ್ವಂ ಬಂದು; ಒದವಿರೆ=ಪ್ರಾಪ್ತಿಸಿರೆ; ಚೆಚ್ಚರದೆ (S. 305)=ಶೀಘ್ರದಿಂದೆ; ಆದಿಗೆ=ಮೊದಲಕ್ಷರಕ್ಕೆ; ದೀರ್ಘಂ=ದೀರ್ಘಂ; ಬರ್ಪುದು=ಬರ್ಪುದು.

### ವೃತ್ತಿ.

ಅದು ಇದು ಉದು ಎಂಬಿವಱ ಕಡೆಯ ದುಕಾರಕ್ಕೆ ವಕಾರಾದೇಶಮಕ್ಕುಂ; ಆ ದುಕಾರಕ್ಕೊರ್ಮೆ ಪೂರ್ವಕ್ಕೆ ದೀರ್ಘಂ ಬೆರಸುತಕಾರಾದೇಶಮಕ್ಕುಂ.

### ಪ್ರಯೋಗಂ.

ವಕಾರಾದೇಶಕ್ಕೆ—ಅವಂ, ಇವಂ, ಉವಂ.
ಬಹುವಚನಕ್ಕೆ—ಅವರ್, ಇವರ್, ಉವರ್.
ತಕಾರಾದೇಶಕ್ಕೆ—ಆತಂ, ಈತಂ, ಊತಂ.
ಬಹುವಚನಕ್ಕೆ—ಆತಂಗಳ್, ಈತಂಗಳ್, ಊತಂಗಳ್.

### ಸೂತ್ರಂ.

Derivation of the Masculines ಆವಂ (S. 143) and its Plural ಆರ್ (S. 149) from ಆವುದು (S. 78). From ಎಲ್ಲದು (S. 78) comes ಎಲ್ಲಂ (ಎಲ್ಲ; cf. S. 175) for all the three genders in the Singular.

ಆವುದೆನಿಪ್ಪೀ ಶಬ್ದ
ಕ್ಕಾವಂ ಬಹುವಚನದೆಡೆಯೊಳಾರೆಲ್ಲದೆನಿ |
ಪ್ಪಾ ವಚನಮದೇಕತ್ವಮ
ನಾವರಿಸಿದೊಡೆಲ್ಲಮೆಂದೆ ಆಯ್ತಾದೇಶಂ || 151 ||

### ಪದಚ್ಛೇದಂ.

ಆವುದು ಎನಿಪ್ಪ ಈ ಶಬ್ದಕ್ಕೆ ಆವಂ, ಬಹುವಚನದ ಎಡೆಯೊಳ್ ಆರ್. ಎಲ್ಲದು ಎನಿಪ್ಪ ಆ ವಚನಂ ಅದು ಏಕತ್ವಮಂ ಆವರಿಸಿದೊಡೆ, ಎಲ್ಲಂ ಎಂದೆ, ಆಯ್ತು ಆದೇಶಂ.

### ಅನ್ವಯಂ.

ಆದೇಶಂ ಆಯ್ತೆಂಬುದನ್ವಯಂ.

### ಟೀಕು.

ಅನುವರ್ತನೆ—ಪುಲ್ಲಿಂಗದೊಳ್=ಪುಲ್ಲಿಂಗದಲ್ಲಿ; ಆವುದು=ಆವುದೆಂದು; ಎನಿಪ್ಪ=ಎನಿಸುವ; ಈ ಶಬ್ದಕ್ಕೆ=ಈ ಸರ್ವನಾಮಶಬ್ದಕ್ಕೆ; ಆವಂ=ಆವಂ ಎಂದಾಗುವದು; ಬಹುವಚನದ=ಬಹುತ್ವದ; ಎಡೆಯೊಳ್=ಸ್ಥಾನದಲ್ಲಿ; ಆರ್=ಆರೆಂದಾಗುವದು; ಎಲ್ಲದು=ಎಲ್ಲದೆಂದು; ಎನಿಪ್ಪ=ಎನಿಸುವ; ಆ ವಚನಂ=ಆ ಬಹುವಚನಂ; ಅದು=ಅದು; ಏಕತ್ವಂ=ಏಕವಚನಮಂ; ಆವರಿಸಿದೊಡೆ=ಅವಗ್ರಹಿಸಿದೊಡೆ; ಎಲ್ಲಮೆಂದೆ=ಎಲ್ಲಂ ಎಂದೆ; ಆದೇಶಂ=ಆದೇಶಂ; ಆಯ್ತು=ಆಯ್ತು.

ವೃತ್ತಿ.

ಆವುದೆಂಬ ಶಬ್ದಕ್ಕೆ ಪುಲ್ಲಿಂಗದೇಕವಚನದೊಳಾವನೆಂದುಂ ಬಹುವಚನದೊಳಾರೆಂದುಮಾದೇಶಂ; ಎಲ್ಲದೆಂಬ ಶಬ್ದಕ್ಕೆ ಲಿಂಗತ್ರಯದಲ್ಲಿಯುಂ ಎಲ್ಲಮೆಂದಾದೇಶಂ.

ಪ್ರಯೋಗಂ.

ಆವುದೆಂಬುದರ್ಕೆ—ಆವಂ ಮುರನಂ ಕೊಂದಂ? ಆವಂ ಬಕ ಕಂಸ ಕೇಶಿಗಳನದಟಲೆದಂ? ಆರ್ಮೈಯ್ಯೊರ್ದ್ವೇರ್ಪರಾರ್ಮುಲೆವರಾರ್ಪೊರ್ಣಾರ್ವರ್?

ಎಲ್ಲದೆಂಬುದರ್ಕೆ—ಎಲ್ಲಂಗಮೆಲ್ಲ ಧನಮುಮನೆಲ್ಲೆಡೆಯೊಳಮೆಲ್ಲ ತೆಱದೊಳಂ ಕುಡುಗೆಮ; ಎಲ್ಲರುಮಾ ಕರ್ಣನಂತಿರೇನ್ ಚಾಗಿಗಳ್.

ಸೂತ್ರಂ.

Derivation of the Masculines ಪೆಱಂ, ಪೆಱರ್ from ಪೆಱತು (S. 78), of the Masculines ಇನಿಯಂ, etc. from ಇನಿದು, etc. (S. 77), and of the Masculines ಒಳ್ಳಿದಂ (cf. S. 111), etc. from ಒಳ್ಳಿತು, etc. (Ss. 77; 97).

ಪೆಱತೆಂಬಿವಱಂತ್ಯಾಕ್ಷರ
ಮಱೆಗುಂ ಗುಣವಚನದಂತ್ಯದುತ್ವಕ್ಕತ್ವಂ |
ನೆಱೆಗುಂ ತುಕಾರಮಿರೆ ಬಂ
ದೆಱಗುಗುಮಾ ತಾಣದೊಳ್ದಕಾರಾದೇಶಂ || 152 ||

ಪದಚ್ಛೇದಂ.

ಪೆಱತು ಎಂಬ ಇವಱ ಅಂತ್ಯಾಕ್ಷರಂ ಅಱೆಗುಂ; ಗುಣವಚನದ ಅಂತ್ಯದುತ್ವಕ್ಕೆ ಅತ್ವಂ ನೆಱೆಗುಂ; ತುಕಾರಂ ಇರೆ, ಬಂದು ಎಱಗುಗುಂ ಆ ತಾಣದೊಳ್ ದಕಾರಾದೇಶಂ.

ಅನ್ವಯಂ.

ತುಕಾರಂ ಇರೆ ಆ ತಾಣದೊಳ್ ದಕಾರಾದೇಶಂ ಬಂದು ಎಱಗುಗುಂ ಎಂಬುದನ್ವಯಂ.

ಟೀಕು.

ಅನುವರ್ತನೆ—ಪುಲ್ಲಿಂಗದೊಳ್ ಪೆಱತೆಂಬಿವಱ=ಪೆಱತು ಪೆಱದು ಎಂಬೀ ಶಬ್ದಂಗಳ; ಅಂತ್ಯಾಕ್ಷರಂ=ಕಡೆಯಣಕ್ಷರಂ; ಅಱೆಗುಂ=ಲೋಪವಾಗುವದು; ಗುಣವಚನದ=ಗುಣವಚನಂಗಳ; ಅಂತ್ಯದುತ್ವಕ್ಕೆ=ಅಂತ್ಯದ ದುಕಾರಕ್ಕೆ; ಅತ್ವಂ=ಅಕಾರಂ; ನೆಱೆಗುಂ=ಬರ್ಪುದು; ತುಕಾರಂ=ತುತ್ವಂ; ಇರೆ=ಇರೆ; ಆ ತಾಣದೊಳ್=ಆ ತಾವಿನಲ್ಲಿ; ದಕಾರಾದೇಶಂ=ದಕಾರಾದೇಶಂ; ಬಂದು=ಬಂದು; ಎಱಗುಗುಂ=ಪೊರ್ದುಗೆಯಾಗುವದು.

ವೃತ್ತಿ.

ಪೆಱತು ಪೆಱದು ಎಂಬ ಶಬ್ದಂಗಳ ಕಡೆಯಕ್ಕರಕ್ಕೆ ಲೋಪಂ; ಗುಣವಚನದ ಕ

ಡೆಯ ದುಕಾರಕ್ಕಕಾರಾದೇಶಂ; ಆ ಗುಣವಚನಂ ತುಕಾರಾಂತಮಾಗಿರೆ, ದಕಾರಾದೇಶಂ.

ಪ್ರಯೋಗಂ.

ಅಂತಾಕ್ಷರಲೋಪಕ್ಕೆ—ನರನೆಂಬಾತಂ ಪೆಱನಲ್ಲೀತನಾಗಲ್ವೇೞ್ಕುಂ.

ಬಹುವಚನಕ್ಕೆ—ಪೆಱರುಮೆಂದರ್ (s. S. 98).

ಅಕಾರಾದೇಶಕ್ಕೆ—ಇನಿಯಂ, ಬೆಲ್ಲದಿಂದಿನಿಯನಿವನೆ; ಪಿರಿಯಂ, ಅಃ ಪಿರಿದೀವನಿತ್ತುದಂ ನೆನೆವನೆ? ಚಿಃ ಅದಂ ನೆನೆಯಂ; ಕಿಱಿಯಂ, ಅಸಿಯಂ, ಬಸಿಯಂ, ಕಡಿಯಂ, ನಿಡಿಯಂ.

ದಕಾರಾದೇಶಕ್ಕೆ—ಒಳ್ಳಿದಂ, ತೆಳ್ಳಿದಂ, ಮೆಲ್ಲಿದಂ, ಬೆಟ್ಟಿದಂ, ತೋರಿದಂ [also in M. A.; ತೋಱಿದಂ in M. B.], ನೇರಿದಂ [M. B. ನೇಱಿದಂ], ಕೂರಿದಂ.

ಸೂತ್ರಂ.

Derivation of the Masculines ಎಳೆಯಂ, ಪಳೆಯಂ and of the Feminines ಎಳೆಯಳ್, ಪಳೆಯಳ್ from ಎಳದು, ಪಳದು (cf. S. 58), of ಬಱಿಯವಂ from ಬಱ್ದು, and of ಪೊಸಂಬಂ from ಪೊಸತು.

ಎಳದು ಪಳದೆಂಬ ಶಬ್ದಂ
ಗಳ ಮಧ್ಯಕ್ಕುಂಟೆಕಾರಮುತ್ವಂ ಬಱಿದೆಂ |
ದೊಳರುವ ಱಕಾರದೊಳ್ನೀಂ
ತಿಳಿ ಪೊಸತಱ ಕಡೆಗೆ ಬಿಂದುವೆರಸುಬಕಾರಂ || 153 ||

ಪದಚ್ಛೇದಂ.

ಎಳದು ಪಳದು ಎಂಬ ಶಬ್ದಂಗಳ ಮಧ್ಯಕ್ಕೆ ಉಂಟು ಎಕಾರಂ; ಉತ್ವಂ ಬಱಿದು ಎಂದು ಒಳರುವ ಱಕಾರದೊಳ್; ನೀಂ ತಿಳಿ, ಪೊಸತಱ ಕಡೆಗೆ ಬಿಂದುವೆರಸುಬಕಾರಂ.

ಅನ್ವಯಂ.

ಎಳದು ಪಳದು ಎಂಬ ಶಬ್ದಂಗಳ ಮಧ್ಯಕ್ಕೆ ಎಕಾರಂ ಉಂಟು; ಬಱಿದು ಎಂದು ಒಳರುವ ಱಕಾರದೊಳ್ ಉತ್ವಂ; ಪೊಸತಱ ಕಡೆಗೆ ಬಿಂದುವೆರಸುಬಕಾರಂ ನೀಂ ತಿಳಿ!

ಟೀಕು.

ಅನುವರ್ತನೆ—ಪುಲ್ಲಿಂಗದೊಳ್=ಗುಣವಚನಪುಲ್ಲಿಂಗದಲ್ಲಿ; ಎಳದು=ಎಳದೆಂದು; ಪಳದು=ಪಳದೆಂದು; ಎಂಬ ಶಬ್ದಂಗಳ=ಎಂಬ ಶಬ್ದಂಗಳ; ಮಧ್ಯಕ್ಕೆ=ನಡುವಣಕ್ಷರಕ್ಕೆ; ಎಕಾರಂ=ಎತ್ವಂ; ಉಂಟು=ಉಂಟಾಗುವದು; ಬಱಿದೆಂದು=ಬಱಿದು ಎಂದು; ಒಳರುವ=ಧ್ವನಿಗೆಯ್ವ; ಱಕಾರದೊಳ್=ಱಕಾರದಲ್ಲಿ; ಉತ್ವಂ=ಉಕಾರಂ ಉಂಟಾಗುವದು; ಪೊಸತಱ=ಪೊಸತೆಂಬ ಶಬ್ದದ; ಕಡೆಗೆ=ಅಂತ್ಯಾಕ್ಷರಕ್ಕೆ; ಬಿಂದುವೆರಸುಬಕಾರಂ=ಆದಿಯಲ್ಲಿ ಬಿಂದುಗೂಡಿದ ಬಕಾರಂ ಉಂಟಾಗುವದು; ನೀಂ=ನೀಂ; ತಿಳಿ=ಅಱಿ.

## ವೃತ್ತಿ.

ಎಳದು ಪಳದು ಎಂಬ ಶಬ್ದಂಗಳ್ಗೆ ಪುಲ್ಲಿಂಗದಕಾರಂ ಬರೆ, ಮಧ್ಯಕ್ಕೆ ಹ್ರಸ್ವಮ ಪ್ಪೆತ್ತ್ವಮಕ್ಕುಂ; ಬಱಿದೆಂಬ ಶಬ್ದದ ಱಿಕಾರಕ್ಕೆ ಉಕಾರಾದೇಶಂ; ಪೊಸತೆಂಬುದಱ ತು ಕಾರಕ್ಕೆ ಬಿಂದುವೆರಸುಬಕಾರಾದೇಶಮಕ್ಕುಂ.

## ಪ್ರಯೋಗಂ.

ಎಳದು ಪಳದೆಂಬುವರ್ಕೆ—ಎಳೆಯುಂ, ಪಳೆಯ; ಸ್ತ್ರೀಲಿಂಗದಳ್ ಪರಮಾಗೆಯು ಮಂತೆ—ಎಳೆಯಳ್, ಪಳೆಯಳ್.

ಬಱಿದೆಂಬುದರ್ಕೆ—ಬಱುವಂ.

ಪೊಸತರ್ಕೆ—ಪೊಸಂಬಂ.

## ಸೂತ್ರಂ.

Derivation of the Feminines ಅವಳ್, ಇವಳ್, ಉವಳ್ (cf. S. 208) and ಆಕೆ, ಈಕೆ, ಊಕೆ from ಅದು, ಇದು, ಉದು (cf. S. 150).

ಅದುವಿದುವುದುವೆಂಬಿವಱಂ
ತ್ಯದೊಳ್ವಳಾದೇಶವಿಧಿ ಕೆಕಾರಂ ಮೇಣ್ಬಂ |
ದೊದವಿರೆ ಬರ್ಕುಂ ಸ್ತ್ರೀಲಿಂ
ಗದೊಳಂ ಪುಲ್ಲಿಂಗದಂತಿರಾದಿಗೆ ದೀರ್ಘಂ || 154 ||

## ಪದಚ್ಛೇದಂ.

ಅದು ಇದು ಉದು ಎಂಬ ಇವಱ ಅಂತ್ಯದೊಳ್ ವಳ್ ಆದೇಶವಿಧಿ; ಕೆಕಾರಂ ಮೇಣ್ ಬಂದು ಒದವಿ ಇರೆ, ಬರ್ಕುಂ ಸ್ತ್ರೀಲಿಂಗದೊಳಂ—ಪುಲ್ಲಿಂಗದಂತೆ ಇರೆ—ಆದಿಗೆ ದೀರ್ಘಂ.

## ಅನ್ವಯಂ.

ಸ್ತ್ರೀಲಿಂಗದೊಳಂ ಅದು ಇದು ಉದು ಎಂಬಿವಱ ಅಂತ್ಯದೊಳ್ ವಳಾದೇಶವಿಧಿ; ಮೇಣ್ ಕೆಕಾರಂ ಬಂದು ಒದವಿರೆ, ಪುಲ್ಲಿಂಗದಂತಿರೆ ಆದಿಗೆ ದೀರ್ಘಂ ಬರ್ಕುಂ.

## ಟೀಕು.

ಸ್ತ್ರೀಲಿಂಗದೊಳಂ=ಸ್ತ್ರೀಲಿಂಗದಲ್ಲಿಯುಂ; ಅದು=ಅದೆಂದು; ಇದು=ಇದೆಂದು; ಉದು=ಉದೆಂದು; ಎಂಬಿವಱ=ಎಂಬೀ ಶಬ್ದಂಗಳ; ಅಂತ್ಯದೊಳ್=ಕಡೆಯಕ್ಷರದಲ್ಲಿ; ವಳಾದೇಶವಿಧಿ=ವಳ್ ಎಂಬಾದೇಶದ ವಿಧಿ ಬರ್ಪುದು; ಮೇಣ್=ವಿಕಲ್ಪದಿಂದೆ; ಕೆಕಾರಂ=ಕೆಕಾರಂ; ಬಂದು=ಆದೇಶವಾಗಿ ಬಂದು; ಒದವಿರೆ=ಪ್ರಾಪ್ತಿಸಿರೆ; ಪುಲ್ಲಿಂಗದಂತಿರೆ=ಪುಲ್ಲಿಂಗದ ಹಾಂಗೆ ಸ್ತ್ರೀಲಿಂಗದಲ್ಲಿಯುಂ; ಆದಿಗೆ=ಮೊದಲಕ್ಷರಕ್ಕೆ; ದೀರ್ಘಂ=ದೀರ್ಘಂ; ಬರ್ಕುಂ=ಬರ್ಪುದು.

ವೃತ್ತಿ.

ಅದು ಇದು ಉದು ಎಂಬಿವಱ ದುಕಾರಕ್ಕೆ ಸ್ತ್ರೀಲಿಂಗದೊಳ್ ವಳಾದೇಶಂ; ಆ ದುಕಾರಕ್ಕೆ ಮೇಣ್ ಕೆಕಾರಮುಮಾದಿಗೆ ಪುಲ್ಲಿಂಗದಂತಿರೆ ದೀರ್ಘಮುಮಕ್ಕುಂ.

ಪ್ರಯೋಗಂ.

ವಳ್ಗೆ—ಅವಳ್, ಇವಳ್, ಉವಳ್.
ಕೆಕಾರಕ್ಕೆ—ಆಕೆ, ಈಕೆ, ಊಕೆ.

ಸೂತ್ರಂ.

Many words which are either Masculines or Feminines in Sanskṛt, are Neuters in Canarese; for instance also ಸಜ್ಜನಂ (S. 92) becomes such a neuter when denoting a woman of good family.

ಕೆಲ ಕೆಲವು ಸಕ್ಕದದ ಮೂ
ಱು ಲಿಂಗಮುಂ ರೂಢಿವೆತ್ತ ಕರ್ಣಾಟಕದೊಳ್ |
ನಿಲೆ ನಪ್ಪುಱ ಸಜ್ಜನವಧು
ಕುಲವಧುವೆಂಬಲ್ಲಿ ಕನ್ನಡಂ ನಪ್ಪದುವುಂ || 155 ||

ಪದಚ್ಛೇದಂ.

ಕೆಲ ಕೆಲವು ಸಕ್ಕದದ ಮೂಱು ಲಿಂಗಮುಂ ರೂಢಿವೆತ್ತ ಕರ್ಣಾಟಕದೊಳ್ ನಿಲೆ ನಪ್ಪು, ಅಱಿ! ಸಜ್ಜನವಧು ಕುಲವಧು ಎಂಬ ಅಲ್ಲಿ ಕನ್ನಡಂ ನಪ್ಪು ಅದುವುಂ.

ಅನ್ವಯಂ.

ಕನ್ನಡಂ ಅದುವುಂ ನಪ್ಪು ಎಂಬುದನ್ವಯಂ.

ಟೀಕು.

ಕೆಲ ಕೆಲವು=ಹಲವು ಕೆಲವು; ಸಕ್ಕದದ=ಸಂಸ್ಕೃತದ; ಮೂಱು ಲಿಂಗಮುಂ=ಸ್ತ್ರೀಪುಂನಪುಂಸಕಂಗಳೆಂಬ ಮೂಱು ಲಿಂಗಮುಂ; ರೂಢಿವೆತ್ತ ಕರ್ಣಾಟಕದೊಳ್=ರೂಢಿಯಾದ ಕನ್ನಡದಲ್ಲಿ; ನಿಲೆ=ನೆಲಸೆ; ನಪ್ಪು=ನಪುಂಸಕಲಿಂಗಮಾಗುವುವು; ಅಱಿ=ತಿಳಿ; ಸಜ್ಜನವಧು=ಸಜ್ಜನವಧುವೆಂದು; ಕುಲವಧು=ಕುಲವಧುವೆಂದು; ಎಂಬಲ್ಲಿ=ಎಂಬೆಡೆಯಲ್ಲಿ; ಕನ್ನಡಂ=ಕನ್ನಡವಾಗಿ; ಅದುವುಂ=ಆ ಶಬ್ದವುಂ; ನಪ್ಪು=ನಪುಂಸಕಲಿಂಗವಾಗುವುದು, ತಿಳಿ!

ವೃತ್ತಿ.

ಕೆಲ ಕೆಲವು ಸಕ್ಕದದ ಮೂಱು ಲಿಂಗಮುಂ ಕನ್ನಡಕ್ಕೆ ಬಂದಲ್ಲಿ ನಪುಂಸಕಮಕ್ಕುಂ; ಸಜ್ಜನಶಬ್ದಂ ಕುಲಸ್ತ್ರೀಯಂ ಪೇೞ್ದಲ್ಲಿ ಕನ್ನಡದೊಳೆಂದುಂ ನಪುಂಸಕಮೆಯಕ್ಕುಂ.

### ಪ್ರಯೋಗಂ.

ಸಂಸ್ಕೃತಲಿಂಗತ್ರಯಂಗಳೊಳ್ ಪುಲ್ಲಿಂಗಕ್ಕೆ—ವೃಕ್ಷಂ ತಳಿರ್ತುದು;

ಸ್ತ್ರೀಲಿಂಗಕ್ಕೆ—ಪ್ರೀತಿಯಾದುದು, ಧರೆ ಬೆಳೆದುದು, ನದಿ ಬಂದುದು, ಮತಿ ಪೆರ್ಚಿದುದು;

ನಪುಂಸಕಕ್ಕೆ—ಕುಲಂ ಮೇಲೆನಿಸಿದುದು.

ಸಜ್ಜನಶಬ್ದಕ್ಕೆ—ಆ ಸತಿ ಸಜ್ಜನಮಾಱ್ಕೆಯಿನೆಂದುಂಟು.

ಸಮುಚ್ಚಯದಿಂ ಅಪತ್ಯ ಕಳತ್ರ (ಎಂಬ) ಶಬ್ದಂಗಳ್ಸ್ತ್ರೀವಾಚಕಮಾಗಿಯುಂ ಜನಶಬ್ದ ಲೋಕಶಬ್ದಂಗಳ್ಪುರುಷವಾಚಕಂಗಳಾಗಿಯುಂ ನಪುಂಸಕಂ—ಇದು ಕಳತ್ರಂ; ಇದಪತ್ಯಂ. ಇದು ಜನಂ; ಇದು ಲೋಕಂ.

### ಸೂತ್ರಂ.

In Metaphorical (or Tropical) language (ರೂಪಕಂ) the gender of a Substantive (ವಿಶೇಷ್ಯಂ) may be altered according to its being shown by the Attribute (ವಿಶೇಷಣಂ), and vice versa.

ನೆಲಸಿರ್ದ ವಿಶೇಷಣದಿ
ಷ್ಟಲಿಂಗಮೆನಿಪುದು ವಿಶೇಷ್ಯಮದಱಿಷ್ಟದಿನ |
ಗ್ಗಲಿಕುಂ ವಿಶೇಷಣದ ಲಿಂ
ಗಲಕ್ಷಣಂ ದೋಷರಹಿತಮಿದು ರೂಪಕದೊಳ್ || 156 ||

### ಪದಚ್ಛೇದಂ.

ನೆಲಸಿ ಇರ್ದ ವಿಶೇಷಣದ ಇಷ್ಟಲಿಂಗಂ ಎನಿಪುದು ವಿಶೇಷ್ಯಂ; ಅದಱ ಇಷ್ಟದಿಂ ಅಗ್ಗಲಿಕುಂ ವಿಶೇಷಣದ ಲಿಂಗಲಕ್ಷಣಂ. ದೋಷರಹಿತಂ ಇದು ರೂಪಕದೊಳ್.

### ಅನ್ವಯಂ.

ನೆಲಸಿ ಇರ್ದ ವಿಶೇಷಣದ ಇಷ್ಟಲಿಂಗಂ ಎನಿಪುದು ವಿಶೇಷ್ಯಂ; ಅದಱ ಇಷ್ಟದಿಂ ವಿಶೇಷಣದ ಲಿಂಗಲಕ್ಷಣಂ ಅಗ್ಗಲಿಕುಂ. ಇದು ರೂಪಕದೊಳ್ ದೋಷರಹಿತಂ.

### ಟೀಕು.

ನೆಲಸಿರ್ದ=ನೆಲೆಗೊಂಡು ಇರ್ದ; ವಿಶೇಷಣದ=ವಿಶೇಷಣಶಬ್ದದ; ಇಷ್ಟಲಿಂಗಂ=ಇಷ್ಟವಾದ ಲಿಂಗಂ; ಎನಿಪುದು=ಎನಿಸುವದು; ವಿಶೇಷ್ಯಂ=ವಿಶೇಷ್ಯಲಿಂಗಂ; ಅದಱ=ಆ ವಿಶೇಷ್ಯದ; ಇಷ್ಟದಿಂ=ಇಷ್ಟದಿಂದೆ; ವಿಶೇಷಣದ=ವಿಶೇಷಣಶಬ್ದದ; ಲಿಂಗಲಕ್ಷಣಂ=ಲಿಂಗದ ಲಕ್ಷಣಂ; ಅಗ್ಗಲಿಕುಂ=ಪೆರ್ಚುಗೆವಡೆವುದು; ಇದು=ಈ ಪ್ರಯೋಗಂ; ರೂಪಕದೊಳ್=ರೂಪಕದಲ್ಲಿ; ದೋಷರಹಿತಂ=ನಿರ್ದೋಷವಪ್ಪುದು.

### ವೃತ್ತಿ.

ವಿಶೇಷಣದ ಲಿಂಗದಿಷ್ಟದಿಂ ವಿಶೇಷ್ಯಮುಮನಾಲಿಂಗಮಾಗಿ ಯೋಚಿಸಿ ಕೊ

ಳ್ಪುದು; ವಿಶೇಷ್ಯಲಿಂಗದಿಪ್ಪದಿಂ ವಿಶೇಷಮುಮನಾಲಿಂಗಮಾಗಿ ಯೋಚಿಸಿ ಕೊಳ್ಪುದು. ರೂಪಕದೊಳಿದು ನಿರ್ದೋಷಂ.

ಪ್ರಯೋಗಂ.

ವಿಶೇಷಣಬಲಕ್ಕೆ—

ಉದಯಾಸ್ತೋನ್ನತ-ಶೈಲ-ಸೇತು-ಹಿಮವತ್ಕುಕ್ಷೀಲ-ಪರ್ಯಂತ-ಸಂ
ಪದೆಯಂ ವಾರ್ಧಿತ-ರಕ್ತ-ರಂಗ-ನಿನದತ್-ಕಾಂಚೀ-ಕಲಾಪಾಂಚಿತಾ|
ಸ್ಪದೆಯಂ ಸಾಧಿಸಿ ಕಬ್ಬಿಗಂಗೆ ನೆಲನಂ ನಿರ್ವ್ಯಾಜದಿಂದಂ ನಿಮಿ
ರ್ಚಿದಗೆಲ್ಲಂ ಭುವನೈಕರಾಮುಮಹಿಪಂಗಕ್ಕುಂ; ಪೆಱರ್ಗಕ್ಕುಮೇ?

|| ಮತ್ತೇಭವಿಕ್ರೀಡಿತವೃತ್ತಂ[1] ||

(ಎಂಬಲ್ಲಿ) ನೆಲನೆಂಬ ನಪುಂಸಕಲಿಂಗಮಂ ಬಿಟ್ಟು, ಧರಾವನಿತೆಯೆಂದು, ಯೋಚಿಸಿ ಕೊಳ್ಪುದು.

ವಿಶೇಷ್ಯಬಲಕ್ಕೆ—ಆತಂ ಜಗದ್ದರ್ಪಣಂ; ಆ ಪೆಣ್ಜಗದ್ದರ್ಪಣಂ; ಅದು ಜಗದ್ದರ್ಪಣಂ.

ಸೂತ್ರಂ.

In the midst of Canarese nouns (and verbs) a ವ (ಅವು) may become an ಔ, and a ಯ (ಅಯಿ) an ಐ; final ಅ (ಅಂ) may become ಒ (ಒಂ).

ಪದಮಧ್ಯವತ್ವಯತ್ವ
ಕ್ಕೊದವುಗುಮೌತ್ವೈತ್ವವಿಧಿಯದಂತಕ್ಕೊತ್ವಂ |
ಪುದಿದಿರ್ಕುಂ ಹ್ರಸ್ವತೆಯಿಂ
ವಿದಿತವಿಕಲ್ಪಂ ತಗುಳ್ಗುಮೀ ಮೂಱಱೊಳಂ || 157 ||

ಪದಚ್ಛೇದಂ.

ಪದಮಧ್ಯವತ್ವಯತ್ವಕ್ಕೆ ಒದವುಗುಂ ಔತ್ವೈತ್ವವಿಧಿ; ಅದಂತಕ್ಕೆ ಒತ್ವಂ ಪುದಿದು ಇರ್ಕುಂ ಹ್ರಸ್ವತೆಯಿಂ; ವಿದಿತವಿಕಲ್ಪಂ ತಗುಳ್ಗುಂ ಈ ಮೂಱಱೊಳಂ.

ಅನ್ವಯಂ.

ಪದಮಧ್ಯವತ್ವಯತ್ವಕ್ಕೆ ಔತ್ವೈತ್ವವಿಧಿ ಒದವುಗುಂ; ಅದಂತಕ್ಕೆ ಹ್ರಸ್ವತೆಯಿಂ ಒತ್ವಂ ಪುದಿದು ಇರ್ಕುಂ; ಈ ಮೂಱಱೊಳಂ ವಿದಿತವಿಕಲ್ಪಂ ತಗುಳ್ಗುಂ.

ಟೀಕು.

ಪದ=ಪದಂಗಳ; ಮಧ್ಯ=ನಡುವಣ; ವತ್ವಯತ್ವಕ್ಕೆ=ವಕಾರ ಯಕಾರಂಗಳ್ಗೆ; ಔತ್ವೈತ್ವವಿಧಿ=ಔಕಾರದ ಐಕಾರದ ವಿಧಿ; ಒದವುಗುಂ=ಪ್ರಾಪ್ತಿಸುವುದು; ಅದಂತಕ್ಕೆ=ಅಕಾರಾಂತಕ್ಕೆ; ಹ್ರಸ್ವತೆ

1) 4 Times: ⏑⏑—|—⏑⏑|—⏑—|⏑⏑⏑|———|⏑——|⏑—||

ಯಿಂ=ಹ್ರಸ್ವತ್ವದಿಂದೆ; ಒತ್ವಂ=ಒಕಾರಂ; ಪುದಿದಿರ್ಕುಂ=ಪ್ರವೇಶವಾಗಿರ್ಪುದು; ಈ ಮೂಱಱೊಳಂ=ಈ ಮೂಱಱಲ್ಲಿಯುಂ; ವಿದಿತ=ಪ್ರಸಿದ್ಧವಾದ; ವಿಕಲ್ಪಂ=ವಿಕಲ್ಪಂ; ತಗುಳ್ಗುಂ=ಎಯ್ದುವುದು.

ವೃತ್ತಿ.

ಪದಮಧ್ಯವಕಾರ ಯಕಾರಂಗಳ್ಗೆ ಔಕಾರಮುಂ ಐಕಾರಮುಮಕ್ಕುಂ; ಪದಾಂತ್ಯದ ಅಕಾರಕ್ಕೆ ಹ್ರಸ್ವೋತ್ವಮಕ್ಕುಂ; ಇವಱೊಳ್ವಿಕಲ್ಪಮುಂಟು.

ಪ್ರಯೋಗಂ.

ಔಕಾರಕ್ಕೆ—ಕವುಂಗು, ಕೌಂಗು; ಕವುಂಕುೞ್, ಕೌಂಕುೞ್; ಅವುಂಕಿದಂ, ಔಂಕಿದಂ; ಅವುಂಡು, ಔಂಡು; ಕವುಂಡೆ, ಕೌಂಡೆ; ತವುಂಕಲ್, ತೌಂಕಲ್.

ಐಕಾರಕ್ಕೆ—ತೆರಯಿಸಿದಂ, ತೆರೈಸಿದಂ; ತೊರಯಿಸಿದಂ, ತೊರೈಸಿದಂ; ತೆಲ್ಲಯಿಸಿದಂ, ತೆಲ್ಲೈಸಿದಂ; ಹೊಲ್ಲಯಿಸಿದಂ, ಹೊಲ್ಲೈಸಿದಂ; ಕಯಿವಾರಂ, ಕೈವಾರಂ.

ಒತ್ವಕೆ—ಆವಂ, ಆವೊಂ; ನುಡಿದಂ, ನುಡಿದೊಂ; ಪಾಡಿದಂ, ಪಾಡಿದೊಂ.

ಸೂತ್ರಂ.

In the course of a sentence or in compounds ನ preceded by ಣ್ may be changed into ಣ.

ಅಸಮಾಸದೊಳಂ ದೊರೆವೆ
ತ್ತ ಸಮಾಸದೊಳಂ ಣಕಾರದಿಂ ಪರದೊಳ್ಸಂ |
ದಿಸಿದ ನಕಾರಂ ಣತ್ವಂ
ಪ್ರಸಿದ್ಧಮುಚ್ಚರಿಸುವರ್ಗೆ ದುಷ್ಕರಮದುವುಂ || 158 ||

ಪದಚ್ಛೇದಂ.

ಅಸಮಾಸದೊಳಂ ದೊರೆವೆತ್ತ ಸಮಾಸದೊಳಂ ಣಕಾರದಿಂ ಪರದೊಳ್ ಸಂದಿಸಿದ ನಕಾರಂ ಣತ್ವಂ ಪ್ರಸಿದ್ಧಂ; ಉಚ್ಚರಿಸುವರ್ಗೆ ದುಷ್ಕರಂ ಅದುವುಂ.

ಅನ್ವಯಂ.

ಅದುವುಂ ಉಚ್ಚರಿಸುವರ್ಗೆ ದುಷ್ಕರಂ.

ಟೀಕು.

ಅಸಮಾಸದೊಳಂ=ಸಮಾಸವಲ್ಲದಲ್ಲಿಯುಂ; ದೊರೆವೆತ್ತ=ಪ್ರಸಿದ್ಧಿವಡೆದ; ಸಮಾಸದೊಳಂ=ಸಮಾಸದಲ್ಲಿಯುಂ; ಣಕಾರದಿಂ=ಣತ್ವದಿಂದೆ; ಪರದೊಳ್=ಪರದಲ್ಲಿ; ಸಂದಿಸಿದ ನಕಾರಂ=ಸಂದಿಸಿದ ನತ್ವಂ; ಣತ್ವಂ=ಣಕಾರವಪ್ಪುದು; ಪ್ರಸಿದ್ಧಂ=ಪ್ರಸಿದ್ಧಂ; ಅದುವುಂ=ಆ ಪ್ರಯೋಗವುಂ; ಉಚ್ಚರಿಸುವರ್ಗೆ=ಓದುವರ್ಗೆ; ದುಷ್ಕರಂ=ದುಷ್ಕರಮಾಗಿರ್ಪುದು.

### ವೃತ್ತಿ.

ಭಿನ್ನಪದದೊಳಂ ಸಮಾಸಪದದೊಳಂ ಣಕಾರಕ್ಕೆ ಪರಮಾದ ನಕಾರಂ ಣಕಾರಮನೆಯ್ದುಗುಂ; ಪ್ರಯೋಗಮುಂಟಾದೊಡಮೀಯುಚ್ಚಾರಣಂ ಸುಭಗಮಿಲ್ಲ.

### ಪ್ರಯೋಗಂ.

ಭಿನ್ನಪದಕ್ಕೆ (cf. S. 49)—ಕಣ್ ನೊಂದಪುದು, ಕಣ್ಣೊಂದಪುದು; ಪುಣ್ ನಾಳಿವೋದಪುದು, ಪುಣ್ಣಾಳಿವೋದಪುದು; ಜಾಣ್ ನೆರೆದಪುದು, ಜಾಣ್ಣೆರೆದಪುದು.

ಸಮಾಸಕ್ಕೆ—ತಣ್+ನೆಳಲ್, ತಣ್ಣೆಳಲ್; ಕಣ್+ನೀರ್, ಕಣ್ಣೀರ್; ಕಣ್+ನೋಟಂ, ಕಣ್ಣೋಟಂ.

### ಸೂತ್ರಂ.

The single ಪ of pure Canarese words (ದೇಶಿ) is often changed into ಹ. (cf. S. 258).

ಸಂದ ಪಕಾರಕ್ಕೆ ಹಕಾ
ರಂ ದೊರೆಕೊಳ್ಗುಂ ವಿಕಲ್ಪದಿಂ ಸಂಯೋಗಂ |
ಸಂದಿಸಿದೊಡೆ ದುಷ್ಕರಮದು
ಸುಂದರಮಾ ದೇಶಿಯಿಂದಮೆಂಬರ್ವಿಬುಧರ್ || 159 ||

### ಪದಚ್ಛೇದಂ.

ಸಂದ ಪಕಾರಕ್ಕೆ ಹಕಾರಂ ದೊರೆಕೊಳ್ಗುಂ ವಿಕಲ್ಪದಿಂ; ಸಂಯೋಗಂ ಸಂದಿಸಿದೊಡೆ ದುಷ್ಕರಂ ಅದು, ಸುಂದರಂ ಆ ದೇಶಿಯಿಂದಂ ಎಂಬರ್ ವಿಬುಧರ್.

### ಅನ್ವಯಂ.

ಸಂದ ಪಕಾರಕ್ಕೆ ಹಕಾರಂ ವಿಕಲ್ಪದಿಂ ದೊರೆಕೊಳ್ಗುಂ; ಸಂಯೋಗಂ ಸಂದಿಸಿದೊಡೆ ಅದು ದುಷ್ಕರಂ, ಆ ದೇಶಿಯಿಂದಂ ಸುಂದರಂ ವಿಬುಧರ್ ಎಂಬರ್.

### ಟೀಕು.

ಸಂದ ಪಕಾರಕ್ಕೆ=ಕನ್ನಡದಲ್ಲಿ ಸಂದ ಪತ್ವಕ್ಕೆ; ಹಕಾರಂ=ಹತ್ವಂ; ವಿಕಲ್ಪದಿಂ=ವಿಕಲ್ಪದಿಂದೆ; ದೊರೆಕೊಳ್ಗುಂ=ಪ್ರಾಪ್ತಿಸುವುದು; ಸಂಯೋಗಂ=ದ್ವಿತ್ವಾಕ್ಷರಂ; ಸಂದಿಸಿದೊಡೆ=ಬಂದೊಡೆ; ಅದು=ಅದು; ದುಷ್ಕರಂ=ಮಾಡ ಬಾರದು; ಆ ದೇಶಿಯಿಂದಂ=ಪ್ರಸಿದ್ಧವಾದ ದೇಶಿಯ ಭಾಷೆಯಿಂದಂ; ಸುಂದರಂ=ಸೌಂದರ್ಯವೆಂದು; ವಿಬುಧರ್=ವಿದ್ವಾಂಸರ್; ಎಂಬರ್=ಪೇಳ್ವರ್.

### ವೃತ್ತಿ.

ಕರ್ಣಾಟಕಶಬ್ದದ ಪಕಾರಕ್ಕೆ ವಿಕಲ್ಪದಿಂ ಹಕಾರಮಕ್ಕುಂ; ದ್ವಿತ್ವದೊಳ್ಪಿರಿದುಂ ಪಕಾರಕ್ಕೆ ಹಕಾರಮಿಲ್ಲ.

ಪ್ರಯೋಗಂ.

ಹಕಾರಕ್ಕೆ—ಪಲಗೆ, ಹಲಗೆ; ಪಂದರ್, ಹಂದರ್; ಪಾಸು, ಹಾಸು. ಇದು ದೇಶಿಯೊಳ್ಳೆಲ್ಲು.

ದ್ವಿತ್ವಕ್ಕಿಲ್ಲದುದರ್ಕೆ—ತಪ್ಪು; ಹೆಪ್ಪು; ಟೆಪ್ಪು; ಉಪ್ಪರಂ; ಟಿಪ್ಪಣಂ; ಮುಪ್ಪರಿ; ಬಿಪ್ಪಂಡಂ; ಕಪ್ಪುರಮೆಂಬಂತೆ.

ಸೂತ್ರಂ.

ಅಂತಹನಿಂತಹನುಂತಹ
ನೆಂತಹನೆಂದಿಂತು ಪದ್ವಿರುಕ್ತಿಗೆ ಹತ್ವಂ |
ಭ್ರಾಂತಂ ಗಡಾರ್ಥದೊಳ್ಮೇ
ಣಂತವಱೆಡೆಗಂನನಿಂನನುಂನಮುಮೆಂನಂ || 160 ||

But also a double ಪ is changed into (a single) ಹ in ಅಂತಪ್ಪಂ, ಇಂತಪ್ಪಂ, ಉಂತಪ್ಪಂ, ಎಂತಪ್ಪಂ (cf. Ss. 178; 232), when thought to stand before the Particle ಗಡ (S. 316), which, besides, take the forms: ಅಂನಂ, ಇಂನಂ, ಉಂನಂ, ಎಂನಂ (cf. S. 246; about ಅಂತೆ Ss. 214; 316; 318).

ಪದಚ್ಛೇದಂ.

ಅಂತಹಂ ಇಂತಹಂ ಉಂತಹಂ ಎಂತಹಂ ಎಂದು, ಇಂತು ಪದ್ವಿರುಕ್ತಿಗೆ ಹತ್ವಂ, ಭ್ರಾಂತಂ, ಗಡಾರ್ಥದೊಳ್; ಮೇಣ್ ಅಂತು ಅವಱ ಎಡೆಗೆ ಅಂನಂ ಇಂನಂ ಉಂನಮುಂ ಎಂನಂ.

ಅನ್ವಯಂ.

ಪದ್ವಿರುಕ್ತಿಗೆ ಅಂತಹಂ ಇಂತಹಂ ಉಂತಹಂ ಎಂತಹಂ ಎಂದು, ಇಂತು ಹತ್ವಂ. ಉಳಿದದು ಯಥಾನ್ವಯಂ.

ಟೀಕು.

ಪದ್ವಿರುಕ್ತಿಗೆ=ಅಂತಪ್ಪನಿಂತಪ್ಪನುಂತಪ್ಪನೆಂತಪ್ಪನೆಂಬ ಪಕಾರದ ದ್ವಿರ್ಭಾವಕ್ಕೆ; ಅಂತಹಂ=ಅಂತಹನೆಂದು; ಇಂತಹಂ=ಇಂತಹನೆಂದು; ಉಂತಹಂ=ಉಂತಹನೆಂದು; ಎಂತಹಂ=ಎಂತಹನೆಂದು; ಇಂತು=ಹೀಂಗೆ; ಹತ್ವಂ=ಹಕಾರಮಪ್ಪುದು; ಭ್ರಾಂತಂ=ಭ್ರಮೆಯಿಂ; ಗಡಾರ್ಥದೊಳ್=ಗಡಶಬ್ದದರ್ಥದಲ್ಲಿ; ಮೇಣ್=ವಿಕಲ್ಪದಿಂದೆ; ಅಂತು=ಹಾಂಗೆ; ಅವಱ=ಅಂತಹಂ ಗಡ, ಇಂತಹಂ ಗಡ, ಉಂತಹಂ ಗಡ, ಎಂತಹಂ ಗಡ ಎಂಬಾ ಶಬ್ದಂಗಳ; ಎಡೆಗೆ=ಸ್ಥಾನಕ್ಕೆ; ಅಂನಂ=ಅಂನಂ ಎಂದು; ಇಂನಂ=ಇಂನಂ ಎಂದು; ಉಂನಮುಂ=ಉಂನಂ ಎಂದುಂ; ಎಂನಂ=ಎಂನಂ ಎಂದು, ಆಗುವದು.

ವೃತ್ತಿ.

ಪ್ರಕಾರಕಾಲಾರ್ಥದ ಗಡಶಬ್ದಮಪ್ಪಲ್ಲಿ ಅಂತಪ್ಪಂ ಇಂತಪ್ಪಂ ಉಂತಪ್ಪಂ ಎಂತಪ್ಪಂ ಎಂಬಿವರ್ಕೆ ಹಕಾರಮಕ್ಕುಂ; ಮೇಣೆಂಬುದಱಿಂದವರ್ಕೆ ಅಂನಂ ಇಂನಂ ಉಂನಂ ಎಂನಂ ಎಂದುಮಕ್ಕುಂ.

### ಪ್ರಯೋಗಂ.

ಅಂತಪ್ಪಂ ಮೊದಲಾದುವಱ ಹಕಾರಕ್ಕೆ—ಅಂತಹಂ, ಇಂತಹಂ, ಉಂತಹಂ, ಎಂತಹಂ.

ಅಂನವಮಾದಿವಿಕಲ್ಪಕ್ಕೆ—ಸಿಡಿಲಂನಂ ಸಿಂಗದಂನಂ ಪುರಹರನುರಿಗಣ್ಣಂನಸೀ ನಾರಸಿಂಹಂ. ಮನಸಿಜನೆಂನನಿಂನನರುಣಾಪ್ರಿಯನಂದನನೆಂನನಿಂನನಾದಿನಕರನೆಂನನಿಂನಂ.

### ಸೂತ್ರಂ.

Final ಮ್ and ನ್ (cf. S. 146) are usually changed into the Bindu; but they may also be changed into the Nasal of the class to which a following consonant belongs.

ಮನಕಾರದ ಪರದೊಳ್ವ್ಯಂ
ಜನಮಿರ್ದೊಡಮಿಲ್ಲದೊಡಮನುಸ್ವಾರಂ ಸಂ |
ಜನಿಯಿಪುದು ವರ್ಗಮಿದಿರಿರೆ
ತನಗೆ ವಿಕಲ್ಪದೆ ತದೀಯಪಂಚಮಮಕ್ಕುಂ || 161 ||

### ಪದಚ್ಛೇದಂ.

ಮನಕಾರದ ಪರದೊಳ್ ವ್ಯಂಜನಂ ಇರ್ದೊಡಂ ಇಲ್ಲದೊಡಂ ಅನುಸ್ವಾರಂ ಸಂಜನಿಯಿಪುದು; ವರ್ಗಂ ಇದಿರ್ ಇರೆ ತನಗೆ ವಿಕಲ್ಪದೆ ತದೀಯಪಂಚಮಂ ಅಕ್ಕುಂ.

### ಅನ್ವಯಂ.

ತನಗೆ ವರ್ಗಂ ಇದಿರಿರೆ, ತದೀಯಪಂಚಮಂ ಅಕ್ಕುಂ ಎಂಬುದನ್ವಯಂ.

### ಟೀಕು.

ಮನಕಾರದ=ಮಕಾರ ನಕಾರಂಗಳ; ಪರದೊಳ್=ಮುಂದೆ; ವ್ಯಂಜನಂ=ವ್ಯಂಜನಾಕ್ಷರಂ; ಇರ್ದೊಡಂ=ಇರ್ದೊಡೆಯುಂ; ಇಲ್ಲದೊಡಂ=ಇಲ್ಲದಿರ್ದೊಡಂ; ಅನುಸ್ವಾರಂ=ಸೊಂನೆ; ಸಂಜನಿಯಿಪುದು=ಹುಟ್ಟುವದು; ತನಗೆ=ಆ ಸೊಂನೆಯಾದ ತನಗೆ; ವರ್ಗಂ=ವರ್ಗಾಕ್ಷರಂ; ಇದಿರಿರೆ=ಇದಿರಲ್ಲಿರೆ; ವಿಕಲ್ಪದೆ=ವಿಕಲ್ಪದಿಂದೆ; ತದೀಯಪಂಚಮಂ=ಆ ವರ್ಗದೈದನೆಯಕ್ಷರಂ; ಅಕ್ಕುಂ=ಅಪ್ಪುದು.

### ವೃತ್ತಿ.

ಮನಕಾರಂಗಳ್ಗೆ ಪರಮಾಗಿ ವ್ಯಂಜನಮಿರ್ದೊಡಮಿಲ್ಲದೊಡಂ ಬಿಂದುವಕ್ಕುಂ. ಆ ಬಂದುವಿಂಗಿದಿರಾಗಿ ವರ್ಗಮಿರೆ ವಿಕಲ್ಪದಿನಾ ವರ್ಗದ ಪಂಚಮಮಕ್ಕುಂ.

### ಪ್ರಯೋಗಂ.

ಮಕಾರಕ್ಕೆ—ನೀಮ್ ಯೋಗ್ಯರ್, ನೀಂ ಯೋಗ್ಯರ್; ಆಮ್ ಸುಖಿಗಳ್, ಆಂ ಸುಖಿಗಳ್; ತಾಮ್ ಸೇವ್ಯರ್, ತಾಂ ಸೇವ್ಯರ್.

ನಕಾರಕ್ಕೆ—ಆನ್ ವಾದಿ, ಆಂ ವಾದಿ; ನೀನ್ ಶುಚಿ, ನೀಂ ಶುಚಿ; ತಾನ್ ಸುಜನಂ, ತಾಂ ಸುಜನಂ.

ವ್ಯಂಜನಶೂನ್ಯಕ್ಕೆ—ನೀಮ್ ಆಮ್ ತಾಮ್ [ನೀಂ, ಆಂ, ತಾಂ].

ವರ್ಗಪಂಚಮಕ್ಕೆ—ಅವಙ್ಕಡುಗಲಿ, ಅವಂ ಕಡುಗಲಿ; ಅವಞ್ಚಲವಾದಿ, ಅವಂ ಚಲವಾದಿ; ಕರಣ್ಟಕ್ಕಂ, ಕರಂ ಟಕ್ಕಂ; ಕೆನ್ದಳಿರ್, ಕೆಂದಳಿರ್; ಕೆಮ್ಮಣ್ಣ್, ಕೆಂಮಣ್ಣ್; ಹೊಮ್ಬಣ್ಣಂ, ಹೊಂಬಣ್ಣಂ.

ಗದ್ಯಂ.

ಇದು ಸಮಸ್ತಶಾಬ್ದಿಕಜನಮನೋಜನಿತಶಬ್ದಸಂದೇಹಶಲ್ಯಚಾರುಚುಂಬಕಾಯಮಾನಾನೂನಕರ್ಣಾಟಕಲಕ್ಷಣಶಿಕ್ಷಾಚಾರ್ಯಸುಕವಿಕೇಶಿರಾಜವಿರಚಿತಮಪ್ಪ ಶಬ್ದಮಣಿದರ್ಪಣದೊಳ್ ನಾಮನಿಯಾಮಲಕ್ಷಣಮೆಂಬ ದ್ವಿತೀಯಸಂಧಿ ಸಂಪೂರ್ಣಂ.

೨ನೆಯ ಅಧ್ಯಾಯಂ ಸಮಾಪ್ತಂ.



# ೩ನೆಯ ಅಧ್ಯಾಯಂ. III. CHAPTER.

## ಸಮಾಸಪ್ರಕರಣಂ.

ON COMPOUNDS.

### ಸೂತ್ರಂ.

Regarding Compounds (ಸಮಾಸಂ) it is first to be stated that Nouns with Affixes, when forming the first word, drop their Affixes. (S. 52 seq. on Euphonism must be remembered throughout this whole Chapter).

ಕಱು ತಾಯ ಬೞಿಯನುೞಿಯದ
ತೆಱದಿಂದಂ ನಾಮಪದಮುದರ್ಥಾನುಗಮಾ |
ಗೆಱಗೆ ಸಮಾಸಂ ನೆಗೞ್ಗುಂ[1]
ನೆಱೆ ಪೋಕುಂ ಮಧ್ಯಗತವಿಭಕ್ತಿಗಳವಱೊಳ್ || 162 ||

### ಪದಚ್ಛೇದಂ.

ಕಱು ತಾಯ ಬೞಿಯಂ ಉೞಿಯದ ತೆಱದಿಂದಂ ನಾಮಪದಂ ಅದು ಅರ್ಥಾನುಗಂ ಆಗಿ ಎಱಗೆ, ಸಮಾಸಂ ನೆಗೞ್ಗುಂ; ನೆಱೆ ಪೋಕುಂ ಮಧ್ಯಗತವಿಭಕ್ತಿಗಳ್ ಅವಱೊಳ್.

### ಅನ್ವಯಂ.

ಅವಱೊಳ್ ಮಧ್ಯಗತವಿಭಕ್ತಿಗಳ್ ನೆಱೆ ಪೋಕುಂ ಎಂಬುದನ್ವಯಂ.

### ಟೀಕು.

ಕಱು=ಕಱು; ತಾಯ ಬೞಿಯಂ=ತಾಯ ಬೆಂಬಳಿಯಂ; ಉೞಿಯದ ತೆಱದಿಂದಂ=ಬಿಡದ ರೀತಿಯಿಂದೆ; ನಾಮಪದಂ=ನಾಮಪದಂ; ಅದು=ಅದು; ಅರ್ಥಾನುಗಂ=ಅರ್ಥದ ಬೆಂಬಳಿವಿಡಿದೆಯ್ದುವುದು; ಆಗಿ=ಆಗಿ; ಎಱಗೆ=ಪೊರ್ದುಗೆಯಾಗೆ; ಸಮಾಸಂ=ಸಮಾಸಪದಂ; ನೆಗೞ್ಗುಂ=ಪ್ರಸಿದ್ಧಿವಡೆವುದು; ಅವಱೊಳ್=ಆ ಸಮಾಸಂಗಳಲ್ಲಿ; ಮಧ್ಯಗತವಿಭಕ್ತಿಗಳ್=ನಡುವಿರ್ದ ಪ್ರತ್ಯಯಂಗಳ್; ನೆಱೆ=ಚನ್ನಾಗಿ; ಪೋಕುಂ=ಲೋಪವಾಗಿ ಹೋಗುವವು.

### ವೃತ್ತಿ.

ತಾಯ ಬೞಿಯ ಕಱುವಿನಂತೆ ನಾಮಪದಂಗಳರ್ಥಾನುಗತಂಗಳಾಗೆ, ಸಮಾಸಂ ಘಟಿಸುಗುಂ; ಅಂತರಾಳದೊಳಿರ್ದ ವಿಭಕ್ತಿಯೆಲ್ಲಂ ಪೋಕುಂ.

1) ಶಿಥಿಲತ್ವಂ; see S. 144.

### ಪ್ರಯೋಗಂ.

ತೋಱಿಯ ಮಾವು=ತೋಱಿಮಾವು; ತೊಡೆಯ ಸೆಕ್ಕೆ=ತೊಡೆಸೆಕ್ಕೆ; ಎಡೆಯ ನುಡಿ=ಎಡೆನುಡಿ; ನೀರಂ ಕುಡಿದಂ=ನೀರ್ಗುಡಿದಂ; ಮರನಂ ಪಾಯ್ದಂ=ಮರಪಾಯ್ದಂ; ಪುಯಲ್ಗೆ ಪೋದಂ=ಪುಯಲ್ಪೋದಂ; ಮೆಲ್ಲಿತ್ತು ಅಡಿ=ಮೆಲ್ಲಡಿ (s. S. 180).

### ಸೂತ್ರಂ.

Definition of Augment (ಆಗಮಂ) and Substitute (ಆದೇಶಂ). In Compounds the Augment together with the Affixes (ವಿಭಕ್ತಿ) suffers elision, a Substitute is supplied.

ಇರ್ದುದನೞಿಯದೆ ನಯದಿಂ
ಪೊರ್ದುವುವಾಗಮವವೆಯ್ದೆ ಪೋಪುವು ಲೋಪಂ |
ಬೊರ್ದಿ ವಿಭಕ್ತಿಯ ಬೞಿವಿಡಿ
ದಿರ್ದುದನೞಿದಿರ್ಪುದರಿಯ ವೋಲಾದೇಶಂ || 163 ||

### ಪದಚ್ಛೇದಂ.

ಇರ್ದುದಂ ಅೞಿಯದೆ ನಯದಿಂ ಪೊರ್ದುವುವು ಆಗಮಂ; ಅವು ಎಯ್ದೆ ಪೋಪುವು ಲೋಪಂ ಬೊರ್ದಿ, ವಿಭಕ್ತಿಯ ಬೞಿವಿಡಿದು. ಇರ್ದುದಂ ಅೞಿದು ಇರ್ಪುದು ಅರಿಯ ವೋಲ್ ಆದೇಶಂ.

### ಅನ್ವಯಂ.

ಇರ್ದುದಂ ಅೞಿಯದೆ ನಯದಿಂ ಪೊರ್ದುವುವು ಆಗಮಂ; ಅವು ಎಯ್ದೆ, ವಿಭಕ್ತಿಯ ಬೞಿವಿಡಿದು, ಲೋಪಂಬೊರ್ದಿ ಪೋಪುವು. ಇರ್ದುದಂ ಅೞಿದು ಇರ್ಪುದು ಅರಿಯ ವೋಲ್ ಆದೇಶಂ.

### ಟೀಕು.

ಇರ್ದುದಂ=ಶಬ್ದಂಗಳಲ್ಲಿರ್ದುದಂ; ಅೞಿಯದೆ=ಲೋಪವಂ ಮಾಡದೆ; ನಯದಿಂ=ಹಿತದಿಂದೆ; ಪೊರ್ದುವುವು=ಪೊರ್ದುಗೆಯಾಗುವುವು; ಆಗಮಂ=ಆಗಮವೆನಿಸುವವು; ಅವು=ಆ ಆಗಮಂಗಳ್; ಎಯ್ದೆ=ಚನ್ನಾಗಿ; ವಿಭಕ್ತಿಯ ಬೞಿವಿಡಿದು=ವಿಭಕ್ತಿಗಳ ಬೆಂಬಳಿವಿಡಿದು; ಲೋಪಂಬೊರ್ದಿ=ಲೋಪವಂ ಪೊರ್ದಿ; ಪೋಪುವು=ಹೋಗುವುವು; ಇರ್ದುದಂ=ಮೊದಲಿರ್ದುದಂ; ಅೞಿದು=ಲೋಪಿಸಿ; ಇರ್ಪುದು=ಇರ್ಪುದು; ಅರಿಯ ವೋಲ್=ಹಗೆಯ ಹಾಂಗೆ; ಆದೇಶಂ=ಆದೇಶವೆನಿಸುವದು.

### ವೃತ್ತಿ.

ಇರ್ದುದಂ ಕೆಡಿಸದೆ ಪತ್ತುವುವಾಗಮಂ; ಅವು ವಿಭಕ್ತಿಯೊಡನೆ ಲೋಪಮಪ್ಪುವು. ಪಗೆಯಂತಿರ್ಪುದಂ ಕೆಡಿಸಿ ಬರ್ಪುದಾದೇಶಂ.

## ಪ್ರಯೋಗಂ.

ಆಗಮಕ್ಕೆ—ಮಾತಿನ (=ಮಾತು+ಇನ್+ಅ) ಬಲ್ಲಹಂ; ನೂಱಱ ಪತ್ತು; ತೆಂಕಣ ವಂಕಂ.

ಆಗಮವಿಭಕ್ತಿಗಳ ಲೋಪಕ್ಕೆ—ಮಾತುವಲ್ಲಹಂ; ನೂಱುಪತ್ತು; ತೆಂಕವಂಕಂ.

ಆದೇಶಕ್ಕೆ—ಕಿಱ್ಱೊಂಬು (S. 166); ಒರ್ವೊದಲ್ (S. 187); ಇರ್ವೊಯ್ (S. 187); ಕುತ್ತಡಿ (S. 181).

## ಸೂತ್ರಂ.

First 3 (Sanskrt) Compounds:[1] Determinative (or Inflectional, ತತ್ಪುರುಷಂ,) Appositional (ಕರ್ಮಧಾರಯಂ), Numeral (ದ್ವಿಗು).

ಪರಪದದೊಳರ್ಥವರ್ತನ
ಮಿರೆ ತತ್ಪುರುಷಂ ಸಮಂತದೇಕಾಶ್ರಯಮಾ |
ಗಿರೆ ಕರ್ಮಧಾರಯಂ ನೆಲ
ಸಿರೆ ಮೊದಲೊಳ್ಸಂಖ್ಯೆಯದೆ ವಲಂ ದ್ವಿಗುವಕ್ಕುಂ || 164 ||

## ಪದಚ್ಛೇದಂ.

ಪರಪದದೊಳ್ ಅರ್ಥವರ್ತನಂ ಇರೆ, ತತ್ಪುರುಷಂ; ಸಮಂತು ಅದು ಏಕಾಶ್ರಯಂ ಆಗಿ ಇರೆ, ಕರ್ಮಧಾರಯಂ; ನೆಲಸಿ ಇರೆ ಮೊದಲೊಳ್ ಸಂಖ್ಯೆ, ಅದೆ ವಲಂ ದ್ವಿಗು ಅಕ್ಕುಂ.

## ಅನ್ವಯಂ.

ಮೊದಲೊಳ್ ಸಂಖ್ಯೆ ನೆಲಸಿ ಇರೆ, ಅದೆ ವಲಂ ದ್ವಿಗು ಅಕ್ಕುಂ ಎಂಬುದನ್ವಯಂ.

## ಟೀಕು.

ಪರಪದದೊಳ್=ಮುಂದಣ ಪದದಲ್ಲಿ; ಅರ್ಥವರ್ತನಂ=ಅರ್ಥದ ವರ್ತನೆ; ಇರೆ=ಇರೆ; ತತ್ಪುರುಷಂ=ತತ್ಪುರುಷಸಮಾಸಂ ಅಪ್ಪುದು; ಸಮಂತು=ಹಾಂಗೆ; ಅದು=ಆ ಸಮಾಸಂ; ಏಕಾಶ್ರಯಂ=ಅನ್ಯೋನ್ಯಾಶ್ರಯಂ; ಆಗಿ=ಆಗಿ; ಇರೆ=ಇರೆ; ಕರ್ಮಧಾರಯಂ=ಕರ್ಮಧಾರಯಸಮಾಸಂ ಅಪ್ಪುದು; ಮೊದಲೊಳ್=ಮೊದಲ ಪದದಲ್ಲಿ; ಸಂಖ್ಯೆ=ಸಂಖ್ಯೆವಾಚಿಗಳ್; ನೆಲಸಿರೆ=ನೆಲೆಗೊಂಡಿರೆ; ಅದೆ=ಅದು ತಾನೆ; ವಲಂ=ನಿಶ್ಚಯವಾಗಿ; ದ್ವಿಗು=ದ್ವಿಗುಸಮಾಸಂ; ಅಕ್ಕುಂ=ಅಪ್ಪುದು.

## ವೃತ್ತಿ.

ಮುಂದಣ ಪದದೊಳರ್ಥಂ ಪ್ರವರ್ತಿಸೆ, ತತ್ಪುರುಷಸಮಾಸಂ; ಆ ತತ್ಪುರುಷ

1) The English for the Sanskrt Compounds is from Th. Benfey's Sanskrt Grammar.

ಮೇಕಾಶ್ರಯಮಾಗೆ, ಕರ್ಮಧಾರಯಮಕ್ಕುಂ; ಅದು ಸಂಖ್ಯಾಪೂರ್ವಕಮಾಗೆ, ದ್ವಿಗುವಕ್ಕುಂ[1].

ಪ್ರಯೋಗಂ.

ತತ್ಪುರುಷಕ್ಕೆ—ಮಲ್ಲಿಗೆನನೆ; ಮಾಣಿಕಗೆಂಪು; ಅಲರ್ವಕ್ಕೆ; ಕನ್ನಡವಕ್ಕಿ; ಕಡೆಸೆಱಂಗು; ಉಡೆನೂಲ್.

ಕರ್ಮಧಾರಯಕ್ಕೆ (cf. S. 179)—ತೆಳ್ಗದಂಪು; ಒಳ್ಗನ್ನಡಂ; ಮೆಲ್ನುಡಿ; ಬಲ್ಮುಗುಳ್; ಕಿಱುಗೂಸು (s. S. 181), ಕಿಱುಗೂಸಾಗಿ ಮಾಯಮುಮ್ಮಱಿದನೆ.

ದ್ವಿಗುವಿಂಗೆ—ಎರಬ್ಮಾತ್ರು (S. 183); ಇರ್ಬಾಳ್ (S. 187).

ಸೂತ್ರಂ.

The other 3 (Sanskṛt) Compounds: Relative (or Possessive, ಬಹುವ್ರೀಹಿ; Ss. 89; 185), Copulative (or Collective, ದ್ವಂದ್ವಂ), Adverbial (ಅವ್ಯಯೀಭಾವಂ).

ಪದನೆರಡುಂ ಮೇಣ್ಪಲವುಂ
ಪದಾರ್ಥಮಂ ಬಯಸುತಿರೆ ಬಹುವ್ರೀಹಿ ಪದಾ |
ರ್ಥದ ಗಡಣಂ ದ್ವಂದ್ವಮೆನಿ
ಪ್ಪುದವ್ಯಯೀಭಾವಮಾದಿಪದಮುಖ್ಯತೆಯಿಂ || 165 ||

ಪದಚ್ಛೇದಂ.

ಪದಂ ಎರಡುಂ ಮೇಣ್ ಪಲವುಂ ಪದಾರ್ಥಮಂ ಬಯಸುತೆ ಇರೆ, ಬಹುವ್ರೀಹಿ; ಪದಾರ್ಥದ ಗಡಣಂ ದ್ವಂದ್ವಂ ಎನಿಪ್ಪುದು; ಅವ್ಯಯೀಭಾವಂ ಆದಿಪದಮುಖ್ಯತೆಯಿಂ.

ಅನ್ವಯಂ.

ಆದಿಪದಮುಖ್ಯತೆಯಿಂ ಅವ್ಯಯೀಭಾವಂ ಎಂಬುದನ್ವಯಂ.

ಟೀಕು.

ಪದನೆರಡುಂ=ಎರಡು ಪದಂಗಳುಂ; ಮೇಣ್=ಅದಲ್ಲದೆ; ಪಲವುಂ=ಪಲವಾದ ಪದಂಗಳುಂ; ಪದಾರ್ಥಮಂ=ಮತ್ತೊಂದನ್ಯ ಪದಾರ್ಥವಂ; ಬಯಸುತೆ=ಬಯಸುತೆ; ಇರೆ=ಇರೆ; ಬಹುವ್ರೀಹಿ=ಬಹುವ್ರೀಹಿಸಮಾಸಂ ಎನಿಸುವದು; ಪದಾರ್ಥದ=ಪದಾರ್ಥಂಗಳ; ಗಡಣಂ=ಸಮೂಹಂ; ದ್ವಂದ್ವಂ=ದ್ವಂದ್ವಸಮಾಸಂ; ಎನಿಪ್ಪುದು=ಎನಿಸುವದು; ಆದಿಪದ=ಮೊದಲ ಪದದ; ಮುಖ್ಯತೆಯಿಂ=ಮುಖ್ಯತ್ವದಿಂದೆ; ಅವ್ಯಯೀಭಾವಂ=ಅವ್ಯಯೀಭಾವಸಮಾಸಂ ಎನಿಸುವದು.

1) ಕರ್ಮಧಾರಯಂ and ದ್ವಿಗು are, therefore, subdivisions of ತತ್ಪುರುಷಂ. In these 3 ತತ್ಪುರುಷಂ the second word of the compound, while being determined by the first one, remains by one's self; whereas in a ಬಹುವ್ರೀಹಿ (S. 165) it unites with the first word so as to loose its independency, wherefore such a compound is used as an Adjective.

## ವೃತ್ತಿ.

ಎರಡುಂ ಪದಂ ಪಲವು ಪದಂ ಮೇಣನ್ಯಪದಾರ್ಥಮುಂ ಬಯಸುತ್ತಿರೆ, ಬಹುವ್ರೀಹಿಯಕ್ಕುಂ; ಪದಾರ್ಥಂಗಳ ಸಮುದಾಯಂ ದ್ವಂದ್ವಮಕ್ಕುಂ; ಪೂರ್ವಪದಂ ಪ್ರಧಾನಮಾದೊಡೆ ಅವ್ಯಯೀಭಾವಮಕ್ಕುಂ.

## ಪ್ರಯೋಗಂ.

ಬಹುವ್ರೀಹಿಗೆ—ಕಡುಚಾಗಿ; ಚಲವಾದಿ; ಮೆಲ್ಲಿನ್ನಣಿ; ಕಡುಗೇಡಿ; ನಿಡುಮೂಗಿ; ಹೆಳೆಗಾಲಿ (ಹೆಳೆಗಾಲಂ etc., s. S. 76).

ದ್ವಂದ್ವಕ್ಕೆ—ಮರಗಿಡುಬಳ್ಳಿಪುಲ್ಪೊದಱುಪಕ್ಕಿಮಿಗಂಗಳ್; ಆಟವಾಟಕೂಟಂಗಳ್.

ಅವ್ಯಯೀಭಾವಕ್ಕೆ (cf. S. 166)—ಅಂಗಯ್; ಮೇಂಗಾಲ್; ಮೇಂಗಯ್; ಪಿಂತಿಲ್; ಕೆೞಱ್ಪೊಡೆ; ಕೆೞಕ್ಕೆೞ; ಕೆೞ್ಪುರೆ; ಬೆಂಬಿಸಲ್; ಬೆಂಗಾಲ್; ಬಯ್ಗಿರುಳ್.

## ಸೂತ್ರಂ.

In Adverbial compounds (S. 165) ಅಂ is = ಅಡಿ, ಮೇಂ = ಮೇಗು, ಮುಂ = ಮುಂದು, ಪಿಂ = ಪಿಂದು, ಕೆೞ್ = ಕೆಳಗು (Ss. 66; 176), ಪಿಂತು = ಪೆಱಗು (S. 172).

ಅಡಿ ಮೇಗುಗಳಂತ್ಯಾಕ್ಷರ
ದೆಡೆಗಕ್ಕುಂ ಬಿಂದು ಮುಂದು ಪಿಂದುಗಳಂತ್ಯ |
ಕ್ಕೊಡರಿಸುಗುಂ ಲೋಪಂ ನೋ
ಱ್ಪೊಡವ್ಯಯೀಭಾವದೊಳ್ಕೆಳಗು ಕೆೞನಿಕ್ಕುಂ || 166 ||

## ಪದಚ್ಛೇದಂ.

ಅಡಿ ಮೇಗುಗಳ ಅಂತ್ಯಾಕ್ಷರದ ಎಡೆಗೆ ಅಕ್ಕುಂ ಬಿಂದು; ಮುಂದು ಪಿಂದುಗಳ ಅಂತ್ಯಕ್ಕೆ ಒಡರಿಸುಗುಂ ಲೋಪಂ; ನೋಱ್ಪೊಡೆ ಅವ್ಯಯೀಭಾವದೊಳ್ ಕೆಳಗು ಕೆೞ್ ಎನಿಕ್ಕುಂ.

## ಅನ್ವಯಂ.

ಅವ್ಯಯೀಭಾವದೊಳ್ ನೋಱ್ಪೊಡೆ ಅಡಿ ಮೇಗುಗಳ ಅಂತ್ಯಾಕ್ಷರದ ಎಡೆಗೆ ಬಿಂದು ಅಕ್ಕುಂ; ಮುಂದು ಪಿಂದುಗಳ ಅಂತ್ಯಕ್ಕೆ ಲೋಪಂ ಒಡರಿಸುಗುಂ; ಕೆಳಗು ಕೆೞ್ ಎನಿಕ್ಕುಂ.

## ಟೀಕು.

ಅವ್ಯಯೀಭಾವದೊಳ್=ಅವ್ಯಯೀಭಾವಸಮಾಸದಲ್ಲಿ; ನೋಱ್ಪೊಡೆ=ನೋಡುವೊಡೆ; ಅಡಿ ಮೇಗುಗಳ=ಅಡಿ ಮೇಗು ಎಂಬ ಶಬ್ದಂಗಳ; ಅಂತ್ಯಾಕ್ಷರದ=ಕಡೆಯಣಕ್ಷರದ; ಎಡೆಗೆ=ಸ್ಥಾನಕ್ಕೆ; ಬಿಂದು=ಸೊಂನೆ; ಅಕ್ಕುಂ=ಅಪ್ಪುದು; ಮುಂದು ಪಿಂದುಗಳ=ಮುಂದು ಪಿಂದು ಎಂಬ ಶಬ್ದಂಗಳ; ಅಂತ್ಯಕ್ಕೆ=ಕಡೆಯಣಕ್ಷರಕ್ಕೆ; ಲೋಪಂ=ಲೋಪಂ; ಒಡರಿಸುಗುಂ=ಬರ್ಪುದು; ಕೆಳಗು=ಕೆಳಗು ಎಂಬ ಶಬ್ದಂ; ಕೆೞ್=ಕೆೞೆಂದು; ಎನಿಕ್ಕುಂ=ಎನಿಸುವದು.

ವೃತ್ತಿ.

ಅವ್ಯಯೀಭಾವದೊಳಡಿ ಮೇಗೆಂಬ ಶಬ್ದಂಗಳ ಕಡೆಯಕ್ಕರಕ್ಕೆ ಬಿಂದುವಕ್ಕುಂ; ಮುಂದು ಪಿಂದೆಂಬಿವಱ ಕಡೆಯಕ್ಕರಕ್ಕೆ ಲೋಪಮಕ್ಕುಂ; ಕೆಳಗೆಂಬುದರ್ಕೆ ಕಿೞ್ ಎಂದಾದೇಶಮಕ್ಕುಂ; ಪೆಱಗೆಂಬುದುಮಾ ತೆಱದಿಂ ಪಿಂತೆಂದಕ್ಕುಂ.

ಪ್ರಯೋಗಂ.

ಅಂಗಯ್, ಅಂಗಾಲ್; ಮೇಂಗಯ್, ಮೇಂಗಾಲ್; ಮುಂಗಯ್, ಮುಂಗಾಲ್, ಮುಂಜೂರ್, ಮುಂಬಗಲ್, ಮುಂಮಾಗಿ; ಹಿಂಗಾಲ್, ಪಿಂಬೆದೆ, ಪಿಂಬೊೞ್ತು; ಕಿೞ್ಕೆಱೆ, ಕಿೞ್ಪೊಡೆ, ಕಿೞ್ಪುರೆ; ಪಿಂತಿಲ್, ಪಿಂತೊಲೆ.

ಸೂತ್ರಂ.

ವಿದಿತಂ ಕ್ರಿಯಾಸಮಾಸಂ
ಮೊದಲೊಳ್ ಕಾರಕಮುಮಗ್ರದೊಳ್ ಕ್ರಿಯೆಯುಂ ಸಂ |
ನಿದಮಾಗೆ ಬಿಂದು ಸಕ್ಕದ
ದದಂತದೊಳ್ ಕನ್ನಡಕ್ಕೆ ಮೇಣುತ್ವದೊಳಂ || 167 ||

Canarese Verbal Compounds (ಕ್ರಿಯಾಸಮಾಸಂ) are a 7th class of compounds. They occur when an action-defining noun and the verb undergo Individuality of sense (ಅರ್ಥವ್ಯಕ್ತಿ) i. e. when both together give one specific sense. In forming them (cf. Ss. 65; 67) the Bindu must be added to Sanskṛt words ending in ಅ; with such Canarese words this is optional, also when they end in ಉ (cf. Ss. 170; 172). In Verbal compounds heterogeneal Compositions (ಅರಿಸಮಾಸಂ, S. 174) are allowed.

ಪದಚ್ಛೇದಂ.

ವಿದಿತಂ ಕ್ರಿಯಾಸಮಾಸಂ, ಮೊದಲೊಳ್ ಕಾರಕಮುಂ ಅಗ್ರದೊಳ್ ಕ್ರಿಯೆಯುಂ ಸಂನಿದಂ ಆಗೆ. ಬಿಂದು ಸಕ್ಕದದ ಅದಂತದೊಳ್, ಕನ್ನಡಕ್ಕೆ ಮೇಣ್ ಉತ್ವದೊಳಂ.

ಅನ್ವಯಂ.

ಮೊದಲೊಳ್ ಕಾರಕಮುಂ ಅಗ್ರದೊಳ್ ಕ್ರಿಯೆಯುಂ ಸಂನಿದಂ ಆಗೆ, ವಿದಿತಂ ಕ್ರಿಯಾಸಮಾಸಂ. ಸಕ್ಕದದ ಅದಂತದೊಳ್ ಬಿಂದು; ಕನ್ನಡಕ್ಕೆ ಮೇಣ್ ಉತ್ವದೊಳಂ.

ಟೀಕು.

ಮೊದಲೊಳ್=ಆದಿಯಲ್ಲಿ; ಕಾರಕಮುಂ=ಕಾರಕಪದಮುಂ; ಅಗ್ರದೊಳ್=ಪರದಲ್ಲಿ; ಕ್ರಿಯೆಯುಂ=ಕ್ರಿಯಾಪದಮುಂ; ಸನ್ನಿದಂ=ಸಂಬಂಧಂ; ಆಗೆ=ಆಗೆ; ವಿದಿತಂ=ಪ್ರಸಿದ್ಧವಾದ; ಕ್ರಿಯಾಸಮಾಸಂ=ಕ್ರಿಯಾಸಮಾಸವಪ್ಪುದು; ಸಕ್ಕದದ=ಸಂಸ್ಕೃತದ; ಅದಂತದೊಳ್=ಅಕಾರಾಂತದಲ್ಲಿ; ಬಿಂದು=ಸೊನ್ನೆ ಬರ್ಪುದು; ಕನ್ನಡಕ್ಕೆ=ಕರ್ನಾಟಕಶಬ್ದಕ್ಕೆ; ಮೇಣ್=ವಿಕಲ್ಪದಿಂದೆ; ಉತ್ವದೊಳಂ=ಉಕಾರಾಂತದಲ್ಲಿಯುಂ ಬಿಂದು=ಸೊನ್ನೆ ಬರ್ಪುದು. ಅಂ ಎಂಬ ಸಮುಚ್ಚಯದಿಂದೆ ಅಕಾರಾಂತದಲ್ಲಿಯುಂ ಬಿಂದು ಬರ್ಪುದು.

ವೃತ್ತಿ.

ಮೊದಲೊಳ್ ಕಾರಕಮುಂ ಪರದೊಳ್ ಕ್ರಿಯೆಯುಂ ಅರ್ಥವ್ಯಕ್ತಿಯಂ ಕೂಡೆ, ಕ್ರಿಯಾಸಮಾಸಂ; ಅಲ್ಲಿ ಸಂಸ್ಕೃತದಕಾರಾಂತಕ್ಕೆ ಬಿಂದು ನಿತ್ಯಂ; ಕನ್ನಡದದಂತಕ್ಕಮು ಮಂತಕ್ಕಂ ಬಿಂದುವಿಕಲ್ಪಂ.

ಪ್ರಯೋಗಂ.

ಕ್ರಿಯಾಸಮಾಸಕ್ಕೆ—ಬಳೆದೊಟ್ಟಂ; ಕೆಳೆಗೊಟ್ಟಂ; ತೆಱೆದೆತ್ತಂ; ಮಱೆವೊಕ್ಕಂ.

ಸಂಸ್ಕೃತದ ನಿತ್ಯಬಿಂದುಗೆ—ಗುಣಂಗೊಂಡಂ; ಪ್ರಿಯಂನುಡಿದಂ; ಧನಂಬಡೆದಂ; ರಂಗಂಬೊಕ್ಕಂ.

ಕನ್ನಡತ್ತದೊಳ್ವಿಕಲ್ಪಬಿಂದುವಿಂಗೆ—ಮೊಗಂನೋಡಿದಂ, ಮೊಗನೋಡಿದಂ; ಪದಂಗೊಟ್ಟಂ, ಪದಗೊಟ್ಟಂ, ಬೆಸಂಬಡೆದಂ, ಬೆಸವಡೆದಂ; ಕೆಯ್ಮೊಲಂಗಾದಂ, ಕೆಯ್ಮೊಲಗಾದಂ; ಮನಂಸಂದಂ, ಮನಸಂದಂ; ಕಡಂಗೊಂಡಂ, ಕಡಗೊಂಡಂ.

ಉತ್ತಕ್ಕೆ—ಪುದುಂಗೊಳಿಸಿದಂ, ಪುದುಗೊಳಿಸಿದಂ; ಮಾತುಂಗುಟ್ಟಿದಂ, ಮಾತುಗುಟ್ಟಿದಂ; ಅಸುಂಗೊಂಡಂ, ಅಸುಗೊಂಡಂ. (ಎತ್ತುಂಗೋಲ್ s. S. 8).

ಅರ್ಥವ್ಯಕ್ತಿ ಕೆಡುವೊಡೆ ಬಿಂದುವಂ ಕಳೆಯಲಾಗದು—ಪಯಣಂಬೋದಂ; ಪಸರಂಬಡೆದಂ; ಗಡಣಂಗೊಂಡಂ; ಬಿಜಯಂಗೈದಂ; ಕೆಲಸಂಬೊಕ್ಕಂ; ಕರಗಂಬೊತ್ತಂ.

ಇದಱೊಳರಿಪದಂ (=ಅರಿಸಮಾಸಂ, Ss. 168 and 174) ನಿದರ್ಶನಂ—

ಸವಣಂ ಬಳಪಂಗೊಳೆ, ಗಾಂ
ಡಿವಿ ಬಿಲ್ಗೊಳೆ ಬಲವಿರೋಧಿ ವಜ್ರಂಗೊಳೆ, ದಾ |
ನವರಿಪು ಚಕ್ರಂಗೊಳೆ, ಕೌ
ರವಾರಿ ಗದೆಗೊಳೆ, ಪೊಣರ್ಕೆಗಾವಂ ನಿಲ್ಗುಂ? || ಕಂದಂ ||

ಸೂತ್ರಂ.

The 8th class of Compounds: Canarese Impulse-Compounds (Compounds for consecutive diction, ಗಮಕಸಮಾಸಂ, cf. S. 72). They occur when an action-defining Noun is preceded by a Numeral, Pronoun, Adjective or a Verbal noun-theme (ಕೃತ್, S. 73). In them also heterogeneal composition is allowed (S. 167); Adjectives with final ಇ insert an ಅ before the noun. Impulse-Compounds are mostly Appositional (S. 164).

ಜನಿಯಿಸುಗುಂ ಸಂಖ್ಯಾಸ
ರ್ವನಾಮಗುಣವಚನಕೃತ್ಪ್ರಪೂರ್ವಂ ಗಮಕಂ |
ತನಗತ್ತಂ ಪೆಱಗಿತ್ತಂ
ತನಗರಿಪದನಿಲ್ಲ ಕರ್ಮಧಾರಯಮದುವುಂ || 168 ||

1) They give an impulse, so to say, to go on with a sentence uninterruptedly.

### ಪದಚ್ಛೇದಂ.

ಜನಿಯಿಸುಗುಂ ಸಂಖ್ಯಾಸರ್ವನಾಮಗುಣವಚನಕೃತ್ಪ್ರಪೂರ್ವಂ ಗಮಕಂ; ತನಗೆ ಅತ್ವಂ ಪೆಱಗೆ ಇತ್ವಂ; ತನಗೆ ಅರಿಪದಂ ಇಲ್ಲ; ಕರ್ಮಧಾರಯಂ ಅದುವುಂ.

### ಅನ್ವಯಂ.

ಸಂಖ್ಯಾಸರ್ವನಾಮಗುಣವಚನಕೃತ್ಪ್ರಪೂರ್ವಂ ಗಮಕಂ ಜನಿಯಿಸುಗುಂ; ತನಗೆ ಅತ್ವಂ ಪೆಱಗೆ ಇತ್ವಂ; ತನಗೆ ಅರಿಪದಂ ಇಲ್ಲ; ಅದುವುಂ ಕರ್ಮಧಾರಯಂ.

### ಟೀಕು.

ಸಂಖ್ಯಾ=ಸಂಖ್ಯಾವಾಚಿಗಳ್; ಸರ್ವನಾಮ=ಸರ್ವನಾಮಂಗಳ್; ಗುಣವಚನ=ಗುಣವಚನಂಗಳ್; ಕೃತ್=ಕೃತ್ತುಗಳ್; ಪ್ರಪೂರ್ವಂ=ಆದಿಯಾಗೆ; ಗಮಕಂ=ಗಮಕಸಮಾಸಂ; ಜನಿಯಿಸುಗುಂ=ಹುಟ್ಟುವದು; ತನಗೆ=ಗಮಕಸಮಾಸವಾದ ತನಗೆ; ಅತ್ವಂ=ಮಧ್ಯಕ್ಕೆ ಅಕಾರಂ; ಪೆಱಗೆ=ಅತ್ವದ ಪಿಂದುಗಡೆಯಲ್ಲಿ; ಇತ್ವಂ=ಇಕಾರಂ ಹುಟ್ಟುವದು; ತನಗೆ=ಗಮಕಸಮಾಸವಾದ ತನಗೆ; ಅರಿಪದಂ=ಅರಿಸಮಾಸಂ; ಇಲ್ಲ=ಉಂಟಾಗದು; ಅದುವುಂ=ಆ ಗಮಕಸಮಾಸವುಂ; ಕರ್ಮಧಾರಯಂ=ಕರ್ಮಧಾರಯಸಮಾಸವೆನಿಸುವದು.—ಉಂ ಎಂಬ ಸಮುಚ್ಚಯದಿಂದೆ ಎತ್ತಾನುಂ ತತ್ಪುರುಷಮುಮಪ್ಪುದು.

### ವೃತ್ತಿ.

ಪರ ಪದದದೊಳ್ ಕಾರಕಮುಂ ಪೂರ್ವ ಪದದೊಳ್ ಸಂಖ್ಯಾಸರ್ವನಾಮಗುಣವಚನಕೃತ್ಪದಂಗಳಾವುವಿರ್ದೊಡಂ ಗಮಕಸಮಾಸಮಕ್ಕುಂ; ಗುಣವಚನದೊಳಂತರಾಳಕ್ಕೆ ಒಂದಕಾರಂ ಪಿಂತಣ ಮಯ್ಯೊಳ್ ಇಕಾರಮಕ್ಕುಂ. ಇದಱೊಳ್ ಅರಿಸಮಾಸದೋಷಮಿಲ್ಲ; ಅದು ಕರ್ಮಧಾರಯದ ಭೇದಂ; ಎತ್ತಾನುಂ ತತ್ಪುರುಷಮುಪ್ಪುದು.

### ಪ್ರಯೋಗಂ.

ಸಂಖ್ಯೆಗೆ—ಇರ್ಪತ್ತೈದು; ನೂಱುಪತ್ತು; ಮೂವತ್ತಾಱು.

ಸರ್ವನಾಮಕ್ಕೆ—ಆವಮಾತು; ಆವಕಾರ್ಯಂ; ಆವನಾಯಕಂ; ಆವಕಾಂತೆ. ಆವರಾವುತರಾವವಾಜಿಗಳಾವವಾನೆಗಳಾವನಾಳೊಳವಾವನಾಯಕರೊ ನಿಂಮ ವ್ಯೂಹದೊಳ್.

ಗುಣವಚನದತ್ವಮಿತ್ವಕ್ಕೆ—(ಅಸಿ+ಅ+ನಡು=) ಅಸಿಯನಡು; ಪಸಿಯಬಣ್ಣಂ; ಬಿಳಿಯಕರ್ಬು; ನಿಡಿಯನಾಲಗೆ; ಪಿರಿಯಮಗಂ (s. S. 77).

ಕೃತ್ತಿಂಗೆ—ಪಾಡುವತುಂಬಿ; ಕೊಡುವಪುಟಿಲ್; ಆಡಿದಪೊಲಂ.

ಅರಿಸಮಾಸದ ನಿರ್ದೋಷಕ್ಕೆ—ಬೀಸುವಚಾಮರಂ; ಪೊಡೆವಭೇರಿ; ಪೂರೈಸುವಶಂಖಂ; ಪಿಡಿವಕಹಳೆ; ಪೂಸಿದಭಸ್ಮಪರಾಗಂ; ಪೊಣ್ಮುವಘರ್ಮಜಲಂಗಳ್.

ಸೂತ್ರಂ.

In Impulse-Compounds ಆ, ಈ, ಊ are used instead of ಅದು, ಇದು, ಉದು. (S. 138).

ಅದುವಿದುವುದುಗಾಯಿೞಾಯೂ
ವೊದವುಗುವಾದೇಶವಾಗಿ ಗಮಕದೊಳಾಯೆಂ |
ಬುದು ಪೂರ್ವಪರಾಮರ್ಶಿಗ
ವೊದವುಗುಮಾ ರೂಢಿಗಂ ಕವೀಶ್ವರಮತದಿಂ || 169 ||

ಪದಚ್ಛೇದಂ.

ಅದುವಿದುವುದುಗೆ ಆಯಿೞಯೂ ಒದವುಗುಂ ಆದೇಶಂ ಆಗಿ ಗಮಕದೊಳ್; ಆಯೆಂಬುದು ಪೂರ್ವ ಪರಾಮರ್ಶಿಗಂ ಒದವುಗುಂ ಆ ರೂಢಿಗಂ ಕವೀಶ್ವರಮತದಿಂ.

ಅನ್ವಯಂ.

ಗಮಕದೊಳ್ ಅದುವಿದುವುದುಗೆ ಆಯಿೞಾಯೂ ಆದೇಶಂ ಆಗಿ ಒದವುಗುಂ; ಕವೀಶ್ವರ ಮತದಿಂ ಆಯೆಂಬುದು ಪೂರ್ವಪರಾಮರ್ಶಿಗಂ ಆ ರೂಢಿಗಂ ಒದವುಗುಂ.

ಟೀಕು.

ಗಮಕದೊಳ್=ಗಮಕಸಮಾಸದಲ್ಲಿ; ಅದುವಿದುವುದುಗೆ=ಅದು ಇದು ಉದು ಎಂಬ ಶಬ್ದಂ ಗಳ್ಗೆ; ಆಯಿೞಾಯೂ=ಆ ಎಂಬುದು ಈ ಎಂಬುದು ಊ ಎಂಬುದು; ಆದೇಶಮಾಗಿ=ಆದೇಶವಾಗಿ; ಒದವುಗುಂ=ಪ್ರಾಪ್ತಿಸುವುದು; ಕವೀಶ್ವರಮತದಿಂ=ಕವೀಶ್ವರಮತದಿಂದೆ; ಆಯೆಂಬುದು=ಆ ಎಂಬ ಶಬ್ದಂ; ಪೂರ್ವಪರಾಮರ್ಶಿಗಂ=ಪೂರ್ವ ಸ್ಮರಣಕ್ಕೆಯುಂ; ಆ ರೂಢಿಗಂ=ಆ ಪ್ರಸಿದ್ಧಿಗೆಯುಂ; ಒದವುಗುಂ=ಪ್ರಾಪ್ತಿಸುವುದು.

ವೃತ್ತಿ.

ಗಮಕಸಮಾಸದೊಳ್ ಅದು ಇದು ಉದು ಎಂಬ ಸರ್ವನಾಮಕ್ಕೆ ಆ ಈ ಊ ಎಂಬಿವಾದೇಶಮಕ್ಕುಂ; ಆ ಎಂಬುದು ಪೂರ್ವಸ್ಮರಣದೊಳಂ ಪ್ರಸಿದ್ಧಿಯೊಳಮುಂಟು.

ಪ್ರಯೋಗಂ.

ಆ ಈ ಊ ಎಂಬ ಆದೇಶಕ್ಕೆ—ಆಮನೆ, ಸಿರಿಯ ತವರ್ಮನೆ ಪಲದಿವಸಕ್ಕೆ ಕಂಡೆವಣ್ಣ; ಈಮನೆಯತ್ತಲೆ ಸಾರ್ರ್ಕೆಗಿನ್ನಲಸದಿರಕ್ಕ, ಕರುವಾಡದತ್ತು ಕನ್ದನುಣ್ಣ ಲೂಮನೆಯೂಕೆಳ್ಳೊಯ್ದರ್ [M. B.—ಯೂಕೆಗಳೊಯ್ದರ್]; ಆಬನವೀಬನವೂಬನವೆನ್ನದೆ ತೊೞಲ್ದು ಪೂಗೊಯ್ದರವರ್.

ಸ್ಮರಣಕ್ಕೆ—ನೆನದನಾಹಿರಣ್ಯಕನಂದು ಬಿಟ್ಟಿಂದಮಂ; ಬಿದಿಗಾಪೊೞಲಿಚರ್ ಮಾನ್ಯದೊಕ್ಕಲ್.

ಪ್ರಸಿದ್ಧಿಗೆ—ಗಜಹಯರೂಢಿಯೊಳ್ ಭಗದತ್ತನಿನಾನಳನಿಂ ಮಿಗಿಲಾದಂ.

ಸೂತ್ರಂ.

In Appositional compounds (S. 164), before nouns with initial ಗ, ದ, ಬ, ಜ, the final ಉ of Verbal noun-themes (ಕೃತ್; cf. S. 213) (cf. S. 167).

ಗದಬಜಕಾರಮವಿದಿರಿರೆ
ಮೊದಲ ಪದಂ ತಾಂ ಕೃದಂತಮಾಗಿರೆ ದೊರೆಕೊ |
ಳ್ವುದನುಸ್ವಾರಮುದಂತದೊ
ಳಿದಂತದೊಳ್ ಕರ್ಮಧಾರಯಂ ಬರೆ ಬಹುಳಂ || 170 ||

which are formed of roots ending in ಉ or ಇ, uses to get the Bindu.

ಪದಚ್ಛೇದಂ.

ಗದಬಜಕಾರಂ ಅವು ಇದಿರ್ ಇರೆ, ಮೊದಲ ಪದಂ ತಾಂ ಕೃದಂತಂ ಆಗಿ ಇರೆ, ದೊರೆಕೊಳ್ವುದು ಅನುಸ್ವಾರಂ ಉದಂತದೊಳ್ ಇದಂತದೊಳ್, ಕರ್ಮಧಾರಯಂ ಬರೆ, ಬಹುಳಂ.

ಅನ್ವಯಂ.

ಕರ್ಮಧಾರಯಂ ಬರೆ, ಗದಬಜಕಾರಂ ಅವು ಇದಿರಿರೆ, ಮೊದಲ ಪದಂ ತಾಂ ಕೃದಂತಂ ಆಗಿ ಇರೆ, ಉದಂತದೊಳ್ ಇದಂತದೊಳ್ ಬಹುಳಂ ಅನುಸ್ವಾರಂ ದೊರೆಕೊಳ್ವುದು.

ಟೀಕು.

ಕರ್ಮಧಾರಯಂ=ಕರ್ಮಧಾರಯಸಮಾಸಂ; ಬರೆ=ಬರೆ; ಗದಬಜಕಾರಂ=ಗಕಾರ ದಕಾರ ಬಕಾರ ಜಕಾರಂಗಳ್; ಅವು=ಅವು; ಇದಿರಿರೆ=ಇದಿರಾಗಿರೆ; ಮೊದಲ ಪದಂ=ಆದಿಯ ಪದಂ; ತಾಂ=ತಾಂ; ಕೃದಂತಂ=ಕೃಲ್ಲಿಂಗಂ; ಆಗಿರೆ=ಆಗಿರೆ; ಉದಂತದೊಳ್=ಉಕಾರಾಂತದಲ್ಲಿ; ಇದಂತದೊಳ್=ಇಕಾರಾಂತದಲ್ಲಿ; ಬಹುಳಂ=ಬಹುಳವಾಗಿ; ಅನುಸ್ವಾರಂ=ಸೊಂನೆ; ದೊರೆಕೊಳ್ವುದು=ಪ್ರಾಪ್ತಿಸುವುದು.

ವೃತ್ತಿ.

ಕರ್ಮಧಾರಯದೊಳ್ ಗದಬಜಕಾರಾದಿಪದಂಗಳ್ ಪರದೊಳಿರೆ, ಪೂರ್ವಪದಂ ಕೃತ್ತಾಗಿ, ಉಕಾರಾಂತಮಿಕಾರಾಂತಮಾಗಿರೆ, ಬಿಂದುವಕ್ಕುಂ; ಬಹುಳದಿಂ, ಕೆಲಬೆಡೆಯೊಳಿಲ್ಲ.

ಪ್ರಯೋಗಂ.

ಉಕಾರಾಂತದೊಳ್ ಗಕಾರಂ ಪರಮಾದುದರ್ಕೆ—ಎತ್ತುಂಗೋಲ್; ಕುತ್ತುಂಗಟಿ; ಪೊತ್ತುಂಗೊರಡು; ಪುಟ್ಟುಂಗುರುಡಂ; ಸುರ್ಕುಂಗುಳ್; ಕರ್ಚುಂಗಲ್ಲಂ; ಚುರ್ಚುಂಗೊಳ್ಳಿ; ಇರ್ಕುಂಗಾಳ್; ಇಡುಕುಂಗರ್ಬ್ಬಂ (–ಗಬ್ಬಂ).

ದಕಾರಕ್ಕೆ—ಕಡುಕುಂದರಿ; ಉರ್ಕುಂದೊಱೆ (-ದೊರೆ, also in M. A.); ತೂಗುಂದೊಟ್ಟಿಲ್; ಆಡುಂದೊಲೆ; ತೂಗುಂದಲೆ.

ಬಕಾರಕ್ಕೆ—ಬತ್ತುಂಬಯಂ; ಬತ್ತುಂಬಳ್ಱೆ; ಅಟ್ಟುಂಬಿರಿ; ಆಡುಂಬೊಲಂ; ಮಿಂಚುಂಬುೞು; ಪೆರ್ಚುಂಬುರುಳ್; ತೋಱುಂಬೊಣ್ಱೆ; ಹೆೞುಂಬಳೆ; ಪಾೞುಂಬಳೆ.

ಜಕಾರಕ್ಕೆ—ತೂಗುಂಜೊಡರ್; ಅಟ್ಟುಂಜಗಳಂ; ಕಟ್ಟುಂಜುರಿಗೆ; ಕಟ್ಟುಂಜೋಳಂ; ಏೞುಂಜವ್ವನಂ.

ಇಕಾರಾಂತದೊಳ್—ಸಿಡಿಯುಂದಲೆ; ಇೞಿಯುಂಬೊೞ್ತು. ಇಲ್ಲಿ ಉಕಾರಂ ಪೊಕ್ಕುದು.

ಬಹುಳದಿಂ ಕೃತ್ತಿಲ್ಲದಲ್ಲಿಯುಂ ಬಿಂದುಮುಂಟು—ಬೆಟ್ಟುಂಬೊರೆ ಎಂದು.

ಸೂತ್ರಂ.

But there are a few exceptions, such as ಸುಡುಗಾಡು, ಇಡುಗಿಚ್ಚು, etc.

ಸುಡುಗಾಡಿಡುಗಿಚ್ಚಡುಗೂ
ಳುಡುಗೊಱೆಯುಂ ಮಾೞುದಾಂಟು ಬಿಡುಗಣ್ ಬಿಡುವಾಯ್ |
ತುಡುಜೊಡರೞುಗೆಱೆಯೆಂಬಿವು
ಪಡೆಯವು ಬಿಂದುವನುದಂತವೃತ್ತಿಯನಾಳ್ದಂ || 171 ||

ಪದಚ್ಛೇದಂ.

ಸುಡುಗಾಡು, ಇಡುಗಿಚ್ಚು, ಅಡುಗೂಳ್ (-ಗೂೞ್), ಉಡುಗೊಱೆಯುಂ, ಮಾೞುದಾಂಟು, ಬಿಡುಗಣ್, ಬಿಡುವಾಯ್, ತುಡುಜೊಡರ್, ಅೞುಗೆಱೆ ಎಂಬ ಇವು ಪಡೆಯವು ಬಿಂದುವಂ, ಉದಂತವೃತ್ತಿಯಂ ಆಳ್ದಂ.

ಅನ್ವಯಂ.

ಉದಂತವೃತ್ತಿಯಂ ಆಳ್ದಂ, ಬಿಂದುವಂ ಪಡೆಯವು ಎಂಬುದನ್ವಯಂ.

ಟೀಕು.

ಸುಡುಗಾಡು=ಸುಡುಗಾಡೆಂದು; ಇಡುಗಿಚ್ಚು=ಇಡುಗಿಚ್ಚೆಂದು; ಅಡುಗೂಳ್=ಅಡುಗೂಳೆಂದು; ಉಡುಗೊಱೆಯುಂ=ಉಡುಗೊಱೆಯೆಂದುಂ; ಮಾೞುದಾಂಟು=ಮಾೞುದಾಂಟೆಂದು; ಬಿಡುಗಣ್=ಬಿಡುಗಣ್ಣೆಂದು; ಬಿಡುವಾಯ್=ಬಿಡುವಾಯ್ಯೆಂದು; ತುಡುಜೊಡರ್=ತುಡುಜೊಡರೆಂದು; ಅೞುಗೆಱೆ=ಅೞುಗೆಱೆಯೆಂದು; ಎಂಬಿವು=ಎಂಬೀ ಸಮಾಸಪದಂಗಳ್; ಉದಂತವೃತ್ತಿಯಂ=ಉಕಾರಾಂತದ ವರ್ತನೆಯಂ; ಆಳ್ದಂ=ತಾಳ್ದಂ; ಬಿಂದುವಂ=ಸೊನ್ನೆಯಂ; ಪಡೆಯವು=ಹಡೆಯವು.

ವೃತ್ತಿ.

ಇದರ್ಕಿದೆ ವೃತ್ತಿ.

ಸೂತ್ರಂ.

ಕೃತ್ತಿರದೆಯುಮುತ್ವಾತ್ವಾ
ಯತ್ತಮನುಸ್ವಾರಮಸ್ವರದ ನಣಕತ್ವಂ |
ಮತ್ತೆ ಳಕಾರಕ್ಕುತ್ವಂ
ಪತ್ತಲೊಡಂ ಬಿಂದು ಬಂದು ನೆಲೆಗೊಂಡಿರ್ಕುಂ || 172 ||

Also Nouns which are no Verbal noun-themes and terminate in ಉ or ಅ, receive the Bindu (cf. S. 167); likewise words with final ನ್ and ಣ್ when getting the augment ಅ, and those with final ಳ್ when getting the augment ಉ, receive the Bindu.

ಪದಚ್ಛೇದಂ.

ಕೃತ್ತು ಇರದೆಯುಂ ಉತ್ವಾತ್ವಾಯತ್ತಂ ಅನುಸ್ವಾರಂ; ಅಸ್ವರದ ನಣಕೆ ಅತ್ವಂ ಮತ್ತೆ ಳಕಾರಕ್ಕೆ ಉತ್ವಂ ಪತ್ತಲೊಡಂ, ಬಿಂದು ಬಂದು, ನೆಲೆಗೊಂಡು ಇರ್ಕುಂ.

ಅನ್ವಯಂ.

ಕೃತ್ತು ಇರದೆಯುಂ ಅನುಸ್ವಾರಂ ಉತ್ವಾತ್ವಾಯತ್ತಂ; ಅಸ್ವರದ ನಣಕೆ ಅತ್ವಂ ಮತ್ತೆ ಳಕಾರಕ್ಕೆ ಉತ್ವಂ ಪತ್ತಲೊಡಂ, ಬಿಂದು ಬಂದು, ನೆಲೆಗೊಂಡು ಇರ್ಕುಂ.

ಟೀಕು.

ಕೃತ್ತು=ಕೃತ್ಪದಂ; ಇರದೆಯುಂ=ಇಲ್ಲದೆಯುಂ; ಅನುಸ್ವಾರಂ= ಸೊನ್ನೆ; ಉತ್ವ=ಉಕಾರದಲ್ಲಿ; ಅತ್ವ=ಅಕಾರದಲ್ಲಿ; ಆಯತ್ತಂ=ಸಂಬಂಧವಪ್ಪುದು; ಅಸ್ವರದ=ವ್ಯಂಜನದ; ನಣಕೆ=ನಕಾರ ಣಕಾರಂಗಳ್ಗೆ; ಅತ್ವಂ=ಅಕಾರಂ; ಮತ್ತೆ=ಬಳಿಕ; ಳಕಾರಕ್ಕೆ=ವ್ಯಂಜನದ ಳಕಾರಕ್ಕೆ; ಉತ್ವಂ=ಉಕಾರಂ; ಪತ್ತಲೊಡಂ=ಪತ್ತಲೊಡನೆ; ಬಿಂದು=ಸೊನ್ನೆ; ಬಂದು=ಬಂದು; ನೆಲೆಗೊಂಡು=ನೆಲಸಿ; ಇರ್ಕುಂ=ಇರ್ಪುದು.

ವೃತ್ತಿ.

ಕೃತ್ತಿಲ್ಲದುದಂತಕ್ಕಂ ಅದಂತಕ್ಕಂ ಬಿಂದು ಸಂದಿಸುಗುಂ; ವ್ಯಂಜನದ ನಕಾರ ಣಕಾರಂಗಳ್ಗೆ ಅತ್ವಮುಂ ಳಕಾರಕ್ಕುಕಾರಮುಂ ಪತ್ತಲೊಡಂ, ಸೊನ್ನೆಯವತರಿಸುಗುಂ.

ಪ್ರಯೋಗಂ.

ಉದಂತಕ್ಕೆ—ಕುಕ್ಕುಂದಱಿ, ದಕ್ಕುಂದಲೆ, ತಾಱುಂಬಳಿ.
ಅದಂತಕ್ಕೆ—ಒಕ್ಕಂಬಯಲ್, ಕಳ್ಳಂಗಡಲೆ, ಜಕ್ಕಂದೊಱಲಿ [—ದೊಳಲಿ].
ನಕಾರಕ್ಕೆ—ಮೀನಂಬುಱು, ಬಾನಂಗುಳಿಗೆ.
ಣತ್ವಕ್ಕೆ—ಕಣ್ಣಂದೊಱಲಿ [—ದೊಳಲಿ].
ಳಕಾರಕ್ಕೆ—ಬೆಳ್ಳುಂಬಟ್ಟೆ.

ಸೂತ್ರಂ.

ಪೆಱಗು (S. 166) becomes ಪೆಡಂ or ಪೆಡ.

ಪೆಡವೆಂಬಾದೇಶಂ ಬಂ
ದೆಡೆಗೊಳ್ಗುಂ ಪೆಱಗೆನಿಪ್ಪ ಶಬ್ದದೊಳದು ತಾಂ |
ಪಡೆಗುಂ ಬಿಂದುವುನರೆಬರ್
ತಡಗಾಲೆಂಬಂತಬಿಂದುವುಮನಾಚರಿಪರ್ || 173 ||

ಪದಚ್ಛೇದಂ.

ಪೆಡಂ ಎಂಬ ಆದೇಶಂ ಬಂದು ಎಡೆಗೊಳ್ಗುಂ ಪೆಱಗು ಎನಿಪ್ಪ ಶಬ್ದದೊಳ್; ಅದು ತಾಂ ಪಡೆಗುಂ ಬಿಂದುಮಂ; ಅರೆಬರ್ ತಡಗಾಲ್ ಎಂಬ ಅಂತೆ ಅಬಿಂದುವುಮಂ ಆಚರಿಪರ್.

ಅನ್ವಯಂ.

ಪೆಱಗೆನಿಪ್ಪ ಶಬ್ದದೊಳ್ ಪೆಡವೆಂಬಾದೇಶಂ ಬಂದು ಎಡೆಗೊಳ್ಗುಂ; ಅದು ತಾಂ ಬಿಂದುಮಂ ಪಡೆಗುಂ; ಅರೆಬರ್ ತಡಗಾಲ್ ಎಂಬಂತೆ ಅಬಿಂದುವುಮಂ ಆಚರಿಪರ್.

ಟೀಕು.

ಪೆಱಗು (ಪೆಱಗೆ)=ಪೆಱಗೆಂದು; ಎನಿಪ್ಪ ಶಬ್ದದೊಳ್=ಎನಿಸುವ ಶಬ್ದದಲ್ಲಿ; ಪೆಡಂ=ಪೆಡಂ ಎಂದು; ಎಂಬಾದೇಶಂ=ಎಂಬಾದೇಶಂ; ಬಂದು=ಬಂದು; ಎಡೆಗೊಳ್ಗುಂ=ಎಡೆಗೊಂಬುದು; ಅದು ತಾಂ=ತಾನದು; ಬಿಂದುಮಂ=ಸೊನ್ನೆಯಂ; ಪಡೆಗುಂ=ಪಡೆವುದು; ಅರೆಬರ್=ಕೆಲಂಬರ್; ತಡಗಾಲೆಂಬಂತೆ=ತಡಗಾಲೆಂಬ ಹಾಂಗೆ; ಅಬಿಂದುವುಮಂ=ಬಿಂದುವಿಲ್ಲದುದನಾಗಿಯುಂ; ಆಚರಿಪರ್=ಪೇಳ್ವರ್.

ವೃತ್ತಿ.

ಪೆಱಗೆಂಬುದರ್ಕೆ ಪೆಡವೆಂದಾದೇಶಮಾದುದರ್ಕೆ ಬಿಂದುವಕ್ಕುಂ; ಕೆಲರ್ ತಡಗಾಲೆಂಬವೊಲ್ ಅದರ್ಕೆ ಬಿಂದುವಿಲ್ಲದೆಯುಂ ಒಲ್ಲರ್.

ಪ್ರಯೋಗಂ.

ಪೆಡವಾದೇಶಕ್ಕೆ—ಪೆಡಂಗಯ್; ಪೆಡಂದಲೆ; ಪೆಡಂಮೆಟ್ಟು;—ತಡಂಗಾಲ್ ಎಂಬಂತೆ.

ಅಬಿಂದುವಿಗೆ—ಪೆಡಗಯ್; ಪೆಡದಲೆ; ಪೆಡಮೆಟ್ಟು;—ತಡಗಾಲ್ ಎಂಬಂತೆ.

ಸೂತ್ರಂ.

Compounds of Heterogeneal words (ಅರಿಸಮಾಸಂ, ವಿರು

ಪದವಿಧಿ ಕನ್ನಡಕಂ ಸ
ಕ್ಕದಕ್ಕಮಿಲ್ಲಾದ್ಯರಿಂದೆ ಸಂದುವನಱಿದಿ |

ದ್ಧಸಮಾಸಂ, Ss. 167; 168) are allowed in the 6 Compounds of ರ್ಪುದು ಬಿರುದಾವಳಿಯೊಳ್ಪೇ
ಳ್ವುದು ಪೆಱವಱೊಳಾಗದಿದು ವಿರುದ್ಧಸಮಾಸಂ || 174 ||

Saṇskṛt character only when sanctioned by poets of old (cf. Ss. 80; 289 seq.), as they are, for instance, in honorific language (ಬಿರುದು).

ಪದಚ್ಛೇದಂ.

ಪದವಿಧಿ ಕನ್ನಡಕಂ ಸಕ್ಕದಕ್ಕಂ ಇಲ್ಲ. ಆದ್ಯರಿಂದೆ ಸಂದುವಂ ಅಱಿದು ಇರ್ಪುದು; ಬಿರುದಾವಳಿಯೊಳ್ ಪೇೞ್ವುದು; ಪೆಱವಱೊಳ್ ಆಗದು. ಇದು ವಿರುದ್ಧಸಮಾಸಂ.

ಅನ್ವಯಂ.

ಕನ್ನಡಕಂ ಸಕ್ಕದಕ್ಕಂ ಪದವಿಧಿ ಇಲ್ಲ ಎಂಬುದನ್ವಯಂ.

ಟೀಕು.

ಕನ್ನಡಕಂ=ಕರ್ಣಾಟಕಶಬ್ದಕ್ಕೆಯುಂ; ಸಕ್ಕದಕ್ಕಂ=ಸಂಸ್ಕೃತಶಬ್ದಕ್ಕೆಯುಂ; ಪದವಿಧಿ=ಸಮಾಸವಿಧಿ; ಇಲ್ಲ=ಉಂಟಾಗದು; ಆದ್ಯರಿಂದೆ=ಪುರಾತನಕವಿಗಳಿಂದ; ಸಂದುವಂ=ಸಲುವಳಿಯಾದುವಂ; ಅಱಿದಿರ್ಪುದು=ತಿಳಿದಿರ್ಪುದು; ಬಿರುದಾವಳಿಯೊಳ್=ಬಿರುದಾವಳಿಯಲ್ಲಿ; ಪೇೞ್ವುದು=ಹೇಳ್ವುದು; ಪೆಱವಱೊಳ್=ಅನ್ಯವಾದುವಱಲ್ಲಿ; ಆಗದು=ಆಗದು; ಇದು=ಇದು; ವಿರುದ್ಧಸಮಾಸಂ=ಅರಿಸಮಾಸವೆನಿಸುವುದು.

ವೃತ್ತಿ.

ಕನ್ನಡಕ್ಕಂ ಸಂಸ್ಕೃತಕ್ಕಂ ಸಮಾಸಮಿಲ್ಲ. ಆದಿಮಾರ್ಗದಿನೆಂತರ್ಕೆ ಕೆಲವಂ ಸಂದುವನಱಿದಿರ್ಪುದು; ಬಿರುದಾವಳಿಯೊಳ್ಮೆಚ್ಚಿದಂತೆ ಪೇೞ್ವುದು; ಮಿಕ್ಕೆಡೆಯೊಳ್ಮಾಣ್ಬುದು.

ಪ್ರಯೋಗಂ.

ಅರಿಸಮಾಸಕ್ಕೆ—ಮುಖತಾವರೆ; ಅರಸುಕುಮಾರಂ; ಕೆಳದಿಸಮೇತಂ. ಇವು ಅರಿಸಮಾಸಂ.

ಮಾರ್ಗದೊಳುಳ್ಳವರ್ಕೆ—ಕಡುರಾಗಂ; ಮೊಗರಾಗಂ; ಅಱಿಕೆನಾಯಕಂ; ಗುಣಕಱಿಗೊಂಡಂ; ಕಟ್ಟೆಕಾಂತಂ; ಕೂರಸಿ; ಆೞಿಜನಂ (ಆಳಿ—); ತುರಗದೞಂ; ಮಂಗಳಾರತಿ; ಮಂಗಳವಸದನಂ; ಮಂಗಳವರೆ; ಅರಸುಗುಣಂ; ಕಡುದರ್ಪಂ. ಪೆಱವು ಮನೀ ತೆಱದಿನಱಿವುದು. ಇವಱಂತೆ ಬೇಱೆ ಮಾಡಲಾಗದು.

ಬಿರುದಿಂಗೆ—ಗಜದುಳಿ; ಗಜಪಾೞು (—ಪೋರು); ನರಲೋಕದಲ್ಲಣಂ; ಮಾಸವಳಮದನಮಹೇಶಂ; ಅಂಕತ್ರಿಣೇತ್ರಂ; ಗುಣಕ್ಕೆನಲ್ಲಗಣೇಶಂ (s. S. 75); ದೞ

ಮುಖಧವಳಂ; ದಟಿಮುಖಾದಿತ್ಯಂ; ರಾಯಕೋಳಾಹಳಂ. ಈ ತೆಱದೆ ಬಿರುದಿನೊಳ್ ಎತ್ತಾನುಂ ಸಲ್ಗುದು.

ಸೂತ್ರಂ.

In Compounds ಎಲ್ಲ (S. 151) retains its form or becomes ಎಲ್ಲಾ; ಮಹತ್ becomes ಮಾ (cf. S. 291). These forms may freely enter into compounds with Canarese and Sanskṛt themes.

ಸವನಿಸುವುದೆಲ್ಲಶಬ್ದ
ಕ್ಕೆ ವಿಕಲ್ಪದೆ ದೀರ್ಘವಿಧಿ ಮಹಚ್ಛಬ್ದಕ್ಕು |
ದ್ಭವಿಕುಂ ಮಾದೇಶಂ ದೋ
ಷವಿಲ್ಲ ಸಂಸ್ಕೃತಪದಂ ಪರಕ್ಕೊದವಲೊಡಂ || 175 ||

ಪದಚ್ಛೇದಂ.

ಸವನಿಸುವುದು ಎಲ್ಲಶಬ್ದಕ್ಕೆ ವಿಕಲ್ಪದೆ ದೀರ್ಘವಿಧಿ; ಮಹಚ್ಛಬ್ದಕ್ಕೆ ಉದ್ಭವಿಕುಂ ಮಾದೇಶಂ. ದೋಷಂ ಇಲ್ಲ, ಸಂಸ್ಕೃತಪದಂ ಪರಕ್ಕೆ ಒದವಲೊಡಂ.

ಅನ್ವಯಂ.

ಎಲ್ಲಶಬ್ದಕ್ಕೆ ವಿಕಲ್ಪದೆ ದೀರ್ಘವಿಧಿ ಸವನಿಸುವುದು; ಮಹಚ್ಛಬ್ದಕ್ಕೆ ಮಾದೇಶಂ ಉದ್ಭವಿಕುಂ. ಸಂಸ್ಕೃತಪದಂ ಪರಕ್ಕೆ ಒದವಲೊಡಂ, ದೋಷಂ ಇಲ್ಲ.

ಟೀಕು.

ಎಲ್ಲಶಬ್ದಕ್ಕೆ=ಎಲ್ಲ ಎಂಬ ಶಬ್ದಕ್ಕೆ; ವಿಕಲ್ಪದೆ=ವಿಕಲ್ಪದಿಂದೆ; ದೀರ್ಘವಿಧಿ=ದೀರ್ಘದ ವಿಧಿ; ಸವನಿಸುವುದು=ಬರ್ಪುದು; ಮಹಚ್ಛಬ್ದಕ್ಕೆ=ಮಹತ್ ಎಂಬ ಶಬ್ದಕ್ಕೆ; ಮಾದೇಶಂ=ಮಾ ಎಂಬಾದೇಶಂ; ಉದ್ಭವಿಕುಂ=ಹುಟ್ಟುವುದು; ಸಂಸ್ಕೃತಪದಂ=ಸಂಸ್ಕೃತದ ಪದಂ; ಪರಕ್ಕೆ=ಮುಂದುಗಡೆಗೆ; ಒದವಲೊಡಂ=ಪ್ರಾಪ್ತಿಸಲೊಡನೆ; ದೋಷಂ=ಅರಿಸಮಾಸದ ದೋಷಂ; ಇಲ್ಲ=ಉಂಟಾಗದು.

ವೃತ್ತಿ.

ಎಲ್ಲ ಎಂಬ ಶಬ್ದಕ್ಕೆ ವಿಕಲ್ಪದಿಂ ದೀರ್ಘಮಕ್ಕುಂ; ಮಹಚ್ಛಬ್ದಕ್ಕೆ ಮಾ ಎಂಬಾದೇಶಮಕ್ಕುಂ. ಇವರ್ಕೆ ಸಂಸ್ಕೃತಪದಂ ಪರಮಾದೊಡಂ ದೋಷಮಿಲ್ಲ.

ಪ್ರಯೋಗಂ.

ದೀರ್ಘವಿಕಲ್ಪಕ್ಕೆ—ಎಲ್ಲಕಾರ್ಯಂ, ಎಲ್ಲಾಕಾರ್ಯಂ; ಎಲ್ಲರತ್ನಂ, ಎಲ್ಲಾರತ್ನಂ; ಎಲ್ಲಧನಂ, ಎಲ್ಲಾಧನಂ; ಎಲ್ಲಾಪುರುಷರ್; ಎಲ್ಲಾಕಾಂತೆಯರ್; ಎಲ್ಲಂಗಮೆಲ್ಲಧನಮುಮನೆಲ್ಲೆಡೆಯೊಳಮೆಲ್ಲತೆಱದೊಳುಂ ಕುಡುಗೆಮಗೆ; ಎಲ್ಲಾರತ್ನಂಗಳುಮನೊಳಕೊಂಡಾಳ್ವನಂಭೋನಿಧಿಲೋಕಕ್ಕೆಲ್ಲಂ ಬೀಱುಗುಂ.

ಮಹಟ್ಟಬ್ದಕ್ಕೆ—ಮಾದೇವಂ; ಮಾಕಾಳಿ; ಮಾದಾನಿ; ಮಾಶೌರ್ಯಂ.
ಕನ್ನಡಕ್ಕೆ—ಮಾಸಾವಂತಂ; ಮಾಲಕುಮಿ; ಮಾನಾಮಿ.

## ಸೂತ್ರಂ.

In Determinative compounds (S. 164) the final letter of the first word is often elided, and also a homogeneous (ಉಚಿತ) letter is often supplied with or without Elision. ಕೆಳಗು becomes ಕಿಱು and (before ನ) ಕಿನ್. (cf. S. 166).

ನೆಲೆಗೊಳ್ಗುಂ ಪೂರ್ವಪದಾಂ
ತ್ಯಲೋಪಮದು ಬಹುಳದಿಂದೆ ತತ್ಪುರುಷಕ್ಕ |
ಗ್ಗಲಿಪುದುಚಿತಾಕ್ಷರಾಗಮ
ಮೊಲೆಗುಂ ಕೆಳಗಣ್ಗೆ ಕಿಱುಕಿನ್ನೆಂಬಾದೇಶಂ || 176 ||

## ಪದಚ್ಛೇದಂ.

ನೆಲೆಗೊಳ್ಗುಂ ಪೂರ್ವಪದಾಂತ್ಯಲೋಪಂ ಅದು ಬಹುಳದಿಂದೆ ತತ್ಪುರುಷಕ್ಕೆ; ಅಗ್ಗಲಿಪುದು ಉಚಿತಾಕ್ಷರಾಗಮಂ; ಒಲೆಗುಂ ಕೆಳಗಣ್ಗೆ ಕಿಱು ಕಿನ್ ಎಂಬ ಆದೇಶಂ.

## ಅನ್ವಯಂ.

ತತ್ಪುರುಷಕ್ಕೆ ಪೂರ್ವಪದಾಂತ್ಯಲೋಪಂ ಅದು ಬಹುಳದಿಂದೆ ನೆಲೆಗೊಳ್ಗುಂ; ಉಚಿತಾಕ್ಷರಾಗಮಂ ಅಗ್ಗಲಿಪುದು; ಕೆಳಗಣ್ಗೆ ಕಿಱು ಕಿನ್ ಎಂಬಾದೇಶಂ ಒಲೆಗುಂ.

## ಟೀಕು.

ತತ್ಪುರುಷಕ್ಕೆ=ತತ್ಪುರುಷಸಮಾಸಕ್ಕೆ; ಪೂರ್ವಪದ=ಮೊದಲ ಪದದ; ಅಂತ್ಯ=ಕಡೆಯಣಕ್ಷರದ; ಲೋಪಂ=ಅದರ್ಶನಂ; ಅದು=ಅದು; ಬಹುಳದಿಂದೆ=ಬಹುಳದಿಂದೆ; ನೆಲೆಗೊಳ್ಗುಂ=ನೆಲೆಗೊಂಬುದು; ಉಚಿತ=ಉಚಿತವಾದ; ಅಕ್ಷರ=ಅಕ್ಷರದ; ಆಗಮಂ=ಆಗಮಂ; ಅಗ್ಗಲಿಪುದು=ಬರ್ಪುದು; ಕೆಳಗಣ್ಗೆ=ಕೆಳಗೆಂಬ ಶಬ್ದಕ್ಕೆ; ಕಿಱು=ಕಿಱುಎಂದು; ಕಿನ್=ಕಿನ್ನೆಂದು; ಎಂಬಾದೇಶಂ=ಎಂಬಾದೇಶಂ; ಒಲೆಗುಂ=ಬರ್ಪುದು.—ಅಗ್ಗಲಿಪುದೆಂದೊಡೆ ವೆಗ್ಗಳವಪ್ಪುದು; ಒಲೆಗುಂ ಎಂದೊಡೆ ಒಲೆವುದೆಂಬುದರ್ಥಂ=ಔಚಿತ್ಯದಿಂ ಬರ್ಪುದೆಂಬುದರ್ಥಂ.

## ವೃತ್ತಿ.

ತತ್ಪುರುಷಕ್ಕೆ ಬಹುಳದಿಂ ಕೆಲವೆಡೆಯೊಳ್ಮೊದಲ ಪದದ ಕಡೆಯಕ್ಕರಕ್ಕೆ ಲೋಪಂ; ಕೆಲವೆಡೆಯೊಳ್ ಲೋಪಂಬೆರಸುಚಿತಾಕ್ಷರಾಗಮಂ; ಕೆಳಗೆಂಬುದರ್ಕೆ ಕಿಱುಎಂದುಂ ಕಿನ್ ಎಂದುಮಾದೇಶಮಕ್ಕುಂ.

## ಪ್ರಯೋಗಂ.

ಪದಾಂತ್ಯಲೋಪಕ್ಕೆ—ಒಳಕೊಂಟೆ; ಜೇನೆಯ್; ತೆಂಗಾಳಿ; ಅರಮನೆ.

ಉಚಿತಾಕ್ಷರಾಗಮಕ್ಕೆ—ತೆಂಬೆಲರ್; ದಾಂಗುಡಿ; ಮಾಂಗಾಯ್; ಅಂಗೊಳಗು; ಅಂಗೊಳಂ; ಕಂಮುಂಗಣ್; ಕಡಲಾನ್ಪೊಂಗೊಳಗಿರಂ.

ಲೋಪಮಿಲ್ಲದುಚಿತಾಕ್ಷರಾಗಮಕ್ಕೆ—ನಟ್ಟೆವನೆ; ನಟ್ಟೆಗೊಂಬು; ನಟ್ಟೆವನಿ. ಇಲ್ಲಿ ಎಕಾರಮುಚಿತವರ್ಣಾಗಮಂ.

ಕಿಱಾದೇಶಕ್ಕೆ—ಕಿಱುಗೊಂಬು; ಕಿಟ್ಟಿವಲ್; ಕಿಟ್ಟಿಣ್; ಕಿಟ್ಟಿಟ್ಟು; ಕಿಟ್ಟಿಡಲ್.

ಕಿನಾದೇಶಕ್ಕೆ—ಕಿನ್ನೀರ್; ಕಿನ್ನೆಲಂ.

ಸೂತ್ರಂ.

Also in Appositional (S. 164; 170 seq.) and other Compounds such Elision takes place.

ಅಕ್ಕುಂ ಪದಾಂತ್ಯಲೋಪಂ
ತಕ್ಕಂತಿರೆ ಕರ್ಮಧಾರಯಕ್ಕಂ ದ್ವಿಗುಗಂ |
ಮಿಕ್ಕಾ ದ್ವಂದ್ವಕ್ಕಂ ಮೇ
ಲಕ್ಕರಿಗರಿನಾ ಕ್ರಿಯಾಸಮಾಸೋಪೇತಂ || 177 ||

ಪದಚ್ಛೇದಂ.

ಅಕ್ಕುಂ ಪದಾಂತ್ಯಲೋಪಂ ತಕ್ಕ ಅಂತೆ ಇರೆ ಕರ್ಮಧಾರಯಕ್ಕಂ ದ್ವಿಗುಗಂ ಮಿಕ್ಕ ಆ ದ್ವಂದ್ವಕ್ಕಂ; ಮೇಲೆ ಅಕ್ಕರಿಗರಿಂ ಆ ಕ್ರಿಯಾಸಮಾಸೋಪೇತಂ.

ಅನ್ವಯಂ.

ಕರ್ಮಧಾರಯಕ್ಕಂ ದ್ವಿಗುಗಂ ಮಿಕ್ಕಾ ದ್ವಂದ್ವಕ್ಕಂ ತಕ್ಕಂತಿರೆ ಪದಾಂತ್ಯಲೋಪಂ ಅಕ್ಕುಂ; ಮೇಲೆ ಅಕ್ಕರಿಗರಿಂ ಆ ಕ್ರಿಯಾಸಮಾಸೋಪೇತಂ.

ಟೀಕು.

ಕರ್ಮಧಾರಯಕ್ಕಂ=ಕರ್ಮಧಾರಯಸಮಾಸಕ್ಕೆಯುಂ; ದ್ವಿಗುಗಂ=ದ್ವಿಗುಸಮಾಸಕ್ಕೆಯುಂ; ಮಿಕ್ಕಾ=ಉಳಿದ ಆ; ದ್ವಂದ್ವಕ್ಕಂ=ದ್ವಂದ್ವಸಮಾಸಕ್ಕೆಯುಂ; ತಕ್ಕಂತಿರೆ=ತಕ್ಕ ಹಾಂಗೆ; ಪದಾಂತ್ಯಲೋಪಂ=ಪೂರ್ವ ಪದದ ಕಡೆಯಕ್ಷರದ ಲೋಪಂ; ಅಕ್ಕುಂ=ಅಪ್ಪುದು; ಮೇಲೆ=ಆ ಮೇಲೆ; ಅಕ್ಕರಿಗರಿಂ=ಅಕ್ಷರಜ್ಞರಿಂದೆ; ಆ ಕ್ರಿಯಾಸಮಾಸೋಪೇತಂ=ಆ ಕ್ರಿಯಾಸಮಾಸದಲ್ಲಿಯುಂ ಕೂಡಿಪುದು.

ವೃತ್ತಿ.

ಕರ್ಮಧಾರಯಕ್ಕಂ ದ್ವಿಗುವಿಂಗಂ ದ್ವಂದ್ವಕ್ಕಂ ಕ್ರಿಯಾಸಮಾಸಕ್ಕಂ ಪೂರ್ವಪದಾಂತ್ಯಲೋಪಂ ಕೆಲವೆಡೆಯೊಳಕ್ಕುಂ.

ಪ್ರಯೋಗಂ.

ಕರ್ಮಧಾರಯಕ್ಕೆ—ಬಡವುನಡು, ಬಡನಡು; ಅರಸುನೇಱಲ್ (—ನೆಱಿಲ್), ಅರನೇಱಲ್; ಪೊಲ್ಲದುಮೊಗಂ, ಪೊಲ್ಲಮೊಗಂ.

ದ್ವಿಗುವಿಂಗೆ—ಪಲವುದಿವಸಂ(—ದೆವಸಂ), ಪಲದಿವಸಂ; ಪಲವುಕಣ್ಗಳ್, ಪಲಗಣ್ಗಳ್.

ದ್ವಂದ್ವಕ್ಕೆ—ತಮ್ಮತಮ್ಮರಾಜ್ಯಂ, ತಂತಂಮ [M. B.—ತಮ] ರಾಜ್ಯಂ; [M. B. ತಂತಮ ಮಹಾವಿಭೂತಿ; ತಂತಮ ಬಲಂ].

ಕ್ರಿಯಾಸಮಾಸಕ್ಕೆ—ಪೊಗುತಂದಂ, ಪೊತಂದಂ (ಪೋ—); ಕೆಳಗುಸಾರ್ದಂ, ಕೆಳಸಾರ್ದಂ; ಎಯ್ದುತಂದಂ, ಎಯ್ತಂದಂ; ಕಳವಸುತ್ತಿದಂ, ಕಳಸುತ್ತಿದಂ; ಏನ ಪೇಳ್ದೆಂ (ಏನಂ—), ಏವೇಳ್ದೆನ್ ಅವನ ಚಾಗದ ಪೆಂಪಂ; ಏತರ್ಕೆ ಬಂದಂ, ಏವಂದಂ; ಏತರ್ಕೆ ಪೋದಂ, ಏವೋದಂ; ಏವಂದರೇವೋದರೆನ್ನದೆ ಕಾಲ್ತುರಿಸಲ್ಕವೆಂದು.

ಸೂತ್ರಂ.

(As seen already by S. 177) in Appositional compounds where the said Elision occurs, an ಅ will appear; (when the first word is a ready noun,) one can account for the compound by assuming an Elision, for instance, of ಅಂತಪ್ಪ (S. 160).

ದೊರೆಕೊಳ್ವುದತ್ವವಿಧಿಯುಂ
ತರಾಳದೊಳ್ಬಹುಳಮಾಗಿ ಮಧ್ಯಪದಕ್ಕಂ |
ದೊರೆಕೊಳ್ವುದದರ್ಶನವಿಧಿ
ವಿರಳತೆಯಿಂ ಕರ್ಮಧಾರಯಕ್ಕಱಿವವರಿಂ || 178 ||

ಪದಚ್ಛೇದಂ.

ದೊರೆಕೊಳ್ವುದು ಅತ್ವವಿಧಿ ಅಂತರಾಳದೊಳ್ ಬಹುಳಂ ಆಗಿ, ಮಧ್ಯಪದಕ್ಕಂ ದೊರೆಕೊಳ್ವುದು ಅದರ್ಶನವಿಧಿ ವಿರಳತೆಯಿಂ ಕರ್ಮಧಾರಯಕ್ಕೆ ಅಱಿವವರಿಂ.

ಅನ್ವಯಂ.

ಕರ್ಮಧಾರಯಕ್ಕೆ ಅಂತರಾಳದೊಳ್ ಅತ್ವವಿಧಿ ಬಹುಳಂ ಆಗಿ ದೊರೆಕೊಳ್ವುದು, ಅಱಿವವರಿಂ ಮಧ್ಯಪದಕ್ಕಂ ವಿರಳತೆಯಿಂ ಅದರ್ಶನವಿಧಿ ದೊರೆಕೊಳ್ವುದು.

ಟೀಕು.

ಕರ್ಮಧಾರಯಕ್ಕೆ=ಕರ್ಮಧಾರಯಸಮಾಸಕ್ಕೆ; ಅಂತರಾಳದೊಳ್=ಮಧ್ಯದಲ್ಲಿ; ಅತ್ವವಿಧಿ=ಅಕಾರದ ವಿಧಿ; ಬಹುಳಮಾಗಿ=ಬಹುಳವಾಗಿ; ದೊರೆಕೊಳ್ವುದು=ಪ್ರಾಪ್ತಿಸುವುದು; ಅಱಿವವರಿಂ=ಬಲ್ಲವರಿಂದೆ; ಮಧ್ಯಪದಕ್ಕಂ=ನಡುವಣ ಪದಕ್ಕೆಯುಂ; ವಿರಳತೆಯಿಂ=ವಿರಳತ್ವದಿಂದೆ; ಅದರ್ಶನವಿಧಿ=ಲೋಪದ ವಿಧಿ; ದೊರೆಕೊಳ್ವುದು=ಬರ್ಪುದು.

ವೃತ್ತಿ.

ಕರ್ಮಧಾರಯದೊಳೆತ್ತಾನುಂ ಮಧ್ಯದೊಳೊಂದಕಾರಮಕ್ಕುಂ; ಕೆಲವೆಡೆಯೊಳ್ಮಧ್ಯಪದಕ್ಕೆ ಲೋಪಮಕ್ಕುಂ.

ಪ್ರಯೋಗಂ.

ಅತ್ತಕ್ಕೆ—ಬಟ್ಟಿತ್ತುತೊಡೆ, ಬಟ್ಟದೊಡೆ (cf. S. 184); ಬೆಟ್ಟಬೆಸಗೆ (—ವೇಸಗೆ), ದಟ್ಟವಲಿ [—ವಳ್ಳಿ] ಇವುಮಂತೆ. (cf. S. 77).

ಮಧ್ಯಪದಲೋಪಕ್ಕೆ—ಅಲರಂತಪ್ಪ ಕಣ್ ಎಂಬಲ್ಲಿ ಅಂತಪ್ಪ ಎಂಬುದರ್ಕೆ ಲೋಪವಾಗಿ ಅಲರ್ಗಣ್ ಎಂದಾಯ್ತು; ಪೆಱನೊಸಲ್; ತೊಂಗಲ್ಗುರುಳ್ ಇವುಮಂತೆ.

ಸೂತ್ರಂ.

ಮುಂದಣ ಪದಂ ವಿಶೇಷ್ಯದೊ
ಳೊಂದಿರೆ ಪಿಂದಿರ್ದ ಪದದುಪಾಂತ್ಯಸ್ವರದಿಂ |
ಸಂದಿಪುದು ಲೋಪಮಾದಿಯೊ
ಳೊಂದಿದಿಕಾರಕ್ಕೆಕಾರವಿಧಿ ಬಹುಳತೆಯಿಂ || 179 ||

Further in Appositional compounds the final syllable together with the penultimate vowel of the first word (Adjective) is elided, and the vowel of the first syllable of this word, when ಇ, often changed into ಎ (cf. S. 238).

ಪದಚ್ಛೇದಂ.

ಮುಂದಣ ಪದಂ ವಿಶೇಷ್ಯದೊಳ್ ಒಂದಿ ಇರೆ, ಪಿಂದೆ ಇರ್ದ ಪದದ ಉಪಾಂತ್ಯಸ್ವರದಿಂ ಸಂದಿಪುದು ಲೋಪಂ; ಆದಿಯೊಳ್ ಒಂದಿದ ಇಕಾರಕ್ಕೆ ಎಕಾರವಿಧಿ ಬಹುಳತೆಯಿಂ.

ಅನ್ವಯಂ.

ಉಪಾಂತ್ಯಸ್ವರದಿಂ ಲೋಪಂ ಸಂದಿಪುದು; ಆದಿಯೊಳ್ ಒಂದಿದಿಕಾರಕ್ಕೆ ಬಹುಳತೆಯಿಂ ಎಕಾರವಿಧಿ ಎಂಬುದನ್ವಯಂ.

ಟೀಕು.

ಮುಂದಣ=ಅಗ್ರದ; ಪದಂ=ಪದಂ; ವಿಶೇಷ್ಯದೊಳ್=ವಿಶೇಷ್ಯದಲ್ಲಿ; ಒಂದಿರೆ=ಕೂಡಿರೆ; ಪಿಂದೆ=ಹಿಂದೆ; ಇರ್ದ ಪದದ=ಇರ್ದ ಪದದ; ಉಪಾಂತ್ಯಸ್ವರದಿಂ=ಉಪಾಂತ್ಯಸ್ವರದೊಡನೆ; ಲೋಪಂ=ಅದರ್ಶನಂ; ಸಂದಿಪುದು=ಸಂದಿಸುವದು; ಆದಿಯೊಳ್=ಮೊದಲಲ್ಲಿ; ಒಂದಿದಿಕಾರಕ್ಕೆ=ಕೂಡಿದ ಇಕಾರಕ್ಕೆ; ಬಹುಳತೆಯಿಂ=ಬಹುಳತ್ವದಿಂದೆ; ಎಕಾರವಿಧಿ=ಎಕಾರದ ವಿಧಿ ಸಂದಿಪುದು.

ವೃತ್ತಿ.

ಪರ ಪದಂ ವಿಶೇಷ್ಯಮಾಗಿರೆ, ಪೂರ್ವ ಪದದುಪಾಂತ್ಯಸ್ವರದಿಂ ಲೋಪಂ; ಪದದಾದಿಯಿಕಾರಕ್ಕೆ ಬಹುಳದಿಂದೆಕಾರಮಕ್ಕುಂ.

ಪ್ರಯೋಗಂ.

ಉಪಾಂತ್ಯಸ್ವರಲೋಪಕ್ಕೆ (see s. S. 164)—(ತೆಳಿತ್ತು+ಬಸುಱ್=) ತೆಳ್ಬಸುಱ್;

(ಬಳಿತ್ತು+ನುಡಿ=) ಬಳ್ನುಡಿ (ಬಳ್ಮದಿ); (ಬಲಿತು+ಮುಗುಳ್=) ಬಲ್ಮುಗುಳ್; (ಮೆಲ್ಲಿತು+ಅಡಿ=) ಮೆಲ್ಲಡಿ.

ಎತ್ತಕ್ಕೆ—(ಪಿರಿದು+ವೊಲೆ=) ಪೆರ್ವೊಲೆ; ಪೆರ್ಮರಂ; ಪೆರ್ಮಾತು; (ಬಿಳಿದು+ತಿಂಗಳ್=) ಬೆಳ್ದಿಂಗಳ್; ಬೆಳ್ಮುಗಿಲ್; ಬೆಳ್ವಲ್; ಬೆಳ್ವಯಲ್.

ಬಹುಳಕ್ಕೆ—(ಬಿಱಿತು+ಕೊನೆ=) ಬಿಱ್ಕೊನೆ; ಬಿಱ್ಪುಱೆ; (ಇನಿದು+ಮಾವು=) ಇಂಮಾವು.

ಸೂತ್ರಂ.

ಅಗುರುಪದಾದಿಗೆ ದೀರ್ಘಂ
ನೆಗೞ್ಗುಂ[1] ಮತ್ತಲ್ಲಿ ಬಂದು ಣಟಳನತಂಗಳ್ |
ಪುಗೆ ಪೆಱತೆಂ ದ್ವಿಭಾರ್ವಂ
ನೆಗೞ್ಗುಂ ಸ್ವರಮಿದಿರೊಳೊದವೆ ಬಹುಳತೆಯಿಂದಂ || 180 ||

Further chiefly when, after the Elision, the final consonant of the first word (Adjective, Numeral) meets a vowel, its own vowel is lengthened; and when its final consonant has become ಣ್, ಟ್, ಳ್, ನ್, or ತ್, it is doubled (cf. S. 69).

ಪದಚ್ಛೇದಂ.

ಅಗುರುಪದಾದಿಗೆ ದೀರ್ಘಂ ನೆಗೞ್ಗುಂ, ಮತ್ತೆ ಅಲ್ಲಿ ಬಂದು ಣ ಟ ಳ ನ ತಂಗಳ್ ಪುಗೆ, ಪೆಱತೆಂ, ದ್ವಿಭಾರ್ವಂ ನೆಗೞ್ಗುಂ, ಸ್ವರಂ ಇದಿರೊಳ್ ಒದವೆ, ಬಹುಳತೆಯಿಂದಂ.

ಅನ್ವಯಂ.

ಸ್ವರಂ ಇದಿರೊಳ್ ಒದವೆ, ಬಹುಳತೆಯಿಂದಂ ಅಗುರುಪದಾದಿಗೆ ದೀರ್ಘಂ ನೆಗೞ್ಗುಂ; ಮತ್ತೆ ಅಲ್ಲಿ ಣ ಟ ಳ ನ ತಂಗಳ್ ಬಂದು ಪುಗೆ, ಪೆಱತೆಂ, ದ್ವಿಭಾರ್ವಂ ನೆಗೞ್ಗುಂ.

ಟೀಕು.

ಸ್ವರಂ=ಸ್ವರಾಕ್ಷರಂ; ಇದಿರೊಳ್=ಪರದಲ್ಲಿ; ಒದವೆ=ಪ್ರಾಪ್ತಿಸೆ; ಬಹುಳತೆಯಿಂದಂ=ಬಹುಳದಿಂದೆ; ಅಗುರು=ಲಘುವಾದ; ಪದ=ಪದಂಗಳ; ಆದಿಗೆ=ಮೊದಲ್ಗೆ; ದೀರ್ಘಂ=ದೀರ್ಘಂ; ನೆಗೞ್ಗುಂ=ಪ್ರಸಿದ್ಧಿವಡೆವುದು; ಮತ್ತೆ=ಆ ಮೇಲೆ; ಅಲ್ಲಿ=ಆ ಸ್ವರಾಕ್ಷರಂಗಳಿದಿರಾದಲ್ಲಿ; ಣ ಟ ಳ ನ ತಂಗಳ್=ಣಕಾರ ಟಕಾರ ಳಕಾರ ನಕಾರ ತಕಾರಂಗಳ್; ಬಂದು=ಬಂದು; ಪುಗೆ=ಪ್ರವೇಶವಾಗೆ; ಪೆಱತೆಂ=ಅನ್ಯವೆಂ; ದ್ವಿಭಾರ್ವಂ=ದ್ವಿತ್ವಂ; ನೆಗೞ್ಗುಂ=ಪ್ರಸಿದ್ಧಿವಡೆವುದು.

ವೃತ್ತಿ.

ಸ್ವರಂ ಪರಮಾಗೆ, ಪದದಾದಿಯ ಹ್ರಸ್ವಕ್ಕೆ ದೀರ್ಘಮಕ್ಕುಂ; ಪೂರ್ವಪದಾಂತ್ಯದೊಳ್ ಣ ಟ ಳ ನ ತಂಗಳಿರೆ, ದ್ವಿಭಾರ್ವಮಕ್ಕುಂ.

1) Instance of ಶಿಥಿಲತ್ವಂ.

### ಪ್ರಯೋಗಂ.

ದೀರ್ಘಕ್ಕೆ—(ಪಿರಿದು+ಆನೆ=ಪೆರಾನೆ=) ಪೇರಾನೆ, ಪೇರಡವಿ, ಪೇರೊಕ್ಕಲ್, ಪೇರಡಿ, ಪೇರೊಡಲ್; ಓರೆಂಜಲ್ (S. 187); ಈರ್ಬೈದು, ಈರೊತ್ತೆ (S. 187).

ಬಹುಳದಿಂ ವ್ಯಂಜನಪರವಾದಲ್ಲಿಯುಂ ದೀರ್ಘವಾಯ್ತು—(ಇನಿದು+ಸ್ವರಂ=ಇಂಚರಂ=) ಈಂಚರಂ, ಈಂಬುಳಿ, ಈಂಗಡಲ್, ಈಂದುಟಿ; ಈಂಗಡಲೊಪ್ಪವೆತ್ತಪಪಿಕನ್ನಡಿಚಂದ್ರಮಾ (—ವೆತ್ತಪನೆಕನ್ನಡಿಚಂದ್ರಮಾ).

ದ್ವಿತ್ವಕ್ಕೆ (cf. S. 181)—(ಪೆಣ್ದು+ಉಡೆ=) ಪೆಂಣುಡೆ, (ನುಣ್ತು+ಅರಿಸಿನಂ=) ನುಂಣರಿಸಿನಂ, ತಂಣೆಲರ್;—ಕಟ್ಟಾಯಂ, ಕಟ್ಟೆಳ್ಗೆ, ಕಟ್ಟಳ್ಕೆ;—ನಿಟ್ಟಯ್ದೆ, ನಿಟ್ಟೆಸಳ್, ಕಟ್ಟುಬ್ಬೆಟೆ [M. B. ಕಟ್ಟುಬ್ಬಟೆ];—ಬೆಳ್ಳಾನೆ; ಒಳ್ಳುಣಿಸು, ಅಳ್ಳೆರು, ಬೆಳ್ಳಾಳ್;—ಇನ್ನುಣಿಸು;—ಕುತ್ತಡಿ, ಕುತ್ತಿಳ್ಗೆ [ಕುತ್ತಳೆ], ಕುತ್ತಿಮಂ, ಕುತ್ತೆಸಳ್.

### ಸೂತ್ರಂ.

ಕಡಿದು ನಿಡಿದೆಂಬ ನಡುವೆಂ
ಬ ಡಕಾರಂ ಟತ್ವವಾಯ್ತು ಕಿಱಿದರ್ಕೆ ಕುಱಿಂ |
ಬೆಡೆಯಲ್ಲಿ ತಕಾರಂ ಸ್ವರ
ಮಡಸೆ ಪರಕ್ಕುತ್ವಮಸ್ವರಂ ನಿಲೆ ಪರದೊಳ್ || 181 ||

**Remark on S. 180:** ಕಡಿದು, ನಿಡಿದು, ನಡುವು, before Vowels, become ಕಟ್ಟು, ನಿಟ್ಟು, ನಟ್ಟು; but, before Consonants, ಕಡು, ನಿಡು, ನಡು (cf. S. 193).—ಕಿಱು and ಕುಱು (from ಕಿಱಿದು, S. 184), before Vowels, become ಕಿತ್ತು, ಕುತ್ತು; before Consonants they do not change.

### ಪದಚ್ಛೇದಂ.

ಕಡಿದು ನಿಡಿದು ಎಂಬ ನಡುವು ಎಂಬ ಡಕಾರಂ ಟತ್ವಂ ಆಯ್ತು, ಕಿಱಿದರ್ಕೆ ಕುಱು ಎಂಬ ಎಡೆಯಲ್ಲಿ ತಕಾರಂ, ಸ್ವರಂ ಅಡಸೆ ಪರಕ್ಕೆ; ಉತ್ವಂ, ಅಸ್ವರಂ ನಿಲೆ ಪರದೊಳ್.

### ಅನ್ವಯಂ.

ಪರಕ್ಕೆ ಸ್ವರಂ ಅಡಸೆ, ಕಡಿದು ನಿಡಿದೆಂಬ ನಡುವೆಂಬ ಡಕಾರಂ ಟತ್ವಂ ಆಯ್ತು; ಕಿಱಿದರ್ಕೆ ಕುಱು ಎಂಬೆಡೆಯಲ್ಲಿ ತಕಾರಂ; ಪರದೊಳ್ ಅಸ್ವರಂ ನಿಲೆ, ಉತ್ವಂ.

### ಟೀಕು.

ಪರಕ್ಕೆ=ಮುಂಗಡೆಗೆ; ಸ್ವರಂ=ಸ್ವರಾಕ್ಷರಂ; ಅಡಸೆ=ಪೊರ್ದುಗೆಯಾಗೆ; ಕಡಿದು ನಿಡಿದೆಂಬ ನಡುವೆಂಬ ಡಕಾರಂ=ಕಡಿದು ನಿಡಿದು ನಡುವೆಂಬ ಶಬ್ದಂಗಳ ಡಕಾರಂ; ಟತ್ವಂ=ಟಕಾರಂ; ಆಯ್ತು=ಆಯಿತು; ಕಿಱಿದರ್ಕೆ=ಕಿಱಿದೆಂಬ ಶಬ್ದಕ್ಕೆ; ಕುಱಿಂಬೆಡೆಯಲ್ಲಿ=ಕುಱು ಎಂಬಾದೇಶಂ ಬಂದಲ್ಲಿ; ತಕಾರಂ=ತತ್ವಂ ಆಯ್ತು; ಪರದೊಳ್=ಮುಂದೆ; ಅಸ್ವರಂ=ವ್ಯಂಜನಂ; ನಿಲೆ=ನೆಲೆಗೊಳೆ; ಉತ್ವಂ=ಈ ಪೇಳ್ದ ಶಬ್ದಂಗಳ ಕಡೆಯಣಕ್ಷರಕ್ಕೆ ಉಕಾರಂ ಆಯ್ತು.

## ವೃತ್ತಿ.

ಸ್ವರಂ ಪರಮಾಗೆ, ಕಡಿದು ನಿಡಿದು ನಡುವೆಂಬ ಡಕಾರಕ್ಕೆ ಟಕಾರಮಕ್ಕುಂ; ಕಿಱಿದೆಂಬ ಱಕಾರಕ್ಕಂ ಕುಱು ಎಂಬ ಱಕಾರಕ್ಕಂ ವ್ಯಂಜನದ ತಕಾರಮಕ್ಕುಂ; ವ್ಯಂಜನ ಪರಮಾದೆಡೆಯೊಳಿವರ್ಕೆ ಉಕಾರಮಕ್ಕುಂ.

## ಪ್ರಯೋಗಂ.

ಟಕಾರಕ್ಕೆ—ಕಟ್ಪಾೞ್, ಕಟ್ಟುಬ್ಬಸಂ;—ನಿಟ್ಟಡಕಿಲ್, ನಿಟ್ಟಿಕ್ಕೆ;—ನಟ್ಟಡವಿ, ನಟ್ಪಾಳಂ, ನಟ್ಟಿರುಳ್.

ತಕಾರಕ್ಕೆ—ಕಿತ್ತಡಿ, ಕಿತ್ತಳ್ಗೆ, ಕಿತ್ತಿಳೆ, ಕಿತ್ತೆಸಳ್;—ಕುತ್ತಡಿ.

ಉಕಾರಕ್ಕೆ—ಕಡುಗುದುರೆ, ಕಡುಗಾಳಿ;—ನಿಡುದೋಳ್, ನಿಡುವಯಣಂ;—ನಡುಸೆಱಂಗು, ನಡುಮಾಳಂ;—ಕಿಱುಗೂಸು (S. 164), ಕಿಱುನೆಲೆ, ಕಿಱುವಿದಿರ್, ಕಿಱುವಲೆ, ಕಿಱುನಾಯ್;—ಕುಱುದಡಿ, ಕುಱುಗಿಡ.

## ಸೂತ್ರಂ.

ಜನಿಯಿಸುಗುಂ ಪಚ್ಚನೆ ಕೆ
ಚ್ಚನೆ ಬೆಚ್ಚನೆಗಳ ಚಕಾರದೊಳ್ಮತ್ವಂ ಕೆ |
ಚ್ಚನೆಯಾದಿಗೆ ಚತ್ವಂ ಮೇ
ಣನಿತಱ ಮತ್ವಂ ಸುಕಾರಮೆತ್ವಕ್ಕಿತ್ವಂ || 182 ||

Further, before Consonants, ಪಚ್ಚನೆ, ಕೆಚ್ಚನೆ, ಬೆಚ್ಚನೆ become ಪಂ, ಕೆಂ, ಬೆಂ; ಕೆಚ್ಚನೆ becomes also ಚೆಂ; and ಕೆಚ್ಚನೆ, ಬೆಚ್ಚನೆ, ಪಚ್ಚನೆ, appear also as ಕಿಸು (or ಕೆಸು), ಬಿಸು and ಪಸು. Before Vowels ಪಚ್ಚನೆ becomes ಪಚ್ಚ್.

## ಪದಚ್ಛೇದಂ.

ಜನಿಯಿಸುಗುಂ ಪಚ್ಚನೆ ಕೆಚ್ಚನೆ ಬೆಚ್ಚನೆಗಳ ಚಕಾರದೊಳ್ ಮತ್ವಂ; ಕೆಚ್ಚನೆಯ ಆದಿಗೆ ಚತ್ವಂ; ಮೇಣ್ ಅನಿತಱ ಮತ್ವಂ ಸುಕಾರಂ, ಎತ್ವಕ್ಕೆ ಇತ್ವಂ.

## ಅನ್ವಯಂ.

ಪಚ್ಚನೆ ಕೆಚ್ಚನೆ ಬೆಚ್ಚನೆಗಳ ಚಕಾರದೊಳ್ ಮತ್ವಂ ಜನಿಯಿಸುಗುಂ ಎಂಬುದನ್ವಯಂ.

## ಟೀಕು.

ಅಸ್ವರಂ ನಿಲೆ, ಪರದೊಳೆಂಬುದನುವರ್ತನೆ—ಪಚ್ಚನೆ ಕೆಚ್ಚನೆ ಬೆಚ್ಚನೆಗಳ=ಪಚ್ಚನೆ ಕೆಚ್ಚನೆ ಬೆಚ್ಚನೆ ಎಂಬ ಶಬ್ದಂಗಳ; ಚಕಾರದೊಳ್=ಚಕಾರದಲ್ಲಿ; ಮತ್ವಂ=ಮಕಾರಂ; ಜನಿಯಿಸುಗುಂ=ಹುಟ್ಟುವದು; ಕೆಚ್ಚನೆಯ=ಕೆಚ್ಚನೆ ಎಂಬ ಶಬ್ದದ; ಆದಿಗೆ=ಮೊದಲ್ಗೆ; ಚತ್ವಂ=ಚಕಾರಂ ಜನಿಯಿಸುಗುಂ; ಮೇಣ್=ವಿಕಲ್ಪದಿಂದೆ; ಅನಿತಱ=ಅಷ್ಟು ಶಬ್ದಂಗಳ; ಮತ್ವಂ=ಮಕಾರಂ; ಸುಕಾರಂ=ಸುಕಾರಮಪ್ಪುದು; ಎತ್ವಕ್ಕೆ=ಆದಿಯ ಎಕಾರಕ್ಕೆ; ಇತ್ವಂ=ಇಕಾರಂ ಬರ್ಪುದು.

## ವೃತ್ತಿ.

ಪಚ್ಚನೆ ಕೆಚ್ಚನೆ ಬೆಚ್ಚನೆಯೆಂಬಿವಱ ಚಕಾರಕ್ಕೆ ಮ್ ಎಂಬುದಕ್ಕುಂ; ಕೆಚ್ಚನೆಯಾದಿಯ ಕಕಾರಕ್ಕೊರ್ಮೆ ಚಕಾರಮಕ್ಕುಂ; ಈ ಶಬ್ದಂಗಳ ಕಡೆಯ ಮಕಾರಕ್ಕೆ ಸುಕಾರಮುಮಾದಿಯ ಎತ್ತಕ್ಕಿತ್ತಮುಮಕ್ಕುಂ.

## ಪ್ರಯೋಗಂ.

ಮಕಾರಕ್ಕೆ—ಪಂದೋಲ್, ಪಂದೊವಲ್, ಪಂದಳಿರ್;

ಪಂದಳಿರ ತೋರಣಂ ತ
ಳ್ತೊಂದಿದ ಕೆಂಗಡಿಯಪುಡಿಯಮುತ್ತಿನಕೊಡೆಚೆ |
ಲ್ವಿಂದೆಸೆವ ಮಂಗಳಾನಕ[1]
ದೊಂದುರವಪ್ಪುಗೆಗೆವಂದುದಂದರಮನೆಯೊಳ್ || ಕಂದಂ ||

ಕೆಂಗಾಱ (ಕೆಂಗಱ, in M. A.), ಕೆಂಜೆಡೆ, ಕೆಂಗೊಡೆ, ಕೆಂದಳಿರ್, ಕೆಂಬಿಸಿಲ್, ಕೆಂಬಟ್ಟೆ;—ಬೆಂಗಲ್, ಬೆಂಗದಿರ್, ಬೆಂಱೊಳಂ, ಬೆಂನೀರ್.

ಎನಿತುಂ ಕಾಯ್ದುಂ ಬೆನ್ನೀರ್
ಮನೆ ಸುಡದೆಂಬಂತೆ ನಿನಗವರ್ ನಿಲೆ ಕಾಯ್ದುಂ |
ಮನದೊಳ್ಪೊಲ್ಲಮನೆಂದುಂ
ನೆನೆಯರದಂ ನಂಬು ಕುರುಕುಲಾನ್ವಯಭಾನೂ || ಕಂದಂ ||

ಚಕಾರಕ್ಕೆ—ಚೆಂಗಱಗಿಲೆ, ಚೆಂದೆಂಗು, ಚೆಂನೆಯ್ದಿಲ್, ಚೆಂಬೊನ್, ಚೆಂಬೋತಂ, ಚೆಂಗೊರಲ್, ಚೆಂದುಟಿ. [ಚೆಂಗಣ-].

ಆದಿಯಿತ್ತಂ ಬೆರಸುಸುಕಾರಕ್ಕೆ—ಕಿಸುಗಣಗಿಲೆ, ಕಿಸುಗಲ್, ಕಿಸುಗಟ್ಟು, ಕಿಸುವೊನಲ್, ಕಿಸುಸಂಜೆ;—ಬಿಸುಗದಿರ್, ಬಿಸುನೆತ್ತರ್, ಬಿಸುನೀರ್, ಬಿಸುಗಾಳಿ; ಬಿಸುನೆತ್ತರ ಧಾರೆಗೆ ಬಾಯನೊಡ್ಡಿಮೆಯ್ದೆಣದೆ.

ಪಚ್ಚನೆ ಎಂಬುದರ್ಕೆ ಆದಿಯಿತ್ತಮಿಲ್ಲಾಗಿ—ಪಸುಂಗಱ (—ಗರಿ). ಪಸುರ್ವಂದರವೆಂದಾಯ್ತು [ಪಸುರ್ವಂದರೆಂದಾಯ್ತು].

ಸ್ವರಂ ಪರಮಾಗೆ—ಪಚ್ಚೋಲೆ, ಪಚ್ಚಡಕೆ, ಪಚ್ಚೆಲೆ.

ಕೆಚ್ಚನೆ ಎಂಬುದರ್ಕೆ, ಮೇಣಱಂಬುದಱಂ—ಕೆಸಡಿ, ಕೆಸುರಿ, ಕೆಸಕ್ಕಿ.

1) There was a mistake in the metre of the 2nd line, corrected by reading ಚೆಲ್ವು. Another reading is: ಳ್ತೊಂದಿದಕೆಂಗುಡಿಯುಮುಡೆಯುಮುತ್ತಿನ ಕೊಡೆಚೆ etc.

ಸೂತ್ರಂ.

ಪದದ ಕಡೆಯಣ ಡಕಾರ
ಕ್ಕುದಯಿಪುದು ಱಕಾರವಾ ಱಕಾರಕ್ಕೊದವಿ |
ರ್ಪುದು ರೇಫಂ ವ್ಯಂಜನಪದ
ಮಿದಿರೊಳ್ಸಂದಿಸೆ ಸಮಾಸದೊಳ್ಬಹುಳತೆಯಿಂ || 183 ||

When, in (or without) compounds, ಡ is followed by a Consonant, it often becomes ಱ; under the same circumstances ಱ often becomes ೯. (cf. Ss. 18; 19; 42; 66; 187; 191).

ಪದಚ್ಛೇದಂ.

ಪದದ ಕಡೆಯಣ ಡಕಾರಕ್ಕೆ ಉದಯಿಪುದು ಱಕಾರಂ, ಆ ಱಕಾರಕ್ಕೆ ಒದವಿ ಇರ್ಪುದು ರೇಫಂ, ವ್ಯಂಜನಪದಂ ಇದಿರೊಳ್ ಸಂದಿಸೆ, ಸಮಾಸದೊಳ್ ಬಹುಳತೆಯಿಂ.

ಅನ್ವಯಂ.

ಸಮಾಸದೊಳ್ ಬಹುಳತೆಯಿಂ, ವ್ಯಂಜನಪದಂ ಇದಿರೊಳ್ ಸಂದಿಸೆ, ಪದದ ಕಡೆಯಣ ಡಕಾರಕ್ಕೆ ಱಕಾರಂ ಉದಯಿಪುದು; ಆ ಱಕಾರಕ್ಕೆ ರೇಫಂ ಒದವಿ ಇರ್ಪುದು.

ಟೀಕು.

ಸಮಾಸದೊಳ್=ಸಮಾಸದಲ್ಲಿ; ಬಹುಳತೆಯಿಂ=ಬಹುಳದಿಂದೆ ಸಮಾಸವಲ್ಲದಲ್ಲಿಯುಂ; ವ್ಯಂಜನಪದಂ=ವ್ಯಂಜನಾದಿಯ ಪದಂ; ಇದಿರೊಳ್=ಪರದಲ್ಲಿ; ಸಂದಿಸೆ=ಇದಿರಾಗೆ; ಪದದ=ಪದಂಗಳ; ಕಡೆಯಣ=ಅಂತ್ಯದ; ಡಕಾರಕ್ಕೆ=ಡತ್ವಕ್ಕೆ; ಱಕಾರಂ=ಱಱವೆಂಬ ಱಕಾರಂ; ಉದಯಿಪುದು=ಹುಟ್ಟುವದು; ಆ ಱಕಾರಕ್ಕೆ=ಆ ಪದದ ಕಡೆಯಣ ಱಕಾರಕ್ಕೆ; ರೇಫಂ=ರೇಫೆ; ಒದವಿರ್ಪುದು=ಪ್ರಾಪ್ತಿಸಿರ್ಪುದು.

ವೃತ್ತಿ.

ವ್ಯಂಜನಂ ಪರದೊಳಿರೆ, ಸಮಾಸದೊಳ್ಮೊದಲ ಪದದ ಕಡೆಯಣ ಡಕಾರಕ್ಕೆ ಱಕಾರಮಕ್ಕುಂ; ಱಕಾರಕ್ಕೆ ರೇಫೆಯಕ್ಕುಂ; ಬಹುಳದಿಂದೆ ಅಸಮಾಸದೊಳಮಂತೆ.

ಪ್ರಯೋಗಂ.

ಱಕಾರಕ್ಕೆ—ಕಾಱ್ಕಿಚ್ಚು; ಕೋಱ್ಕುಟ್ಟು; ನಾಱ್ಕಿಡಿ; ನೀಱ್ಕಲಿಸಿದಂ; ಎರಱ್ಬಿರಂ; ಎರಱ್ಮಿಱು; ಎರಱ್ಮತು.

ರೇಫಕ್ಕೆ—ಕೆಸರ್ಮಲ್ಲಿಗೆ; ನೊಸರ್ಮಯಣಂ; ಬೇಸರ್ನುಡಿ.

ಅಸಮಾಸದ ಱಕಾರಕ್ಕೆ—ನೋಱ್ಪಿಂ; ಮಾಱ್ಪಿಂ; ಬೇಱ್ಪಿಂ; ಬಿಸುಱ್ಪಿಂ; ಬೆಗಱ್ಪಿಂ.

ರೇಫೆಗೆ—ಕೆಸರ್ಮಸಗಿದುದು; ಏವರ್ಮಾಣ್ದುದು; ಎಪರ್ಮತುದು; ನೇಸರ್ಮೂಡಿದುದು.

ಸೂತ್ರಂ.

ಕಿಱಿದಕ್ಕಾದೇಶಂ ಕುಱು
ಬಿಱುವೆಂಬುದು ಬೆಟ್ಟಿತಕ್ಕೆ ಕೊಂಕಿಂಗೆ ಕುಡಂ |
ದಱಿ ರೇಫೆ ತಳ್ತ ವರ್ಣ
ಕ್ಕೆಱಿಗಿರ್ಕುಂ ದ್ವಿತ್ವವೃತ್ತಿಯಸಮಾಸದೊಳಂ || 184 ||

In Compounds ಕಿಱಿದು becomes ಕುಱು (S. 181), ಬೆಟ್ಟಿತು (S. 178) becomes ಬಿಱು, ಕೊಂಕು becomes ಕುಡು. In (and without) Compounds the Consonant before an ೯ may be doubled. (cf. Ss. 115; 228; 229; 232).

ಪದಚ್ಛೇದಂ.

ಕಿಱಿದಕ್ಕೆ ಆದೇಶಂ ಕುಱು; ಬಿಱುವೆಂಬುದು ಬೆಟ್ಟಿತಕ್ಕೆ; ಕೊಂಕಿಂಗೆ ಕುಡು ಎಂದು, ಅಱಿ! ರೇಫೆ ತಳ್ತ ವರ್ಣಕ್ಕೆ ಎಱಿಗಿ ಇರ್ಕುಂ ದ್ವಿತ್ವವೃತ್ತಿ ಅಸಮಾಸದೊಳಂ.

ಅನ್ವಯಂ.

ಕಿಱಿದಕ್ಕೆ ಕುಱು (ಎಂದು) ಆದೇಶಂ; ಬೆಟ್ಟಿತಕ್ಕೆ ಬಿಱುವೆಂಬುದು; ಕೊಂಕಿಂಗೆ ಕುಡು ಎಂದು, ಅಱಿ! ಅಸಮಾಸದೊಳಂ ರೇಫೆ ತಳ್ತ ವರ್ಣಕ್ಕೆ ದ್ವಿತ್ವವೃತ್ತಿ ಎಱಿಗಿ ಇರ್ಕುಂ.

ಟೀಕು.

ಕಿಱಿದಕ್ಕೆ=ಕಿಱಿದೆಂಬ ಶಬ್ದಕ್ಕೆ; ಕುಱು=ಕುಱು ಎಂದು; ಆದೇಶಂ=ಆದೇಶಂ ಬರ್ಪುದು; ಬೆಟ್ಟಿತಕ್ಕೆ=ಬೆಟ್ಟಿತೆಂಬ ಶಬ್ದಕ್ಕೆ; ಬಿಱು=ಬಿಱು ಎಂದು; ಎಂಬುದು=ಎಂಬಾದೇಶಂ ಬರ್ಪುದು; ಕೊಂಕಿಂಗೆ=ಕೊಂಕೆಂಬ ಶಬ್ದಕ್ಕೆ; ಕುಡು=ಕುಡು ಎಂದು; ಅಱಿ=ತಿಳಿ; ಅಸಮಾಸದೊಳಂ=ಸಮಾಸವಲ್ಲದಲ್ಲಿಯುಂ; ರೇಫೆ ತಳ್ತ ವರ್ಣಕ್ಕೆ=ರೇಫೆಗೂಡಿದಕ್ಷರಕ್ಕೆ; ದ್ವಿತ್ವವೃತ್ತಿ=ದ್ವಿತ್ವದ ವರ್ತನೆ; ಎಱಿಗಿರ್ಕುಂ=ಬರ್ಪುದು.

ವೃತ್ತಿ.

ಕಿಱಿದಕ್ಕೆ ಕುಱು ಎಂದು, ಬೆಟ್ಟಿತಕ್ಕೆ ಬಿಱು ಎಂದು, ಕೊಂಕಿಂಗೆ ಕುಡು ಎಂದು, ಆದೇಶಮಕ್ಕುಂ; ಸಮಾಸದೊಳಮಸಮಾಸದೊಳಂ ರೇಫೆಯಡರ್ದಕ್ಕರಕ್ಕೆ ದ್ವಿತ್ವಮಕ್ಕುಂ.

ಪ್ರಯೋಗಂ.

ಕುಱು, ಬಿಱು, ಕುಡು ಎಂಬವಕ್ಕೆ—ಕುಱುಗಿಡಂ, ಕುಱುದಡ್ಡಿ, ಕುಱುಗಡ್ಡಂ, ಕುಱುಗಂಟು, ಕುಱುಗಯ್; ಬಿಱುವೊಯಲ್, ಬಿಱುಬರ್ದ್ದಂ, ಬಿಱುವಡೆ, ಬಿಱುಗಾಳಿ; ಕುಡುವುರ್ಬು (ಕುಡುವೂರ್ಬು), ಕುಡುಗೋಲ್, ಕುಡುವೆಱೆ, ಕುಡುದಾಡೆ, ಕುಡುಮಿಂಚು. [ಕುಱುದಡಿ]

ದ್ವಿತ್ವಕ್ಕೆ—ನೀರ್ಗ್ಗಿಚ್ಚು; ಊರ್ಮ್ಮೇಲಿ; ನೀರ್ವ್ವಾನಿಸೆ; ಕಾರ್ಗ್ಗಾಲ್.

ಅಸಮಾಸಕ್ಕೆ—ಬೇರ್ಪಱಿದುದು (—ಪಱಿದುದು); ತೆರ್ಪಱಿದುದು; ನೀರ್ತಿಱಿದುದು.

ಸೂತ್ರಂ.

Words denoting "Battle" are formed by a sort of Relative compound (S. 165) in which one and the same word occurs twice (cf. S. 193), as the first ending in ಆ, as the second in ಇ.

ಇತರೇತರಕ್ರಿಯಾಸಂ
ಹತಮದು ತಾನಾವುದಲ್ಲಿ ಮತ್ತೆ ಬಹುವ್ರೀ |
ಹಿ ತಗುಳ್ಗುಮಾತ್ವವಿಧಿಸಂ
ಗತಮಾದಿಪದಾಂತ್ಯದಲ್ಲಿ ಚರಮಕ್ಕಿತ್ವಂ || 185 ||

ಪದಚ್ಛೇದಂ.

ಇತರೇತರಕ್ರಿಯಾಸಂಹತಂ ಅದು ತಾಂ ಆವುದು, ಅಲ್ಲಿ ಮತ್ತೆ ಬಹುವ್ರೀಹಿ ತಗುಳ್ಗುಂ; ಆತ್ವವಿಧಿಸಂಗತಂ ಆದಿಪದಾಂತ್ಯದಲ್ಲಿ, ಚರಮಕ್ಕೆ ಇತ್ವಂ.

ಅನ್ವಯಂ.

ಇತರೇತರಕ್ರಿಯಾಸಂಹತಂ ಅದು ತಾಂ ಆವುದು, ಅಲ್ಲಿ ಮತ್ತೆ ಬಹುವ್ರೀಹಿ ತಗುಳ್ಗುಂ; ಆದಿಪದಾಂತ್ಯದಲ್ಲಿ ಆತ್ವವಿಧಿ ಸಂಗತಂ, ಚರಮಕ್ಕೆ ಇತ್ವಂ.

ಟೀಕು.

ಇತರೇತರ=ಅನ್ಯೋನ್ಯವಾದ; ಕ್ರಿಯಾ=ಕ್ರಿಯೆಯಿಂದೆ; ಸಂಹತಂ=ಕಾದುವುದು; ಅದು ತಾಂ=ತಾನದು; ಆವುದು=ಆವುದುಂಟು; ಅಲ್ಲಿ=ಆ ಯುದ್ಧದಲ್ಲಿ; ಮತ್ತೆ=ಬಳಿಕಂ; ಬಹುವ್ರೀಹಿ=ಬಹುವ್ರೀಹಿಸಮಾಸಂ; ತಗುಳ್ಗುಂ=ಎಯ್ದುವುದು; ಆದಿಪದಾಂತ್ಯದಲ್ಲಿ=ಮೊದಲ ಪದದ ಕಡೆಯಲ್ಲಿ; ಆತ್ವವಿಧಿ=ಆಕಾರದ ವಿಧಿ; ಸಂಗತಂ=ಎಯ್ದಲ್ಪಡುವುದು; ಚರಮಕ್ಕೆ=ಕಡೆಯ ಪದದಂತ್ಯಕ್ಕೆ; ಇತ್ವಂ=ಇಕಾರಂ ಎಯ್ದಲ್ಪಡುವುದು.

ವೃತ್ತಿ.

ಒರೊಂದಱ ಕ್ರಿಯೆಯನೊರೊಂದು ಕೈಕೊಂಡುಮಾಡು ವೆಡೆಯೊಳ್‌ನೆಱೆವ ಣೆಗೆಯುಂ ಪಡೆವುದದುವುಂ ಮತ್ತೆ ಬಹುವ್ರೀಹಿಯಕ್ಕುಂ; ಅದಱ ಮೊದಲ ಪದದ ಕಡೆಗಾತ್ವಮುಂ ಪರ ಪದದ ಕಡೆಗಿತ್ವಮುಮಕ್ಕುಂ.

ಪ್ರಯೋಗಂ.

ಖಡ್ಗದಿಂ ಖಡ್ಗದಿಂ ಮಾಡುವ ಯುದ್ಧಮಾವುದದು—ಖಡ್ಗಾಖಡ್ಗಿ.
ಮುಷ್ಟಿಯಿಂ ಮುಷ್ಟಿಯಿಂ ಮ್ಯೊಯೊಡ್ಡಿ ಮಾಡುವ ಯುದ್ಧಮಾವುದದು—

ಮುಷ್ಟಾಮುಷ್ಟಿ. ಹೊಲ್ಲಾಹೊಲ್ಲಿ; ದಾಳಾದಾಳಿ; ದೆಖ್ಖಾದೆಖ್ಖಿ; ಹಾಣಾಹಾಣಿ [ಹಣಾಹಣಿ].—ಇಲ್ಲಿ ಘಟ್ಟಾಘಟ್ಟಿ ಎಂಬ ಯುದ್ಧಮುಂ ಮಲ್ಲಾಮಲ್ಲಿ ಎಂಬ ಯುದ್ಧಮುಂ ತತ್ಸಮಂಗಳ್ (cf. Ss. 80; 297, seq.).

ಸೂತ್ರಂ.

Relative compounds terminate either in ಅ or ಇ (S. 185). ಇಲ್ಲ (ಇಲ್ಲದ; S. 301) at the end of the first word becomes ಇಲಿ; ಕೊಲ್ (ಕೊಲ್ವಂ?) at the end of a compound becomes ಕುಲಿ (Killer).

ಅಡಸುವುದು ಬಹುವ್ರೀಹಿಯ
ಕಡೆಗತ್ವಂ ಬಹುಳಮಗ್ರಮಿಲ್ಲೆಂದಿರೆ ತಾಂ |
ಕಡೆಗಕ್ಕುಂ ಲಿತ್ವಂ ಕೊ
ಲ್ವೆಡೆಯೊಳ್ಕುಲಿಯೆಂಬುದಕ್ಕುಮಂತ್ಯಾದೇಶಂ || 186 ||

ಪದಚ್ಛೇದಂ.

ಅಡಸುವುದು ಬಹುವ್ರೀಹಿಯ ಕಡೆಗೆ ಅತ್ವಂ ಬಹುಳಂ; ಅಗ್ರಂ ಇಲ್ಲ ಎಂದು ಇರೆ, ತಾಂ ಕಡೆಗೆ ಅಕ್ಕುಂ ಲಿತ್ವಂ; ಕೊಲ್ವ ಎಡೆಯೊಳ್ ಕುಲಿ ಎಂಬುದು ಅಕ್ಕುಂ ಅಂತ್ಯಾದೇಶಂ.

ಅನ್ವಯಂ.

ಬಹುವ್ರೀಹಿಯ ಕಡೆಗೆ ಬಹುಳಂ ಅತ್ವಂ ಅಡಸುವುದು; ಅಗ್ರಂ ಇಲ್ಲ ಎಂದು ಇರೆ, ಕಡೆಗೆ ಲಿತ್ವಂ ತಾಂ ಅಕ್ಕುಂ; ಕೊಲ್ವ ಎಡೆಯೊಳ್ ಕುಲಿ ಎಂಬುದು ಅಂತ್ಯಾದೇಶಂ ಅಕ್ಕುಂ.

ಟೀಕು.

ಬಹುವ್ರೀಹಿಯ=ಬಹುವ್ರೀಹಿಯ ಸಮಾಸದ; ಕಡೆಗೆ=ಅಂತ್ಯಕ್ಕೆ; ಬಹುಳಂ=ಬಹುಳವಾಗಿ; ಅತ್ವಂ=ಅಕಾರಂ; ಅಡಸುವುದು=ಪೊರ್ದುಗೆಯಪ್ಪುದು, ಬಹುಳವೆಂಬುದರಿಂದೆ ಇಕಾರವುಂ ಬರ್ಪುದೆಂಬುದರ್ಥಂ; ಅಗ್ರಂ=ಪದಾಂತ್ಯಂ; ಇಲ್ಲೆಂದು=ಇಲ್ಲವೆಂದು; ಇರೆ=ಇರೆ; ಕಡೆಗೆ=ಅಂತ್ಯಕ್ಕೆ; ಲಿತ್ವಂ=ಲಿಕಾರಂ; ತಾಂ=ತಾಂ; ಅಕ್ಕುಂ=ಆಗುವದು; ಕೊಲ್ವೆಡೆಯೊಳ್=ಕೊಲ್ವನೆಂಬೆಡೆಯಲ್ಲಿ (ಕೊಲ್ವಂ ಎ-); ಕುಲಿಯೆಂಬುದು=ಕುಲಿ ಎಂಬುದು; ಅಂತ್ಯಾದೇಶಂ=ಕಡೆಯಣ ಪದಕ್ಕಾದೇಶಂ; ಅಕ್ಕುಂ=ಅಪ್ಪುದು.

ವೃತ್ತಿ.

ಬಹುವ್ರೀಹಿಯ ಕಡೆಯೊಳಕಾರಮುಂ ಬಹುಳದಿನಿಕಾರಮುಮಕ್ಕುಂ; ಪರದೊಳಿಲ್ಲವೆಂದಿರೆ, ಕಡೆಯಕ್ಕರಕ್ಕೆ ಲಿತ್ವಮಕ್ಕುಂ; ಪರದೊಳ್ಕೊಲ್ ಎಂದಿರೆ, ಕುಲಿ ಎಂದಾದೇಶಮಕ್ಕುಂ.

ಪ್ರಯೋಗಂ.

ಅತ್ವಕ್ಕೆ—ಅಲರ್ಗಣೆಯಂ; ಬಟ್ಟದೊಡೆಯಂ; ಕೆಸಡಿಯಂ; ಕುಡುವಿಲ್ಲಂ; ಬಲ್ದಲೆಯಂ; ಅಗಲ್ದುರದಂ.

ಕುಡುವಿಲ್ಲನೆಚ್ಚ ಕೋಲು
ನ್ನಡೆದುದಲನ್ದೊರ್ವ್ವನಿರ್ದ್ದೆಯನೊಳಬ್ಬಮುವೊ |
ಳ್ಮ್ರಡಿಯುಂಗೇಯಮುಮುರ್ಚ್ಚದ
ಕಡುಗಲ್ಲೆರ್ದ್ದೆಯರ್ದೆಯನಮ್ಬುಮೆಣೆಚ್ಚುಗುಮೇ || ಕೆಟ್ಟ ಕಂದಂ ||

ಇತ್ವಕ್ಕೆ—ಕಡುಗೆಲಸಿ; ನಿಡುಮೂಗಿ; ಚಲವಾದಿ; ಕಿತನಾಸಿ [ಕ್ರೀತನಾಸಿ?]

ಲಿಕಾರಕ್ಕೆ—ಪಲ್ಲಿಲಿವಾಯ್; ಅಗಿಲಿಲಿಗಂಧಂ; ಕೂರಿಲಿಕುಡುಗೋಲ್; ಬೆಳಗಿಲಿಗಣ್; ನಾಣಿಲಿವೆಣ್.

ಸೊಗಯಿಸುಗುಮೆ ಪಲ್ಲಿಲಿವಾ
ಯಗಿಲಿಲಿಗಂಧಂ ಸಮಂತು ಕೂರಿಲಿಕುಡುಗೋಲ್ |
ಮಿಗೆ ನಾಣಿಲಿಯೆನಿಸುವ ವಧು
ನಗೆಗೆಡಿಯ ಸಮಸ್ತಜಗತಿತಳದೊಳ್ || ಕಂದಂ ||

ಕುಲಿ ಎಂಬುದರ್ಕ್ಕೆ—ಮಿಱುಂಗುಲಿ; ಅಱುಗುಲಿ.

### ಸೂತ್ರಂ.

ದೊರೆಕೊಳ್ವುದಖಿಳ ವೈಯಾ
ಕರಣರಿನೊಂದೆಂಬುದಕೊರೆಂಬಾದೇಶಂ |
ಎರಡರ್ಕಮಿರಾದೇಶಂ
ದೊರೆಕೊಳ್ಗುಮದಲ್ಲದಂದುಕಾರಾಭಾವಂ || 187 ||

For ಒಂದು the form ಒರ್ is substituted, for ಎರಡು the form ಇರ್ (cf. S. 66; regarding ಓರ್ and ಈರ್ see S. 180); the change of ಎರಡ್ into ಎರ್ಪ್ಪತ್ etc. is taught by S. 183.

### ಪದಚ್ಛೇದಂ.

ದೊರೆಕೊಳ್ವುದು ಅಖಿಳ ವೈಯಾಕರಣರಿಂ ಒಂದು ಎಂಬುದರ್ಕೆ ಒರ್ ಎಂಬ ಆದೇಶಂ; ಎರಡರ್ಕಂ ಇರಾದೇಶಂ ದೊರೆಕೊಳ್ಗುಂ, ಅದು ಅಲ್ಲದ ಅಂದು ಉಕಾರಾಭಾವಂ.

### ಅನ್ವಯಂ.

ಅಖಿಳ ವೈಯಾಕರಣರಿಂ ಒಂದು ಎಂಬುದರ್ಕೆ ಒರ್ ಎಂಬಾದೇಶಂ ದೊರೆಕೊಳ್ವುದು; ಎರಡರ್ಕಂ ಇರಾದೇಶಂ ದೊರೆಕೊಳ್ಗುಂ, ಅದಲ್ಲದಂದು ಉಕಾರಾಭಾವಂ.

### ಟೀಕು.

ಅಖಿಳ ವೈಯಾಕರಣರಿಂ=ಸಮಸ್ತ ವ್ಯಾಕರಣಜ್ಞರಿಂದೆ; ಒಂದೆಂಬುದರ್ಕೆ=ಒಂದೆಂಬ ಶಬ್ದಕ್ಕೆ; ಒರೆಂಬಾದೇಶಂ=ಒರ್ ಎಂಬಾದೇಶಂ; ದೊರೆಕೊಳ್ವುದು=ಬರ್ಪುದು; ಎರಡರ್ಕಂ=ಎರಡೆಂಬ

ಶಬ್ದಕ್ಕೆಯುಂ; ಇರಾದೇಶಂ=ಇರ್ ಎಂಬಾದೇಶಂ; ದೊರೆಕೊಳ್ಗುಂ=ಪ್ರಾಪ್ತಿಸುವದು; ಅದಲ್ಲದಂದು=ಆ ಇರಾದೇಶಂ ಬಾರದಂದು; ಉಕಾರ=ಉಕಾರದ; ಅಭಾವಂ=ಅದರ್ಶನಂ ಪ್ರಾಪ್ತಿಸುವದು. ಉಕಾರಾಭಾವವೆಂಬುದು ಉಕಾರಂ ಪೋಗಿ, ಪೂರ್ವಸೂತ್ರದಿಂ (S. 183) ಱಱಾದೇಶಂ ಬರ್ಪುದೆಂಬುದರ್ಥಂ.

## ವೃತ್ತಿ.

ಒಂದೆಂಬುದರ್ಕೊರಾದೇಶಂ; ಎರಡೆಂಬುದರ್ಕೆ ಇರಾದೇಶಂ; ಅದಲ್ಲದಂದು ಕಾರಂ ಲೋಪಮಾಗಿ, ಱಱಂ. (ಮೇಣುಕಾರಕ್ಕೆ ಲೋಪಂ ಎಂದು ಪಾಠಾಂತರಂ).

## ಪ್ರಯೋಗಂ.

ಒರ್ನುಡಿ, ಒರ್ಪೆಸಱ್, ಒರ್ಮೊದಲ್, ಒರ್ಪಿಡಿಗೂಳ್;—ಇರ್ಬೆನೆ, ಇರ್ತೆರೆ, ಇರ್ಕಟ್ಟು, ಇರ್ತಡಿ.

ಉಕಾರಲೋಪಕ್ಕೆ—ಎರಱ್ಕುದುರೆ, ಎರಱ್ಮಾತು.

ಉಕಾರಾಭಾವಮೆಂಬುದು ಸಲಕ್ಷಣಮಾಗಿ ವ್ಯಂಜ್ಯನದಕಾರಕ್ಕೆ ಱಕಾರಾದೇಶವೆಲ್ಲಕ್ಕೆಯುಂ ಬರ್ಪುದು—ಮಾಱ್ಪುದು, ಬಿಸುಱ್ಪುದು ಎಂಬಂತೆ. [ಸಲ್ಲಕ್ಷ-]

## ಸೂತ್ರಂ.

ಮೂಱು becomes ಮೂ before Consonants, ಮುಯ್ಯ before Vowels. Before Consonants ಮೂ appears also as ಮು in which case the consonant is doubled.

ಚರಮಕ್ಕದರ್ಶನಂ ಮೂ
ಱಿರೆ ಬರೆ ಕಪವರ್ಗಮಗ್ರದೊಳ್ ದ್ವಿರ್ಭಾವಂ |
ಪಿರಿದುಂ ಹ್ರಸ್ವಂ ಮೊದಲೊಳ್
ಸ್ವರಮಿದಿರಿರೆ ಮೂಱಱಲ್ಲಿ ಮುಯ್ಯಾದೇಶಂ || 188 ||

## ಪದಚ್ಛೇದಂ.

ಚರಮಕ್ಕೆ ಅದರ್ಶನಂ, ಮೂಱು ಇರೆ; ಬರೆ ಕಪವರ್ಗಂ ಅಗ್ರದೊಳ್ ದ್ವಿರ್ಭಾವಂ; ಪಿರಿದುಂ ಹ್ರಸ್ವಂ ಮೊದಲೊಳ್; ಸ್ವರಂ ಇದಿರ್ ಇರೆ, ಮೂಱಱಲ್ಲಿ ಮುಯ್ಯಾದೇಶಂ.

## ಅನ್ವಯಂ.

ಮೂಱು ಇರೆ, ಚರಮಕ್ಕೆ ಅದರ್ಶನಂ; ಕಪವರ್ಗಂ ಅಗ್ರದೊಳ್ ಬರೆ, ದ್ವಿರ್ಭಾವಂ; ಪಿರಿದುಂ ಮೊದಲೊಳ್ ಹ್ರಸ್ವಂ; ಸ್ವರಂ ಇದಿರಿರೆ, ಮೂಱಱಲ್ಲಿ ಮುಯ್ಯಾದೇಶಂ.

## ಟೀಕು.

ಮೂಱು=ಮೂಱೆಂಬ ಶಬ್ದಂ; ಇರೆ=ಇರೆ; ಚರಮಕ್ಕೆ=ಅಂತ್ಯಕ್ಕೆ; ಅದರ್ಶನಂ=ಲೋಪವಪ್ಪುದು; ಕಪವರ್ಗಂ=ಕವರ್ಗ ಪವರ್ಗಂಗಳ್; ಅಗ್ರದೊಳ್=ಮುಂದುಗಡೆಯಲ್ಲಿ; ಬರೆ=ಬರೆ;

ದ್ವಿರ್ಭಾವಂ=ದ್ವಿತ್ವವಪ್ಪುದು; ಪಿರಿದುಂ=ವಿಶೇಷವಾಗಿ; ಮೊದಲೊಳ್=ಆದಿಯಲ್ಲಿ; ಹ್ರಸ್ವಂ=ಹ್ರಸ್ವಂ ಬರ್ಪುದು; ಸ್ವರಂ=ಸ್ವರಾಕ್ಷರಂ; ಇದಿರಿರೆ=ಮುಂದಿರೆ; ಮೂಱಱಲ್ಲಿ=ಮೂಱೆಂಬ ಸಂಖ್ಯಾವಾಚಿಯಲ್ಲಿ; ಮುಯ್ಯಾದೇಶಂ=ಮುಯ್ಯೆಂಬಾದೇಶಂ ಬರ್ಪುದು.

### ವೃತ್ತಿ.

ವ್ಯಂಜನಂ ಪರಮಾಗೆ, ಮೂಱೆಂಬುದಱ ಕಡೆಯಕ್ಕರಕ್ಕೆ ಲೋಪಂ; ಕವರ್ಗಪವರ್ಗಂಗಳ್ಪರಮಾಗೆ, ತಮಗೆ ದ್ವಿತ್ವಮುಂ ಮೊದಲ್ಗೆ ಹ್ರಸ್ವಮುಮಕ್ಕುಂ; ಸ್ವರಂ ಪರಮಾಗೆ, ಮೂಱೆಂಬುದರ್ಕೆ ಮುಯ್ಯಾದೇಶಂ.

### ಪ್ರಯೋಗಂ.

ಅಂತ್ಯಲೋಪಕ್ಕೆ—ಮೂಗೊಂಕು, ಮೂವಿಟ್ಟೆ, ಮೂವೆಳಸು, ಮೂನೂಱು, ಮೂಲೋಕ, ಮೂದಲೆ.

ಹ್ರಸ್ವದ್ವಿತ್ವಂಗಳ್ಗೆ—ಮುಕ್ಕುಪ್ಪೆ, ಮುಕ್ಕೊಡೆ, ಮುಗ್ಗುಡ್ಡೆ, ಮುಪ್ಪೊೞಲ್, ಮುಪ್ಪುರಿ, ಮುಂಮಾಱು.

ಪಿರಿದೆಂಬುದಱಿಂ ಕವರ್ಗಪವರ್ಗಮಲ್ಲದಲ್ಲಿಯುಮೀ ಲಕ್ಷಣಮಾಯ್ತು—ಮುಚ್ಚೋಟು, ಮುಚ್ಚವಡಿ, ಮುಚ್ಚೆರೆ, ಮುಚ್ಚಾಲ್. ಪಿರಿದೆಂಬುದಱಿಂ ಕಪವರ್ಗಮಿರ್ದುಂ ಕೆಲವಱೊಳೀ ಮಾರ್ಗಮಿಲ್ಲ—ಮೂಗೇಣ್, ಮೂಗಾವುದಂ, ಮೂಗಾಱು [ಮೂಗೋೞಂ M. B.], ಮೂಗಯ್; ಕಡೆಯ ಮೂಗಾಱುಂ ಬೋಳಿಸಿ ನಡುದಲೆಯೊಳ್ ಮೆಳಸನೊಡೆದು.

ಮುಯ್ಯೆಂಬುದರ್ಕೆ—ಮುಯ್ಯೆಂದಂ, ಮುಯ್ಯಡಿ; ಮುಯ್ಯೇೞ್ ಸೂೞ್ ಕ್ಷತ್ರಿಯರನರಸಿ ಕೊಂದಿಕ್ಕಿದಂ ಜಾಮದಗ್ನ್ಯಂ. (-ೞ್)

### ಸೂತ್ರಂ.

ನಾಲ್ಕು, ಐದು and ಎಂಟು loose their last syllable; ಆಱು becomes ಅಱು, ಏೞು becomes ಏೞ್.

ಅಕ್ಕುಂ ಲೋಪಂ ನಾಲ್ಕೈ
ದರ್ಕಂತ್ಯಕ್ಕಾಱಱಾದಿಯೊಳ್ ಹ್ರಸ್ವಂ ತಾ |
ನಕ್ಕುಮದೇೞಿರ್ಕ್ಕೇೞಿಂ
ದಕ್ಕುಂ ಚರಮಕ್ಕೆ ಲೋಪಮೆಣ್ಟರ್ಕ್ಕಕ್ಕುಂ || 189 ||

### ಪದಚ್ಛೇದಂ.

ಅಕ್ಕುಂ ಲೋಪಂ ನಾಲ್ಕು ಐದರ್ಕ್ಕೆ ಅಂತ್ಯಕ್ಕೆ; ಆಱಱ ಆದಿಯೊಳ್ ಹ್ರಸ್ವಂ ತಾಂ ಅಕ್ಕುಂ ಅದು; ಏೞಿರ್ಕ್ಕೆ ಏೞ್ ಎಂದು ಅಕ್ಕುಂ; ಚರಮಕ್ಕೆ ಲೋಪಂ ಎಂಟರ್ಕ್ಕೆ ಅಕ್ಕುಂ.

## ಅನ್ವಯಂ.

ನಾಲ್ಕೈದರ್ಕ್ಕೆ ಅಂತ್ಯಕ್ಕೆ ಲೋಪಂ ಅಕ್ಕುಂ; ಆಱಱ ಆದಿಯೊಳ್ ಹ್ರಸ್ವಂ ತಾಂ ಅದು ಅಕ್ಕುಂ; ಏೞರ್ಕ್ಕೆ ಏೞ್ ಎಂದು ಅಕ್ಕುಂ; ಎಂಟರ್ಕ್ಕೆ ಚರಮಕ್ಕೆ ಲೋಪಂ ಅಕ್ಕುಂ.

## ಟೀಕು.

ನಾಲ್ಕೈದರ್ಕ್ಕೆ=ನಾಲ್ಕೈದು ಎಂಬಾ ಸಂಖ್ಯಾವಾಚಿಗಳ್ಗೆ; ಅಂತ್ಯಕ್ಕೆ=ಕಡೆಯಣಕ್ಷರಕ್ಕೆ; ಲೋಪಂ=ಅದರ್ಶನಂ; ಅಕ್ಕುಂ=ಅಪ್ಪುದು; ಆಱಱ=ಆಱೆಂಬಾ ಸಂಖ್ಯಾವಾಚಿಯ; ಆದಿಯೊಳ್=ಮೊದಲಲ್ಲಿ; ಹ್ರಸ್ವಂ=ಹ್ರಸ್ವಂ; ತಾನದು=ಅದು ತಾಂ; ಅಕ್ಕುಂ=ಅಪ್ಪುದು; ಏೞರ್ಕ್ಕೆ=ಏೞೆಂಬ ಸಂಖ್ಯಾವಾಚಿಗೆ; ಏೞೆಂದು=ಏೞ್ ಎಂದು; ಅಕ್ಕುಂ=ಅಪ್ಪುದು; ಎಂಟರ್ಕ್ಕೆ=ಎಂಟೆಂಬ ಸಂಖ್ಯಾವಾಚಿಗೆ; ಚರಮಕ್ಕೆ=ಅಂತ್ಯಾಕ್ಷರಕ್ಕೆ; ಲೋಪಂ=ಅದರ್ಶನಂ; ಅಕ್ಕುಂ=ಆಗುವದು.

## ವೃತ್ತಿ.

ನಾಲ್ಕೈದೆಂಬಿವಱ ಕಡೆಯಕ್ಕರಕ್ಕೆ ಸ್ವರಂಬೆರಸುಲೋಪಮಕ್ಕುಂ; ಆಱೆಂಬುದಱ ಆದಿಗೆ ಹ್ರಸ್ವಂ; ಏೞು ಎಂಬುದರ್ಕೆ ಏೞ್ ಎಂದಾದೇಶಂ; ಎಂಟಱ ಕಡೆಗೆ ಲೋಪಂ.

## ಪ್ರಯೋಗಂ.

ನಾಲ್ಕರ್ಕೆ—ನಾಲ್ವಡಿ, ನಾಲ್ವತ್ತು, ನಾಲ್ವೆರಲ್;

ಉರಗಂ ಕೊಂಡಿಲ್ಲಿಂ ನಾ
ಲ್ವೆರಲನಿತಂ ಕಳೆದು ಕಟ್ಟೆ ವೇಗಂ ಬೇಗಂ |
ಸೆರೆವಿಡುಗೆಸುದುಗೆ ಕಡಿಗಿರ
ದರಿದಿಕ್ಕುಗೆಗಿವಿಯಕಳೆಗೆ ನಿರ್ವಿಷಮಕ್ಕುಂ || ಕಂದಂ ||

ಐದರ್ಕೆ—ಐವಡಿ, ಐಯ್ಗುಂಡುಗಂ, ಐಸಾಸಿರಂ;

ಕೀೞ್ ಪುಗಲೆನೆಯಮೆಂತುಂ
ಮೀಱ್ ಜನಂ ಪೊಕ್ಕು ಸಾಲೆಯುಂ ಸಾರ್ಚಿ ಮನಂ |
ದೇೞ್ಸಿದಪನಹಿಶಯ್ಯೆಯ
ನೇೞ್ದನೈಯ್ವಾಯ್ತುಶಂಕಮುಂ ಪೂರಿಸಿದಂ || ಕಂದಂ ||

ಆಱರ್ಕೆ—ಅಱುವಡಿ; ಅರುವತ್ತು; ಅಱುನೂಱು; ಅಱುದಿಂಗಳ್;

ಅಱುದಿಂಗಳಾಯುಮುಂಟೆನೆ
ಮಱುಗುವುದನ್ನಲ್ಲರಲ್ಲಿ ತಮ್ಮಮ್ಮನ್ನಂ |

ಪಱಿ ಪಟ್ಟು ಬರೆ ಕಲ್ತುದು
ಮಱಿಪನೆನಾರಗೆ ನರಕದುಃಖದ ತೆಱದಿಂ || ಕಂದಂ ||
(Last line deficient)

ಎಱಕರ್ಕೆ—ಎಪ್ಪತ್ತು, ಎಟ್ಕಿಡಲ್, ಎಱ್ಕೋಟೆ, ಏಳ್ಪೊರೆ;

ಪರಿಮರ್ದಿಸುವುದು ದುತ್ತೂ
ರರಸಮನಿಂಪಾಗಿ[1] ಪಿರಿದುನೆಲದೊಳ್ ಲವಣಂ |
ಬೆರಸೊರಸಿ ಕೊಂಡು ಪೂಸುಗೆ
ಕರಗುಗುಮೇೞ್ಪೊರೆಯೆನಿಪ್ಪ ಕುರುವಂ ಬೇಗಂ || ಕಂದಂ ||

ಎಂಟರ್ಕೆ—ಎಣ್ದಿಸೆ; ಎಣ್ಪತ್ತು; ಎಣ್ಬಾಸಿರಂ.

## ಸೂತ್ರಂ.

ಒಂಬತ್ತು before ಪತ್ತು becomes ತೊಂ; before ನೂಱು and ಸಾಸಿರ it becomes ಒಂಬಯ್. (For ಒಂ of ಒಂದು see S. 177).

ಪತ್ತು ಪರವಾಗಲೊಡವೊಂ
ಬತ್ತು ತೊವೆುಂದಕ್ಕುಮಗ್ರದೊಳ್ನೂಱಿರೆ ಮೇಣ್ |
ಮತ್ತಂ ಸಾಸಿರಮಿರೆ ನೆಲ
ಸಿತ್ತೊಂಬಯ್ಯೆಂದು ವಿಬುಧರಿಂದಾದೇಶಂ || 190 ||

## ಪದಚ್ಛೇದಂ.

ಪತ್ತು ಪರಂ ಆಗಲೊಡಂ ಒಂಬತ್ತು, ತೊಮ್ ಎಂದು, ಅಕ್ಕುಂ; ಅಗ್ರದೊಳ್ ನೂಱು ಇರೆ ಮೇಣ್, ಮತ್ತಂ ಸಾಸಿರಂ ಇರೆ, ನೆಲಸಿತ್ತು, ಒಂಬಯ್ ಎಂದು, ವಿಬುಧರಿಂದೆ ಆದೇಶಂ.

## ಅನ್ವಯಂ.

ಪತ್ತು ಪರಂ ಆಗಲೊಡಂ ಒಂಬತ್ತು, ತೊಮ್ ಎಂದು, ಅಕ್ಕುಂ; ಮೇಣ್ ಅಗ್ರದೊಳ್ ನೂಱು ಇರೆ, ಮತ್ತಂ ಸಾಸಿರಂ ಇರೆ, ವಿಬುಧರಿಂದೆ, ಒಂಬಯ್ ಎಂದು, ಆದೇಶಂ ನೆಲಸಿತ್ತು.

## ಟೀಕು.

ಪತ್ತು=ಪತ್ತೆಂಬ ಸಂಖ್ಯಾವಾಚಿ; ಪರಂ=ಮುಂದಣ ಪದಂ; ಆಗಲೊಡಂ=ಆಗಲೊಡನೆ; ಒಂಬತ್ತು=ಒಂಬತ್ತೆಂಬುದು; ತೊವೆುಂದು=ತೊಮ್ ಎಂದು; ಅಕ್ಕುಂ=ಆಗುವದು; ಮೇಣ್=ಅದಲ್ಲದೆ; ಅಗ್ರದೊಳ್=ಮುಂದೆ; ನೂಱು=ನೂಱೆಂಬ ಸಂಖ್ಯಾವಾಚಿ; ಇರೆ=ಇರೆ; ಮತ್ತಂ=ಅದಲ್ಲದೆ; ಸಾಸಿರಂ=ಸಾಸಿರವೆಂಬುದು; ಇರೆ=ಪರದಲ್ಲಿರೆ; ವಿಬುಧರಿಂದೆ=ವಿದ್ವಾಂಸರಿಂದೆ; ಒಂಬಯ್ಯೆಂದು=ಒಂಬಯ್ ಎಂದು; ಆದೇಶಂ=ಆದೇಶಂ; ನೆಲಸಿತ್ತು=ನೆಲೆಗೊಂಡಿತ್ತು.

## ವೃತ್ತಿ.

ಪತ್ತೆಂಬುದು ಪರವಾದೊಡೆ ಒಂಬತ್ತರ್ಕೆ ತೊಮ್ ಎಂದಾದೇಶಮಕ್ಕುಂ; ಪ

1)—ನಿಂಬಾಗಿ in W.

ರದೊಳ್ನೂಱಿರ್ದೊಡಂ ಮೇಣ್ಸಾಸಿರಮಿರ್ದೊಡಂ ಒಂಬತ್ತರ್ಕೆ ಒಂಬಯ್ ಎಂದಾದೇಶಮಕ್ಕುಂ.

ಪ್ರಯೋಗಂ.

ತೊಂಬತ್ತು; ಒಂಬಯ್ನೂಱು, ಒಂಬಯ್ಸಾಸಿರಂ; ತೊಂಬತ್ತೊಂಬಯ್ಸಾಸಿರ ಯೋಜನಮಂ ಕಿಡಿಸಿ ಸುರಗಿರಿ.

ಸೂತ್ರಂ.

ಪತ್ತು before ಸಾಸಿರ becomes ಪಯಿನ್; (before Vowels and Consonants) ನೂಱು and ಸಾಸಿರ may become ನೂಱ್ (cf. S. 183), ಸಾಸಿರ್.

ಪತ್ತರ್ಕೆ ಪಯಿಂನೆಂದಾ
ದತ್ತಾದೇಶಂ ಸಮಂತು ಸಾಸಿರಮಿದಿರೊಳ್ |
ಪತ್ತುಗೆಗೊಳೆ ನೂಱರ್ಕಂ
ಮತ್ತಂ ಸಾಸಿರಕಮಂತ್ಯಲೋಪಂ ವಿರಳಂ || 191 ||

ಪದಚ್ಛೇದಂ.

ಪತ್ತರ್ಕೆ, ಪಯಿನ್ ಎಂದು, ಆದತ್ತು ಆದೇಶಂ ಸಮಂತು, ಸಾಸಿರಂ ಇದಿರೊಳ್ ಪತ್ತುಗೆಗೊಳೆ; ನೂಱರ್ಕಂ ಮತ್ತಂ ಸಾಸಿರಕಂ ಅಂತ್ಯಲೋಪಂ ವಿರಳಂ.

ಅನ್ವಯಂ.

ಸಾಸಿರಂ ಇದಿರೊಳ್ ಪತ್ತುಗೆಗೊಳೆ, ಪತ್ತರ್ಕೆ, ಪಯಿನ್ನೆಂದು, ಸಮಂತು ಆದೇಶಂ ಆದತ್ತು; ನೂಱರ್ಕಂ ಮತ್ತಂ ಸಾಸಿರಕಂ ವಿರಳಂ ಅಂತ್ಯಲೋಪಂ.

ಟೀಕು.

ಸಾಸಿರಂ=ಸಾಸಿರವೆಂಬ ಶಬ್ದಂ; ಇದಿರೊಳ್=ಮುಂತೆ; ಪತ್ತುಗೆಗೊಳೆ=ಪೊರ್ದುಗೆಗೊಳೆ; ಪತ್ತರ್ಕೆ=ಪತ್ತೆಂಬುದರ್ಕ್ಕೆ; ಪಯಿನ್ನೆಂದು=ಪಯಿನ್ ಎಂದು; ಸಮಂತು=ಹಾಂಗೆ; ಆದೇಶಂ=ಆದೇಶಂ; ಆದತ್ತು=ಆಯಿತ್ತು; ನೂಱರ್ಕಂ=ನೂಱೆಂಬುದರ್ಕ್ಕಂ; ಮತ್ತಂ=ಬಳಿಕಂ; ಸಾಸಿರಕಂ=ಸಾಸಿರವೆಂಬುದರ್ಕ್ಕಂ, ಸ್ವರ ವ್ಯಂಜನಂಗಳಾವುವು ಪರಮಾದೊಡಂ; ವಿರಳಂ=ನೂಱು ಎಂಬುದಱ ಉಕಾರಂ ಸಾಸಿರವೆಂಬುದಱ ಅಕಾರಂ ವಿರಳವಾಗಿ; ಅಂತ್ಯಲೋಪಂ=ಅಂತ್ಯದ ಲೋಪಂ ಆಯಿತ್ತು.

ವೃತ್ತಿ.

ಸಾಸಿರಂ ಪರದೊಳಿರೆ, ಪತ್ತರ್ಕೆ, ಪಯಿನ್ನೆಂದು, ಆದೇಶಂ; ನೂಱರ್ಕಂ ಮತ್ತಂ ಸಾಸಿರಕ್ಕಂ ಕೆಱೆದೆಡೆಯೊಳ್ ಅಂತ್ಯಲೋಪಮಕ್ಕುಂ.

ಪ್ರಯೋಗಂ.

ಪತ್ತರ್ಕೆ—ಪಯಿಂಛಾಸಿರಂ.

ಅಂತ್ಯಲೋಪಕ್ಕೆ—ನೂರ್ಮಡಿ, ನೂರ್ವರ್ಾತು, ನೂರ್ಛಾಸಿರಂ; ಸಾಸಿರ್ಮಡಿ, ಸಾಸಿರ್ವರ್, ಸಾಸಿರ್ವನಿತೆಯರ್.

ಸೂತ್ರಂ.

ಪತ್ತರ್ಕೆ ಪನ್ನೆನಿಕ್ಕುಮು
ದುತ್ತರಕೊಂದೆರಡು ನೆಲಸೆ ಪದಿಯೆಂದಕ್ಕುಂ |
ಮತ್ತೊದವಿ ಮೂಱು ನಾಲ್ಕಿರೆ
ಸುತ್ತೆಂ ಸ್ವರಮಿರೆ ನಕಾರವಿಧಿ ಮುಂದೆಲ್ಲಂ || 192 ||

ಪತ್ತು before ಒಂದು and ಎರಡು becomes ಪನ್, before ಮೂಱು and ನಾಲ್ಕು it is ಪದಿ, before all other numbers with an initial Vowel (excepting ಒಂಬತ್ತು) ಪದಿನ್.

ಪದಚ್ಛೇದಂ.

ಪತ್ತರ್ಕೆ ಪನ್ ಎನಿಕ್ಕುಂ ಅದು, ಉತ್ತರಕೆ ಒಂದು ಎರಡು ನೆಲಸೆ; ಪದಿ ಎಂದು ಅಕ್ಕುಂ, ಮತ್ತೆ ಒದವಿ ಮೂಱು ನಾಲ್ಕು ಇರೆ; ಸುತ್ತೆಂ, ಸ್ವರಂ ಇರೆ, ನಕಾರವಿಧಿ ಮುಂದೆ ಎಲ್ಲಂ.

ಅನ್ವಯಂ.

ಉತ್ತರಕೆ ಒಂದು ಎರಡು ನೆಲಸೆ, ಪತ್ತರ್ಕೆ ಪನ್ ಅದು ಎನಿಕ್ಕುಂ; ಮತ್ತೆ ಮೂಱು ನಾಲ್ಕು ಒದವಿ ಇರೆ, ಪದಿ ಎಂದು, ಅಕ್ಕುಂ; ಸುತ್ತೆಂ, ಸ್ವರಂ ಮುಂದೆ ಇರೆ, ಎಲ್ಲಂ ನಕಾರವಿಧಿ.

ಟೀಕು.

ಉತ್ತರಕೆ=ಮುಂದಣ್ಗೆ; ಒಂದು=ಒಂದೆಂಬ ಶಬ್ದಂ; ಎರಡು=ಎರಡೆಂಬ ಶಬ್ದಂ; ನೆಲಸೆ=ನೆಲೆಗೊಳೆ; ಪತ್ತರ್ಕೆ=ಪತ್ತೆಂಬುದರ್ಕೆ; ಪನ್=ಪನ್ ಎಂದು; ಅದು=ಅದು; ಎನಿಕ್ಕುಂ=ಎನಿಸುವುದು; ಮತ್ತೆ=ಬಳಿಕಂ; ಮೂಱು=ಮೂಱೆಂಬ ಶಬ್ದಂ; ನಾಲ್ಕು=ನಾಲ್ಕೆಂಬ ಶಬ್ದಂ ಮುಂದಣ್ಗೆ; ಒದವಿರೆ=ಪ್ರಾಪ್ತಿಸಿರೆ; ಪದಿಯೆಂದು=ಪದಿ ಎಂದು; ಅಕ್ಕುಂ=ಅಪ್ಪುದು; ಸುತ್ತೆಂ=ಭ್ರಮೆಯೆಂ; ಸ್ವರಂ=ಸ್ವರಾದಿಸಂಖ್ಯೆಗಳ್; ಇರೆ=ಮುಂದಿರೆ; ಮುಂದೆ=ಮುಂತೆ; ಎಲ್ಲಂ=ಎಲ್ಲಂ; ನಕಾರವಿಧಿ=ಪದಿ ಎಂಬುದಱ ಮೇಲೆ ನಕಾರವಿಧಿ ಅಪ್ಪುದು.

ವೃತ್ತಿ.

ಒಂದೆಂಬುದುಮೆರಡೆಂಬುದುಂ ಪರಮಾಗೆ, ಪತ್ತರ್ಕೆ ಪನ್ ಎಂದಾದೇಶಮಕ್ಕುಂ; ಮತ್ತೆ ಮೂಱು ಮೇಣ್ ನಾಲ್ಕು ಪರಮಾಗೆ, ಪತ್ತರ್ಕೆ, ಪದಿ ಎಂದು, ಆದೇಶಂ; ಸ್ವರಪರಮಾಗೆ, ಮುಂದೆಲ್ಲಂ ನಕಾರಾಗಮಮಕ್ಕುಂ.

ಪ್ರಯೋಗಂ.

ಪನ್ ಎಂಬುದರ್ಕೆ—ಪನ್ನೊಂದು, ಪನ್ನೆರಡು.

ಪದಿ ಎಂಬುದರ್ಕೆ—ಪದಿಮೂಱು, ಪದಿನಾಲ್ಕು.

ನಕಾರಕ್ಕೆ—ಪದಿನೈದು, ಪದಿನಾಱು, ಪದಿನೇೞು, ಪದಿನೆಂಟು. ಎಲ್ಲವೆಂಬುದ ಱಿಂದೊಂಬತ್ತರ್ಕಿಲ್ಲ.

ಸೂತ್ರಂ.

A 9th class of Compounds appears in the Repetition-compounds (ವೀಪ್ಸಾಸಮಾಸಂ; cf. S. 185). In forming them of Adverbs (ಅವ್ಯಯಂ) ending in ನೆ (cf. S. 300, the repetition being done to make the meaning intensive, ಅತಿಶಯತರಾರ್ಥಂ; ವಿಶೇಷಂ, S. 194), the ನೆ of the first word is dropped so that it ends in ಅ.—Such a final ಅ originates also in Non-adverbs; and ನಡು and ಕಡೆ, for instance, receive the forms ನಟ್ಟ, ಕಟ್ಟ (cf. S. 181).

ಅತಿಶಯತರಾರ್ಥವೀಪ್ಸಾ
ನ್ವಿತನಾಂತಾವ್ಯಯಪದಕ್ಕಮನುಕೃತಿಪದಕಂ |
ಕೃತಮಂತ್ಯಲೋಪಮಿತರಾ
ಗತಮತ್ವಂ ನಡುವಿನಂತೆ ಕಡೆಗಂ ಟತ್ವಂ || 193 ||

ಪದಚ್ಛೇದಂ.

ಅತಿಶಯತರಾರ್ಥವೀಪ್ಸಾನ್ವಿತನಾಂತಾವ್ಯಯಪದಕ್ಕಂ ಅನುಕೃತಿಪದಕಂ ಕೃತಂ ಅಂತ್ಯಲೋಪಂ; ಇತರಾಗತಂ ಅತ್ವಂ, ನಡುವಿನಂತೆ ಕಡೆಗಂ ಟತ್ವಂ.

ಅನ್ವಯಂ.

ಅತಿಶಯತರಾರ್ಥವೀಪ್ಸಾನ್ವಿತನಾಂತಾವ್ಯಯಪದಕ್ಕಂ ಅನುಕೃತಿಪದಕಂ ಅಂತ್ಯಲೋಪಂ ಕೃತಂ; ಅತ್ವಂ ಇತರಾಗತಂ, ನಡುವಿನಂತೆ ಕಡೆಗಂ ಟತ್ವಂ.

ಟೀಕು.

ಅತಿಶಯತರ=ಅತ್ಯಂತಾತಿಶಯವಾದ; ಅರ್ಥ=ಅರ್ಥವನುಳ್ಳ; ವೀಪ್ಸಾ=ಇಚ್ಛೆಯೊಡನೆ; ಅನ್ವಿತ=ಕೂಡಲ್ಪಟ್ಟ; ನಾಂತ=ನಕಾರಾಂತವಾದ; ಅವ್ಯಯಪದಕ್ಕಂ=ಅವ್ಯಯಪದಂಗಳ್ಗೆಯುಂ; ಅನುಕೃತಿಪದಕಂ=ಅನುಕರಣಪದಂಗಳ್ಗೆಯುಂ; ಅಂತ್ಯಲೋಪಂ=ಕಡೆಯಣಕ್ಷರದ ಲೋಪಂ; ಕೃತಂ=ಮಾಡಲ್ಪಡುವುದು; ಅತ್ವಂ=ದ್ವಿರುಕ್ತಿಯಾದ ನಡು ಕಡೆ ಎಂಬ (ಎರಡು) ಶಬ್ದಂಗಳ ಮೊದಲ ಪದದ ಕಡೆಗೆ ಅಕಾರಂ; ಇತರ=ಅನ್ಯವಾಗಿ; ಆಗತಂ=ಬರ್ಪುದು; ನಡುವಿನಂತೆ=ನಡುವೆಂಬ ಶಬ್ದದ ಹಾಂಗೆ; ಕಡೆಗಂ=ಕಡೆಯೆಂಬ ಶಬ್ದದ ಡಕಾರಕ್ಕಂ; ಟತ್ವಂ=ಟಕಾರಂ ಬರ್ಪುದು.

ವೃತ್ತಿ.

ಅತಿಶಯತರಾರ್ಥಮಂ ನುಡಿವ ವೀಪ್ಸೆಯ ನಾಂತಂಗಳಪ್ಪವ್ಯಯಂಗಳ್ಗಂ ಅನುಕೃತಿಪದಂಗಳ್ಗಂ ಮೊದಲ ಪದದ ಕಡೆಯಕ್ಕರಕ್ಕೆ ಲೋಪಂ; ಅವ್ಯಯಮನುಕರಣಮಲ್ಲದ ಕೆಲವು ಪದಂಗಳೊಳಕಾರಮುಂ ಮುಂತೆ ಪೇೞ್ದ ನಡುವೆಂಬುದಱಂತೆ ಕಡೆಯೆಂಬುದಱ ಡಕಾರಕ್ಕೆ ಟಕಾರಮುಮಕ್ಕುಂ.

ಪ್ರಯೋಗಂ.

ಅವ್ಯಯಪದಾಂತಲೋಪಕ್ಕೆ—ಕಂಮಕಮ್ಮನೆ; ತಣ್ಣತಣ್ಣನೆ; ಮೆಲ್ಲಮೆಲ್ಲನೆ; ಸಪ್ಪಸಪ್ಪನೆ; ತೊಪ್ಪತೊಪ್ಪನೆ; ನೊಪ್ಪನೊಪ್ಪನೆ.

ಅನುಕರಣಾಂತಲೋಪಕ್ಕೆ—ತಱತಱನೆ ನೇಸಮೂಡಿದುದು; ಗೞಗೞನೆ ಕಣ್ಣೀರ್ ಸುರಿಯೆ; ಚಳಚಳನೆ ಮಿಂಚಿತ್ತು. (p. 35)

ಅತ್ವಂ ಬೆರಸುಟಕಾರಕ್ಕೆ—ನಟ್ಟನಡು; ಕಟ್ಟಕಡೆ.

ಸೂತ್ರಂ.

In the same manner ತುದಿ and ಮೊದಲ್ become ತುತ್ತ, ಮೊತ್ತ.

ತುದಿ ಮೊದಲೆಂಬ ದಕಾರ
ಕ್ಕುದಯಿಸುಗುಂ ದ್ವಿತ್ವವೃತ್ತಿಯಿಂದೆ ತಕಾರಂ |
ಮೊದಲೆಂಬ ಲಕಾರಕ್ಕ
ಪ್ಪುದದರ್ಶನವಿಧಿ ವಿಶೇಷಮಂ ನುಡಿವೆಡೆಯೊಳ್ || 194 ||

ಪದಚ್ಛೇದಂ.

ತುದಿ ಮೊದಲ್ ಎಂಬ ದಕಾರಕ್ಕೆ ಉದಯಿಸುಗುಂ ದ್ವಿತ್ವವೃತ್ತಿಯಿಂದೆ ತಕಾರಂ; ಮೊದಲ್ ಎಂಬ ಲಕಾರಕ್ಕೆ ಅಪ್ಪುದು ಅದರ್ಶನವಿಧಿ ವಿಶೇಷಮಂ ನುಡಿವ ಎಡೆಯೊಳ್.

ಅನ್ವಯಂ.

ವಿಶೇಷಮಂ ನುಡಿವೆಡೆಯೊಳ್ ತುದಿ ಮೊದಲೆಂಬ ದಕಾರಕ್ಕೆ ದ್ವಿತ್ವವೃತ್ತಿಯಿಂದೆ ತಕಾರಂ ಉದಯಿಸುಗುಂ; ಮೊದಲ್ ಎಂಬ ಲಕಾರಕ್ಕೆ ಅದರ್ಶನವಿಧಿ ಅಪ್ಪುದು.

ಟೀಕು.

ವಿಶೇಷಮಂ ನುಡಿವೆಡೆಯೊಳ್=ವಿಶೇಷವಂ ಪೇಳ್ವೆಡೆಯಲ್ಲಿ; ತುದಿ ಮೊದಲೆಂಬ ದಕಾರಕ್ಕೆ=ತುದಿ ಮೊದಲ್ ಎಂಬ ದತ್ವಕ್ಕೆ; ದ್ವಿತ್ವವೃತ್ತಿಯಿಂದೆ=ದ್ವಿರ್ಭಾವದ ವರ್ತನೆಯಿಂದೆ; ತಕಾರಂ=ತತ್ವಂ; ಉದಯಿಸುಗುಂ=ಹುಟ್ಟುವುದು; ಮೊದಲೆಂಬ ಲಕಾರಕ್ಕೆ=ಮೊದಲ್ ಎಂಬ ಶಬ್ದದ ಲತ್ವಕ್ಕೆ; ಅದರ್ಶನವಿಧಿ=ಲೋಪದ ವಿಧಿ; ಅಪ್ಪುದು=ಆಗುವುದು.

ವೃತ್ತಿ.

ವಿಶೇಷಿಸಿ ನುಡಿವೆಡೆಯೊಳ್ ತುದಿ ಮೊದಲೆಂಬಿವಱ ದಕಾರಕ್ಕೆ ದ್ವಿತ್ವಮಪ್ಪ ತಕಾರಾದೇಶಮುಂ ಮೊದಲೆಂಬುದಱ ಲಕಾರಕ್ಕೆ ಲೋಪಮುಮಕ್ಕುಂ.

ಪ್ರಯೋಗಂ.

ತುತ್ತತುದಿ; ಮೊತ್ತಮೊದಲ್.

ಸೂತ್ರಂ.

Regarding S. 193, also in pointing at a distant object (ದೂರಂ), in continuance (ಅಭೀಕ್ಷ್ಣಂ), in successive order (ವೀಪ್ಸೆ), in prominently adducing imitative sounds (ಅನುಕೃತಿ, ಅನುಕರಣಂ), in repeating an action (ಕ್ರಿಯಾಸಮಭಿಹಾರಂ, cf. S. 230), in pointing at a near object (ಸಮೀಪಂ), in agitation (fickleness, ಚಪಳಂ), Repetition of words (ಪದಯುಗಳೋಚ್ಚರಣಂ) is used.

ದೂರಾಭೀಕ್ಷ್ಣವೀಪ್ಸೋ
ದಾರಾನುಕೃತಿಕ್ರಿಯಾಸಮಭಿಹಾರಸಮೀ |
ಪೋರುತರಚಾಪಳಾದಿಗೆ
ಸಾರಂ ಬುಧರಿಂ ಪದಕ್ಕೆ ಯುಗಳೋಚ್ಚರಣಂ || 195 ||

ಪದಚ್ಛೇದಂ.

ದೂರಾಭೀಕ್ಷ್ಣವೀಪ್ಸೋದಾರಾನುಕೃತಿಕ್ರಿಯಾಸಮಭಿಹಾರಸಮೀಪೋರುತರಚಾಪಳಾದಿಗೆ ಸಾರಂ ಬುಧರಿಂ ಪದಕ್ಕೆ ಯುಗಳೋಚ್ಚರಣಂ.

ಅನ್ವಯಂ.

ಬುಧರಿಂ ಪದಕ್ಕೆ ಯುಗಳೋಚ್ಚರಣಂ ಸಾರಂ ಎಂಬುದನ್ವಯಂ.

ಟೀಕು.

ದೂರ=ದೂರಕ್ಕೆ; ಅಭೀಕ್ಷ್ಣ=ಅಭಿಮುಖವಾಗಿ ನೋಡುವದರ್ಕೆ; ವೀಪ್ಸಾ=ಇಚ್ಛೆಗೆ; ಉದಾರ=ಉದಾರವಾದ; ಅನುಕೃತಿ=ಅನುಕರಣಕ್ಕೆ; ಕ್ರಿಯಾಸಮಭಿಹಾರ=ಕ್ರಿಯೆಯನಭಿಮುಖವಾಗಿ ಮಾಡಿ ಕೊಂಬುದರ್ಕೆ; ಸಮೀಪ=ಸಮೀಪಕ್ಕೆ; ಉರುತರಚಾಪಳಾದಿಗೆ=ದೊಡ್ಡಿತ್ತಾದ ಚಪಲತ್ವಂ ಮೊದಲಾದುದರ್ಕೆ; ಬುಧರಿಂ=ವಿದ್ವಾಂಸರಿಂದೆ; ಪದಕ್ಕೆ=ಪದಂಗಳ್ಗೆ; ಯುಗಳೋಚ್ಚರಣಂ=ಎರಡು ವೇಳೆಯುಚ್ಚರಿಸುವುದು; ಸಾರಂ=ಶ್ರೇಷ್ಠವಪ್ಪುದು.

ವೃತ್ತಿ.

ದೂರದೊಳಂ ಪ್ರತಿಮುಖಾವಲೋಕನದೊಳಂ ವೀಪ್ಸೆಯೊಳಂ ಅನುಕರಣದೊಳಂ ಕ್ರಿಯೆಯನಭಿಮುಖಮಾಗಿ (ಕ್ರಿಯಾನಭಿಮುಖಮಾಗಿ) ತೆಗೆದು ಕೊಳ್ಳೆಡೆಯೊಳಂ ಸಮೀಪದೊಳಂ ಚಪಳತೆಯೊಳಂ ಪದನೆರಡು ಸೂಚ್ಚರಿಪುದು.

ಪ್ರಯೋಗಂ.

ದೂರಕ್ಕೆ—ಆತೋರ್ಪುದಾತೋರ್ಪುದೆ ಬಾನೊಳ್ ಧ್ವಜಪಟಂ.

ಅಭೀಕ್ಷ್ಣಕ್ಕೆ—

ಗಿಳಿಯೊಡನೋದಿಯೋದಿ ನುಡಿಗಲ್ತು ಮದಾಲಸರಾಜಹಂಸಮು
ಡಳಿಯೊಡನಾಡಿಯಾಡಿ ನಡೆಗಲ್ತು ಕಳಾಪಿಕಳಾಟಮುಂ ಮನಂ |
ಗೊಳೆ ನಡೆನೋಡಿನೋಡಿ ಕುಣಿಯಲ್ ನೆಱೆ ಕಲ್ತು ಕಳಾಗುಣಂ ಪೊದ
ಲ್ದಿಳವಡೆ ಬಾಲಭಾವದೊಳೆ ಭಾವಕಿಯರ್ ಬಳೆವರ್ ನಿರಂತರಂ || ಚಂಪಕಮಾಲಾವೃತ್ತಂ ||

ವೀಪ್ಸೆಗೆ—ಊರೂರೊಳ್ಕೇರಿಕೇರಿಯೊಳ್ಮನೆಮನೆಯೊಳ್.

ಅನುಕರಣಕ್ಕೆ—ಫುಲ್ಫುಲ್ಲೆನೆ; ಭೋಭೋರೆನೆ.

ಕ್ರಿಯಾಸಮಭಿಹಾರಕ್ಕೆ—[ನಡೆನಡೆಯೆಂದು ನಡೆದರ್]; ಇದಿರ್ಚಿದಿರ್ಚು.

ಸಮೀಪಕ್ಕೆ—ಇದೆಯಿದೆ ಸಾರ್ಕೆಸಾರ್ಕೆ ಗಣಕಾವಳಿ ಪೇಟ್ದ ಮುಹೂರ್ತಂ.

ಚಪಳತೆಗೆ—ಒಪ್ಪಿಸೊಪ್ಪಿಸು; ಅಣ್ಣಣ್ಣ—

ಇವರ್ಕೆಲ್ಲಂ ತ್ರಿಪ್ರಯೋಗವೊಳವು—

ಬೆಳೆಗೆಯ್ಗಳೊಳಿರ್ದ್ದೆತ್ತೆಂ (ಬಳೆ—)
ಕಳರವದಿಂ ಕಯ್ಯನೆತ್ತಿಹಯಲತ್ತೆನುತುಂ |
ಬಳೆಗಳ್ ಫುಲ್ಫುಲ್ಫುಲ್ಲೆನೆ
ಗಿಳಿಸೋವಾಕೆಗಳನೊಪ್ಪುಗುಂ ಕೆಲವೆಡೆಯೊಳ್ || ಕಂದಂ || (—ಕೆಳಗೆ—)

ಒಡ್ಡೊಡ್ಡೊಡ್ಡೆನುತೊಡ್ಡಿ ಮೇಳದವಳ್ಕುಂಕುಮವಾರಿ ಕುಪ್ಪಳಿಸಿ ಪೊಯ್ದಳ್.

ಸೂತ್ರಂ.

The Author says that he has done his best to elucidate the Compounds as they occur in the works of poets (cf. Preface, 5).

ಕವಿಮಾರ್ಗಗತಸಮಾಸಮ
ನವನೆನ್ನಱಿವನಿತನೆಯ್ದೆ ಪೇೞ್ದಂ ಲೋಕ |
ವ್ಯವಹಾರದಿಂದಮಿನ್ನುೞಿ
ದುವನಱಿವುದು ಶಬ್ದಪಾರಮಾರ್ಗಮಶಕ್ಯಂ || 196 ||

ಟೀಕು.

ಕವಿ=ಕವಿಗಳ; ಮಾರ್ಗ=ಮಾರ್ಗದಲ್ಲಿ; ಗತ=ಎಯ್ದಲ್ಪಟ್ಟ; ಸಮಾಸಮಂ=ಸಮಾಸಪದವಂ; ಅವಂ=ಅವಂ; ಎನ್ನಱಿವನಿತಂ=ಎನಗೆ ತಿಳಿವಷ್ಟಂ; ಎಯ್ದೆ=ಚನ್ನಾಗಿ; ಪೇೞ್ದಂ=ಹೇಳ್ದಂ; ಲೋಕವ್ಯವಹಾರದಿಂದಂ=ವೈಯಾಕರಣಲೋಕವ್ಯವಹಾರದಿಂದೆ; ಇನ್ನುೞಿದುವಂ=ಇನ್ನುಳಿದ ಸಮಾಸಂಗಳಂ; ಅಱಿವುದು=ತಿಳಿವುದು; ಶಬ್ದ=ಶಬ್ದಂಗಳ; ಪಾರಮಾರ್ಗಂ=ಕಡೆಯನೆಯ್ದುವುದು; ಅಶಕ್ಯಂ=ಶಕ್ಯಮಲ್ತು.

ಗದ್ಯಂ.

ಇದು ಸಮಸ್ತಶಾಬ್ದಿಕಜನಮನೋಜನಿತಶಬ್ದಸಂದೇಹಶಲ್ಯಚಾರುಚುಂಬಕಾಯಮಾನಾನೂನಕರ್ನಾಟಕಲಕ್ಷಣಶಿಕ್ಷಾಚಾರ್ಯಸುಕವಿಕೇಶಿರಾಜವಿರಚಿತಮಪ್ಪ ಶಬ್ದಮಣಿದರ್ಪಣದೊಳ್ ಸಮಾಸಭೇದವಿವರಣಮೆಂಬ ತೃತೀಯಸಂಧಿ ಸಂಪೂರ್ಣಂ.

೩ನೆಯ ಅಧ್ಯಾಯಂ ಸಮಾಪ್ತಂ.

# ೪ನೆಯ ಅಧ್ಯಾಯಂ. IV. CHAPTER.

## ತದ್ಧಿತಪ್ರಕರಣಂ.

ON SECONDARY NOMINAL THEMES (see S. 72).

### ಸೂತ್ರಂ.

ಪರಿನಿರ್ಮಿಪ ಮಾಱುವ
ದೊರೆವಡೆದ ನಿಯೋಗದನೃತದಱಿತದ ಋಣದಾ |
ಚರಣದ ಶಿಲ್ಪದ ಮೂಲದ
ನರನಂ ಪೇೞ್ವಲ್ಲಿ ಮಾೞ್ಕಿಗಪ್ರತ್ಯಯಮಂ || 197 ||

By the Affix (ಪ್ರತ್ಯಯಂ) ಇಗ Nouns are formed denoting makers, changers (dealers), persons in employment, persons of untruth, of knowledge, of debt, of religious observances and of manual workmanship, and originators.

### ಪದಚ್ಛೇದಂ.

ಪರಿನಿರ್ಮಿಪ ಮಾಱುವ ದೊರೆವಡೆದ ನಿಯೋಗದ ಅನೃತದ ಅಱಿತದ ಋಣದ ಆಚರಣದ ಶಿಲ್ಪದ ಮೂಲದ ನರನಂ ಪೇೞ್ವಲ್ಲಿ ಮಾೞ್ಕೆ ಇಗಪ್ರತ್ಯಯಮಂ.

### ಅನ್ವಯಂ.

ಇಗಪ್ರತ್ಯಯಮಂ ಮಾೞ್ಕೆ ಎಂಬುದನ್ವಯಂ.

### ಟೀಕು.

ಪರಿನಿರ್ಮಿಪ=ಆವುದನಾದೊಡಂ ಮಾಡುವ; ಮಾಱುವ=ಆವುದನಾದೊಡಂ ಮಾಱಿಯಾಡುವ; ದೊರೆವಡೆದ ನಿಯೋಗದ=ಪ್ರಸಿದ್ಧಿವಡೆದ ನಿಯೋಗದ; ಅನೃತದ= ಸಟೆಯ; ಅಱಿತದ=ತಿಳಿವಳಿಕೆಯ; ಋಣದ=ಸಾಲದ; ಆಚರಣದ=ಆಚರಣೆಯ; ಶಿಲ್ಪದ=ಶಿಲ್ಪದ ಕೆಲಸದ; ಮೂಲದ=ಮೂಲದ; ನರನಂ=ಮನುಷ್ಯನಂ; ಪೇೞ್ವಲ್ಲಿ=ಪೇಳ್ವೆಡೆಯಲ್ಲಿ; ಇಗಪ್ರತ್ಯಯಮಂ=ಇಗ ಎಂಬ ಪ್ರತ್ಯಯಮಂ; ಮಾೞ್ಕೆ=ಮಾಡುಗೆ.

### ವೃತ್ತಿ.

ಮಾಡುವನೊಳಂ ಮಾಱುವನೊಳಂ ನಿಯೋಗಿಯೊಳಂ ಅನೃತದಲ್ಲಿಯುಂ ಅಱಿತದಲ್ಲಿಯುಂ ಋಣಿಯೊಳಂ ವರ್ತಕನೊಳಂ (ಆಚರಣದಲ್ಲಿಯುಂ) ಶಿಲ್ಪಕನಲ್ಲಿಯುಂ ಮೂಲದಲ್ಲಿಯುಂ ಇಗಪ್ರತ್ಯಯಮಕ್ಕುಂ.

ಪ್ರಯೋಗಂ.

ಮಾಡುವಂಗೆ—ಕಬ್ಬಿಗಂ; ಸರವಂದಿಗಂ; ಸಿಂಗರಿಗಂ; ತೋಂಟಿಗಂ.
ಮಾಱುವಂಗೆ—ಗಂದಿಗಂ; ದೂಸಿಗಂ; ತಂಬುಲಿಗಂ.

ಗಂದಿಗನೆರವಣಿಗಂ ಸರ
ವಂದಿಗನಾ ಪಟ್ಟಸಾಲಿಗಂ ಬಾನೊಸಿಗಂ |
ಮಾಂದರಿಗಂ ಜೋಯಿಸಿಗಂ
ಸಂದಿರಿಕೆಯ ಕಬ್ಬಿಗಂ ಸಮಂಜಪನೊಳನೇ || ಕಂದಂ ||

ನಿಯೋಗಕ್ಕೆ—ಅಡಪಿಗಂ (ಅಡವಿಗಂ); ಚಾಮರಿಗಂ; ಕರಹಟ್ಟಿಗಂ [ಕರಹಟಿಗಂ].
ಅನ್ವರ್ತಕ್ಕೆ—ಅಟಮಟಿಗಂ; ಮಾಳಿಗಂ; ಪುಸಿಗಂ.
ಅಱಿತಕ್ಕೆ—ಜೋಯಿಸಿಗಂ; ಲೆಕ್ಕಿಗಂ; ಪೊಲಂಬಿಗಂ.
ಋಣಕ್ಕೆ—ಸಾಲಿಗಂ; ಹಂಗಿಗಂ.
ಆಚರಣಕ್ಕೆ—ದೇಗುಲಿಗಂ; ಅಕ್ಕರಿಗಂ; ಛಾಂದಸಿಗಂ (ಛಂದಸಿಗಂ).
ಶಿಲ್ಪಕ್ಕೆ—ಚಿಪ್ಪಿಗಂ (s. S. 263).
ಮೂಲಕ್ಕೆ—ಮೂಲಿಗಂ.

ಸೂತ್ರಂ.

ನಡೆಯಿಸುವನೀತನಿದನೆಂ
ಬೆಡೆಯೊಳ್ವಳವಳ್ಳಮಕ್ಕುಮಾಯ್ತುಮುಮಕ್ಕುಂ |
ವಡಿಗಪ್ರತ್ಯಯಮಕ್ಕುಂ
ಬಿಡದಿಕ್ಕುವನೀತನಿದನೆನಿಪ್ಪೊಂದೆಡೆಯೊಳ್ || 198 ||

By the Affixes ವಳ, ವಳ್ಳ and ಆಯ್ತು Nouns are formed denoting people in their employment; by ವಡಿಗ Nouns denoting people who put (for sale).

ಪದಚ್ಛೇದಂ.

ನಡೆಯಿಸುವಂ ಈತಂ ಇದಂ ಎಂಬ ಎಡೆಯೊಳ್ ವಳವಳ್ಳಂ ಅಕ್ಕುಂ, ಆಯ್ತುಮುಂ ಅಕ್ಕುಂ; ವಡಿಗಪ್ರತ್ಯಯಂ ಅಕ್ಕುಂ ಬಿಡದೆ ಇಕ್ಕುವಂ ಈತಂ ಇದಂ ಎನಿಪ್ಪ ಒಂದು ಎಡೆಯೊಳ್.

ಅನ್ವಯಂ.

ಈತಂ ಇದಂ ನಡೆಯಿಸುವಂ ಎಂಬೆಡೆಯೊಳ್ ವಳವಳ್ಳಂ ಅಕ್ಕುಂ, ಆಯ್ತುಮುಂ ಅಕ್ಕುಂ; ಈತಂ ಇದಂ ಬಿಡದೆ ಇಕ್ಕುವಂ ಎನಿಪ್ಪೊಂದೆಡೆಯೊಳ್ ವಡಿಗಪ್ರತ್ಯಯಂ ಅಕ್ಕುಂ.

ಟೀಕು.

ಈತಂ=ಇವಂ; ಇದಂ=ಈ ಪ್ರಯೋಜನವಂ; ನಡೆಯಿಸುವಂ=ನಡೆಯಿಸುವಾತಂ; ಎಂಬೆಡೆಯೊಳ್=ಎಂಬ ತಾವಿನಲ್ಲಿ; ವಳವಳ್ಳಂ=ವಳಪ್ರತ್ಯಯ ವಳ್ಳಪ್ರತ್ಯಯಂಗಳ್; ಅಕ್ಕುಂ=ಅಪ್ಪುವು; ಆ

ಯ್ತ ಮುಂ=ಆಯ್ತ ಪ್ರತ್ಯಯಮುಂ; ಅಕ್ಕುಂ=ಅಪ್ಪುದು; ಈತಂ=ಇವಂ; ಇದಂ=ಇದಂ; ಬಿಡದಿಕ್ಕುವಂ=ಬಿಡದೆ ಇಕ್ಕುವಂ; ಎನಿಪ್ಪ=ಎನಿಸುವ; ಒಂದೆಡೆಯೊಳ್=ಒಂದು ತಾವಿನಲ್ಲಿ; ವಡಿಗಪ್ರತ್ಯಯಂ=ವಡಿಗ ಎಂಬ ಪ್ರತ್ಯಯಂ; ಅಕ್ಕುಂ=ಅಪ್ಪುದು.

ವೃತ್ತಿ.

ಈ ನಿಯೋಗಮನೀತಂ ನಡೆಯಿಸುವನೆಂಬಲ್ಲಿ ವಳ ವಳ್ಳಂ ಆಯ್ತ ಪ್ರತ್ಯಯಂಗಳಕ್ಕುಂ; ಇದನಿವನಿಕ್ಕುವನೆಂಬೆಡೆಯೊಳ್ ವಡಿಗಪ್ರತ್ಯಯಮಕ್ಕುಂ.

ಪ್ರಯೋಗಂ.

ವಳಕ್ಕೆ—ಅಡಪವಳಂ; ಮಾಸವಳಂ; ಮಡಿವಳಂ; ಪಡೆವಳಂ; ಸೆಜ್ಜೆವಳಂ; ಅಡುವಳಂ.

ವಳ್ಳಕ್ಕೆ—ಅಡಪವಳ್ಳಂ; ಮಾಸವಳ್ಳಂ; ಮಡಿವಳ್ಳಂ; ಪಡೆವಳ್ಳಂ; ಸೆಜ್ಜೆವಳ್ಳಂ; ಅಡುವಳ್ಳಂ.

ಆಯ್ತಕ್ಕೆ—ಝಳಂಬಾಯ್ತರ್; ಸೂಱಾಯ್ತರ್; ಕಲ್ಲಾಯ್ತರ್; ಕಡಂಗಾಯ್ತರ್; ಅಚ್ಚುಳಾಯ್ತರ್.

ಮಡಿವಳ್ಳಮಡಪವಳ್ಳಂ
ಪಡೆವಳ್ಳಂ ಸೆಜ್ಜೆವಳ್ಳನಜ್ಜಪ್ಪುಜ್ಜಮ್ |
ಅಡುವಳನೆಂದಿಂತಿವರಂ
ಕಡಂಗಿ ಬಿಡೆ ಜಡಿಯದಿರ್ಕೆನಯವಱಿವರಸಂ || ಕಂದಂ || (–ವಶೆ)

ಆಯ್ತಬ್ಧಿಯೆ ಘೂರ್ಣಿಸುವಂ
ತಾಯ್ತರಮನೆಯೊಳಗೆ ಪುಗುವ ಪೊಱಮಡುವ ಝಳಂ |
ಬಾಯ್ತರ ಸೂಱಾಯ್ತರ ಕ
ಲ್ಲಾಯ್ತರ ಕಡಂಗಾಯ್ತರಚ್ಚುಳಾಯ್ತರ ರಭಸಂ || ಕಂದಂ ||

ವಡಿಗಕ್ಕೆ—ಕುಂಚವಡಿಗಂ; ಪುಲ್ಲವಡಿಗಂ.

ಸೂತ್ರಂ.

By the Affix ಕಾಱ Nouns are formed denoting people who observe a certain conduct; by ಗಾಱ Nouns denoting people who fabricate. After ಕಂಮ and ಕುಂಬ the ಗಾ of ಗಾಱ disappears.

ಇವಱೊಳ್ ವ್ಯವಹರಿಪಂ ಮಾ
ಡುವನಿವನೆಂಬಲ್ಲಿ ಕಾಱ ಗಾಱಂಗಳ್ಸಂ |
ಭವಿಕುಂ ಗಾಱಾದಿಗೆ ಲೋ
ಪವಾದಿಯೊಳ್ ಕಂಮಕುಂಬಜುಗವೊದವಲೊಡಂ || 199 ||

### ಪದಚ್ಛೇದಂ.

ಇವಱೊಳ್ ವ್ಯವಹರಿಪಂ ಮಾಡುವಂ ಇವಂ ಎಂಬಲ್ಲಿ ಕಾಱಿ ಗಾಱಿಂಗಳ್ ಸಂಭವಿಕುಂ; ಗಾಱಾದಿಗೆ ಲೋಪಂ, ಆದಿಯೊಳ್ ಕಂಮಕುಂಬಜುಗಂ ಒದವಲೊಡಂ.

### ಅನ್ವಯಂ.

ಇವಱೊಳ್ ವ್ಯವಹರಿಪಂ ಇವಂ ಮಾಡುವಂ ಎಂಬಲ್ಲಿ ಕಾಱಿ ಗಾಱಿಂಗಳ್ ಸಂಭವಿಕುಂ; ಆದಿಯೊಳ್ ಕಂಮಕುಂಬಯುಗಂ ಒದವಲೊಡಂ ಗಾಱಾದಿಗೆ ಲೋಪಂ.

### ಟೀಕು.

ಇವಱೊಳ್=ಇವಱಲ್ಲಿ; ವ್ಯವಹರಿಪಂ=ವ್ಯವಹರಿಸುವಂ; ಇವಂ=ಈ ಕೆಲಸಂಗಳಂ; ಮಾಡುವಂ=ಮಾೞ್ಪಂ; ಎಂಬಲ್ಲಿ=ಎಂಬ ತಾವಿನಲ್ಲಿ; ಕಾಱಿ ಗಾಱಿಂಗಳ್=ಕಾಱಿಪ್ರತ್ಯಯ ಗಾಱಿಪ್ರತ್ಯಯಂಗಳ್; ಸಂಭವಿಕುಂ=ಹುಟ್ಟುವುವು; ಆದಿಯೊಳ್=ಮೊದಲಲ್ಲಿ; ಕಂಮಕುಂಬಜುಗಂ=ಕಂಮಕುಂಬವೆಂಬೆರಡು ಶಬ್ದಂಗಳ್; ಒದವಲೊಡಂ=ಪ್ರಾಪ್ತಿಸಲೊಡನೆ; ಗಾಱಾದಿಗೆ=ಗಾಱಿ ಎಂಬ ಪ್ರತ್ಯಯದ ಮೊದಲಕ್ಷರಕ್ಕೆ; ಲೋಪಂ=ಅದರ್ಶನಂ ಬರ್ಪುದು.

### ವೃತ್ತಿ.

ಇವಱೊಳಿವಂ ವ್ಯವಹರಿಪನೆಂಬಲ್ಲಿ ಕಾಱಪ್ರತ್ಯಯಮಕ್ಕುಂ; ಇದನೀತಂ ಮಾಡುವನೆಂಬಲ್ಲಿ ಗಾಱಪ್ರತ್ಯಯಮಕ್ಕುಂ; ಕಂಮಕುಂಬಶಬ್ದಂಗಳ್ಪೆಱಗಿರೆ, ಗಾಱಪ್ರತ್ಯಯದ ಗಕಾರಕ್ಕೆ ಲೋಪಮಕ್ಕುಂ.

### ಪ್ರಯೋಗಂ.

ಕಾಱಕ್ಕೆ—ನಡೆವಳಿಕಾಱಂ [ನಡು-] (ನುಡಿವಳಿಕಾಱಂ); ಇಚ್ಚೆಕಾಱಂ; ಕೈದುಕಾಱಂ; ಬಂದಿಕಾಱಂ; ಗೆಱೆಕಾಱಂ [ಗಳೆಕಾಱಂ]; ಬೇಹುಕಾಱಂ; ನಗೆವಡಿಕಾಱಂ; ಗಿಱಂಬಗೆಕಾಱಂ; ಪಾೞಿಕಾಱಂ; ಒರ್ನುಡಿಕಾಱಂ; ಪಗೆಕಾಱಂ; ಬಗೆಕಾರಂ.

ಗಾಱಕ್ಕೆ—ಮಾಲೆಗಾಱಂ; ಕಂಚಗಾಱಂ (s. S. 200); ಬಳೆಗಾಱಂ; ಗೆಜ್ಜೆಗಾಱಂ; ಮಣಿಗಾಱಂ; ಒಱೆಗಾಱಂ.

ಅಣಿಯರಮೆಸೆದೊಪ್ಪಿರ್ಪುವು
ಮಣಿಗಾಱರ ಕಂಚಗಾಱರೊಱೆಗಾಱರ ತಿಂ |
ತಿಣಿಯೆನಿಪ ಮಾಲೆಗಾಱರ
ಗಣನಾತೀತಂಗಳಾಪಣಂಗಳೆ ಪೊೞಲೊಳ್ || ಕಂದಂ ||

ಗಕಾರಲೋಪಕ್ಕೆ—ಕಂಮಱಂ; ಕುಂಬಱಂ.

## ಸೂತ್ರಂ.

ಪರದೊಳ್ಗಾಱಿಪ್ರತ್ಯಯ
ಮಿರೆ ಸಲ್ಗುಂ ಬಿಂದು ಮೇಣಕಾರಮುದಂತ |
ಕ್ಕೊರೆವರಿಚಪ್ರತ್ಯಯಮಂ
ಪಿರಿದುಂ ತದ್ಭವನೊಳುಪಧೆಗಕ್ಕುಂ ಹ್ರಸ್ವಂ || 200 ||

When a word with final ಉ precedes ಗಾಱಿ, the ಉ may receive the Bindu (cf. S. 172) or be elided. — The Affix ಇಚ is used to denote persons born of; the penultimate of the word to which it is added, may be shortened.

## ಪದಚ್ಛೇದಂ.

ಪರದೊಳ್ ಗಾಱಿಪ್ರತ್ಯಯಂ ಇರೆ, ಸಲ್ಗುಂ ಬಿಂದು, ಮೇಣ್ ಅಕಾರಂ ಉದಂತಕ್ಕೆ. ಒರೆವರ್ ಇಚಪ್ರತ್ಯಯಮಂ ಪಿರಿದುಂ ತದ್ಭವನೊಳ್; ಉಪಧೆಗೆ ಅಕ್ಕುಂ ಹ್ರಸ್ವಂ.

## ಅನ್ವಯಂ.

ಪರದೊಳ್ ಗಾಱಿಪ್ರತ್ಯಯಂ ಇರೆ, ಉದಂತಕ್ಕೆ ಬಿಂದು ಸಲ್ಗುಂ, ಮೇಣ್ ಅಕಾರಂ. ಪಿರಿದುಂ ತದ್ಭವನೊಳ್ ಇಚಪ್ರತ್ಯಯಮಂ ಒರೆವರ್; ಉಪಧೆಗೆ ಹ್ರಸ್ವಂ ಅಕ್ಕುಂ.

## ಟೀಕು.

ಪರದೊಳ್=ಮುಂದೆ; ಗಾಱಿಪ್ರತ್ಯಯಂ=ಗಾಱಿಪ್ರತ್ಯಯಂ; ಇರೆ=ಇರೆ; ಉದಂತಕ್ಕೆ=ಉಕಾರಾಂತಕ್ಕೆ; ಬಿಂದು=ಸೊನ್ನೆ; ಸಲ್ಗುಂ=ಸಲ್ವುದು; ಮೇಣ್=ಅದಲ್ಲದೆ; ಅಕಾರಂ=ಅತ್ವಂ ಸಲ್ವುದು; ತದ್ಭವನೊಳ್=ಅದಱಿಂದೊಳ್ಪುಟ್ಟಿದವನಲ್ಲಿ; ಇಚಪ್ರತ್ಯಯಮಂ=ಇಚ ಎಂಬ ಪ್ರತ್ಯಯಮಂ; ಒರೆವರ್=ಪೇಳ್ವರ್; ಪಿರಿದುಂ=ವಿಶೇಷವಾಗಿ; ಉಪಧೆಗೆ=ಅಂತ್ಯದ ಮೊದಲ್ಗೆ; ಹ್ರಸ್ವಂ=ಹ್ರಸ್ವಂ; ಅಕ್ಕುಂ=ಅಪ್ಪುದು.

## ವೃತ್ತಿ.

ಗಾಱಿಪ್ರತ್ಯಯಂ ಪರದೊಳಿರೆ, ಪೂರ್ವದುದಂತಕ್ಕೆ ಬಿಂದುವುಂ ಅಕಾರಮುಮಕ್ಕುಂ. ಅದಱಿಂದೊಳವಂ ಪುಟ್ಟಿದನೆಂಬಲ್ಲಿ ಇಚಪ್ರತ್ಯಯಮಕ್ಕುಂ; ಕೆಲವೆಡೆಯೊಳುಪಧೆಗೆ ಹ್ರಸ್ವಮಕ್ಕುಂ.

## ಪ್ರಯೋಗಂ.

ಬಿಂದುಗೆ—ಪಾಡುಂಗಾಱಿಂ; ಅಲಸುಂಗಾಱಿಂ; ಓದುಂಗಾಱಿಂ; ಜೂದುಂಗಾಱಿಂ.
ಅತ್ವಕ್ಕೆ—ಕಂಚಗಾಱಿಂ.
ಇಚಪ್ರತ್ಯಯಕ್ಕೆ—ಅಲರಿಚಂ; ಪೊಱಲಿಚಂ.
ಕೆಲವೆಡೆಯೊಳುಪಧೆಗೆ ಹ್ರಸ್ವಂ—(ಕಾಲೂರು+ಇಚಂ) ಕಾಲುರಿಚಂ.

### ಸೂತ್ರಂ.

By the Affixes ಕುಟಿಗ and ಗ people are introduced who are occupied in; by ಉಳಿಗ beings who live on.

ಘನಮಾಗಿ ವರ್ತಿಸುವನೀ
ತನಿವಱೊಳೆಂಬಲ್ಲಿ ಕುಟಿಗ-ಗಪ್ರತ್ಯಯಮುಂ |
ಟೆನಿಸುಗುಮುಳಿಗಪ್ರತ್ಯಯ
ಮನುಕೂಲಂ ಬಾೞ್ವನಿದಱೊಳಿವನೆಂಬೆಡೆಯೊಳ್ || 201 ||

### ಪದಚ್ಛೇದಂ.

ಘನಂ ಆಗಿ ವರ್ತಿಸುವಂ ಈತಂ ಇವಱೊಳ್ ಎಂಬಲ್ಲಿ ಕುಟಿಗ-ಗಪ್ರತ್ಯಯಂ ಉಂಟು ಎನಿಸುಗುಂ; ಉಳಿಗಪ್ರತ್ಯಯಂ ಅನುಕೂಲಂ ಬಾೞ್ವಂ ಇದಱೊಳ್ ಇವಂ ಎಂಬ ಎಡೆಯೊಳ್.

### ಅನ್ವಯಂ.

ಈತಂ ಇವಱೊಳ್ ಘನಂ ಆಗಿ ವರ್ತಿಸುವಂ ಎಂಬಲ್ಲಿ ಕುಟಿಗಗಪ್ರತ್ಯಯಂ ಉಂಟು ಎನಿಸುಗುಂ; ಇವಂ ಇದಱೊಳ್ ಅನುಕೂಲಂ ಬಾೞ್ವಂ ಎಂಬೆಡೆಯೊಳ್ ಉಳಿಗಪ್ರತ್ಯಯಂ.

### ಟೀಕು.

ಈತಂ=ಇವಂ; ಇವಱೊಳ್=ಇವಱಿಲ್ಲಿ; ಘನಮಾಗಿ=ವೆಗ್ಗಳವಾಗಿ; ವರ್ತಿಸುವಂ=ಪ್ರವರ್ತಿಸುವಂ; ಎಂಬಲ್ಲಿ=ಎಂಬರ್ಥದಲ್ಲಿ; ಕುಟಿಗಗಪ್ರತ್ಯಯಂ=ಕುಟಿಗಪ್ರತ್ಯಯ ಗಪ್ರತ್ಯಯಂಗಳ್; ಉಂಟೆನಿಸುಗುಂ=ಉಂಟಾಗುವವು; ಇವಂ=ಈತಂ; ಇದಱೊಳ್=ಇದಱಿಲ್ಲಿ; ಅನುಕೂಲಂ=ಅನುಕೂಲವಾಗಿ; ಬಾೞ್ವಂ=ಬರ್ದುಂಕುವಂ; ಎಂಬೆಡೆಯೊಳ್=ಎಂಬ ತಾವಿನಲ್ಲಿ; ಉಳಿಗಪ್ರತ್ಯಯಂ=ಉಳಿಗ ಎಂಬ ಪ್ರತ್ಯಯಂ ಉಂಟೆನಿಸುವುದು.

### ವೃತ್ತಿ.

ಇವನಿದಱೊಳ್ ಪಿರಿದು ವರ್ತಿಸುವನೆಂಬಲ್ಲಿ ಕುಟಿಗಗಪ್ರತ್ಯಯಮಕ್ಕುಂ; ಇದಱೊಳಿವಂ ಬಾೞ್ವನೆಂಬಲ್ಲಿ ಉಳಿಗಪ್ರತ್ಯಯಮಕ್ಕುಂ.

### ಪ್ರಯೋಗಂ.

ಕುಟಿಗಪ್ರತ್ಯಯಕ್ಕೆ—ಕಲ್ಕುಟಿಗಂ; ನೀರ್ಕುಟಿಗಂ; ಮರಕುಟಿಗಂ; ಕೞ್ತೆಕುಟಿಗಂ.

ಗಪ್ರತ್ಯಯಕ್ಕೆ—ಮಾತುಗಂ; ಬೂತುಗಂ [ಬತುಗಂ]; ಕಂತೆಗಂ; ಬೊಂತೆಗಂ; ಬಿದಿಗಂ; ಸಟೆಗಂ; ನವಸಿಗಂ; ಎಡಗಂ.

ಉಳಿಗಪ್ರತ್ಯಯಕ್ಕೆ—ದೇವುಳಿಗಂ; ಮರ್ಣುಳಿಗಂ, ಮಣ್ಣೊಳ್ಜೀವಿಸುವ ಪಾವು ಮಣ್ಣುಳಿಗಂ.

ಸೂತ್ರಂ.

By the Affix ಗುಳಿ with the Bindu before it people are marked who have an inclination for; by ಉಣಿ people who feed on.

ಒದವುವುದು ಗುಳಿಪ್ರತ್ಯಯ
ಮದು ಪೂರ್ವದ ಬಿಂದುವೆರಸುಶೀಲಗ್ರಹಣಾ |
ರ್ಥದೊಳೆತ್ತಮುಣಿಪ್ರತ್ಯಯ
ವೊದವುಗುಮನ್ವಿತದಿನುಣ್ಬನಿದನೆಂಬೆಡೆಯೊಳ್ || 202 ||

ಪದಚ್ಛೇದಂ.

ಒದವುವುದು ಗುಳಿಪ್ರತ್ಯಯಂ ಅದು ಪೂರ್ವದ ಬಿಂದುವೆರಸುಶೀಲಗ್ರಹಣಾರ್ಥದೊಳ್; ಎತ್ತಂ ಉಣಿಪ್ರತ್ಯಯಂ ಒದವುಗುಂ ಅನ್ವಿತದಿಂ ಉಣ್ಬಂ ಇದಂ ಎಂಬ ಎಡೆಯೊಳ್.

ಅನ್ವಯಂ.

ಶೀಲಗ್ರಹಣಾರ್ಥದೊಳ್ ಪೂರ್ವದ ಬಿಂದುವೆರಸುಗುಳಿಪ್ರತ್ಯಯಂ ಅದು ಒದವುವುದು; ಇದಂ ಅನ್ವಿತದಿಂ ಉಣ್ಬಂ ಎಂಬೆಡೆಯೊಳ್ ಎತ್ತಂ ಉಣಿಪ್ರತ್ಯಯಂ ಒದವುಗುಂ.

ಟೀಕು.

ಶೀಲಗ್ರಹಣಾರ್ಥದೊಳ್=ಆವುದಾನೊಂದು ಶೀಲಗ್ರಹಣಾರ್ಥದಲ್ಲಿ; ಪೂರ್ವದ=ಆದಿಯ; ಬಿಂದುವೆರಸು=ಬಿಂದುಗೂಡಿದ; ಗುಳಿಪ್ರತ್ಯಯಂ=ಗುಳಿ ಎಂಬ ಪ್ರತ್ಯಯಂ; ಒದವುವುದು=ಪ್ರಾಪ್ತಿಸುವದು; ಇದಂ=ಇದಂ; ಅನ್ವಿತದಿಂ=ಹಿತದಿಂದೆ; ಉಣ್ಬಂ=ಊಟವಂ ಮಾಡುವಂ; ಎಂಬೆಡೆಯೊಳ್=ಎಂಬ ತಾವಿನಲ್ಲಿ; ಎತ್ತಂ=ಆವ ದೆಸೆಯಲ್ಲಿಯುಂ; ಉಣಿಪ್ರತ್ಯಯಂ=ಉಣಿ ಎಂಬ ಪ್ರತ್ಯಯಂ; ಒದವುಗುಂ=ಬರ್ಪುದು.

ವೃತ್ತಿ.

ಶೀಲಗ್ರಹಣಾರ್ಥಂಗಳೊಳ್ ಬಿಂದುವೆರಸುಗುಳಿಪ್ರತ್ಯಯಮಕ್ಕುಂ; ಈ ವಸ್ತುವನೀತನುಣ್ಬನೆಂಬಲ್ಲಿ ಉಣಿಪ್ರತ್ಯಯಮಕ್ಕುಂ.

ಪ್ರಯೋಗಂ.

ಗುಳಿಪ್ರತ್ಯಯಕ್ಕೆ—ಆಡುಂಗುಳಿ [ಆಟಂಗುಳಿ]; ಸಾಲಂಗುಳಿ; ಲಂಚಂಗುಳಿ; ಕುತ್ತಂಗುಳಿ.

ಉಣಿಪ್ರತ್ಯಯಕ್ಕೆ—ಅಮರ್ದುಣಿ; ಕಳ್ಳುಣಿ; ತುಡುಗುಣಿ.

ಸೂತ್ರಂ.

In many of the mentioned instances the Affixes ಉಕ, ಕುಳಿ, ಆಳಿ, ಇಕ and ಅಡಿಗ may also be used.

ಉಕಕುಳಿಯಾಳಿಪ್ರತ್ಯಯ
ಮಿಕಮುಂ ಶೀಲಾದಿವಿಶ್ರುತಾರ್ಥದೊಳಡಿಗ |
ಪ್ರಕಟಪ್ರತ್ಯಯಮಕ್ಕುಂ
ಸುಕವಿಗಳಿಂ ತದನುಕೂಲವರ್ತನವಿಧಿಯೊಳ್ = 203 ||

ಪದಚ್ಛೇದಂ.

ಉಕ-ಕುಳಿ-ಆಳಿಪ್ರತ್ಯಯಂ ಇಕಮುಂ ಶೀಲಾದಿವಿಶ್ರುತಾರ್ಥದೊಳ್; ಅಡಿಗಪ್ರಕಟಪ್ರತ್ಯಯಂ ಅಕ್ಕುಂ ಸುಕವಿಗಳಿಂ ತದನುಕೂಲವರ್ತನವಿಧಿಯೊಳ್.

ಅನ್ವಯಂ.

ಶೀಲಾದಿವಿಶ್ರುತಾರ್ಥದೊಳ್ ಉಕಕುಳಿಯಾಳಿಪ್ರತ್ಯಯಂ ಇಕಮುಂ; ಸುಕವಿಗಳಿಂ ತದನುಕೂಲವರ್ತನವಿಧಿಯೊಳ್ ಅಡಿಗಪ್ರಕಟಪ್ರತ್ಯಯಂ ಅಕ್ಕುಂ.

ಟೀಕು.

ಶೀಲಾದಿ=ಶೀಲ ಮೊದಲಾದ; ವಿಶ್ರುತಾರ್ಥದೊಳ್=ಪ್ರಸಿದ್ಧವಾದರ್ಥದಲ್ಲಿ; ಉಕಕುಳಿಯಾಳಿಪ್ರತ್ಯಯಂ=ಉಕಪ್ರತ್ಯಯ ಕುಳಿಪ್ರತ್ಯಯ ಆಳಿಪ್ರತ್ಯಯಂಗಳ್; ಇಕಮುಂ=ಇಕ ಎಂಬ ಪ್ರತ್ಯಯಮುಂ ಅಪ್ಪುದು; ಸುಕವಿಗಳಿಂ=ಸತ್ಕವೀಶ್ವರರಿಂದೆ; ತದನುಕೂಲ=ಆ ಶೀಲಾದಿವಿಶ್ರುತಾರ್ಥದೊಳನುಕೂಲವಾದ; ವರ್ತನವಿಧಿಯೊಳ್=ವರ್ತನದ ವಿಧಿಯಲ್ಲಿ; ಅಡಿಗ=ಅಡಿಗ ಎಂಬ; ಪ್ರಕಟ=ಪ್ರಸಿದ್ಧವಾದ; ಪ್ರತ್ಯಯಂ=ಪ್ರತ್ಯಯಂ; ಅಕ್ಕುಂ=ಆಗುವದು.

ವೃತ್ತಿ.

ಶೀಲಾದಿನಿಖಿಲಾರ್ಥಂಗಳೊಳ್ ಉಕಪ್ರತ್ಯಯಮುಂ ಕುಳಿಪ್ರತ್ಯಯಮುಂ ಆಳಿಪ್ರತ್ಯಯಮುಂ ಇಕಪ್ರತ್ಯಯಮುಂ ಅಕ್ಕುಂ; ತದನುಕೂಲವರ್ತನದೊಳ್ ಅಡಿಗಪ್ರತ್ಯಯಮಕ್ಕುಂ.

ಪ್ರಯೋಗಂ.

ಉಕಪ್ರತ್ಯಯಕ್ಕೆ—ಕಟ್ಟುಕಂ; ತಟ್ಟುಕಂ; ಅಂಟುಕಂ; ಕಾರುಕಂ; ಸಂಱುಕಂ; ಬಂದುಕಂ [ಬೊಂದುಕಂ] [ಬೊದುಕಂ]; ದಿಂಡುಕಂ.

ಕುಳಿಪ್ರತ್ಯಯಕ್ಕೆ—ಪೊರ್ಕುಳಿ; ಒಡಕುಳಿ [ಒಡುಕುಳಿ]; ಹುಡುಕುಳಿ; ಮಱುಕುಳಿ; [ಕುಱುಕುಳಿ]; ಪೆಂಕುಳಿ; [ಇರುಕುಳಿ].

ಆಳಿಪ್ರತ್ಯಯಕ್ಕೆ—ಓದಾಳಿ; ಜೂದಾಳಿ; ಮಾಱಾಳಿ; ಏಱಾಳಿ; ಪಡಪಾಳಿ; ಮಾತಾಳಿ; ಕೇಡಾಳಿ; ಸಿಗ್ಗಾಳಿ.

ಮಾಱಾಳಿಯುಮೋದಾಳಿಯು
ಮೇಱಾಳಿಯುಮಪ್ಪನಾಗಿಪಡೆಪಾಳಿಯ ಕೇಳ್ | (–ವಾಳಿಯ)
ನೀಱಂ ಜೂದಾಳಿಕರಂ
ಸೀಱಂ ಮಾತಾಳಿಕಱೆಯೆ ಸಿಗ್ಗಾಳಿಯಿವಳ್ || ಕಂದಂ ||

ಇಕಪ್ರತ್ಯಯಕ್ಕೆ—ಕರಿಕಂ; ಅಸಿಕಂ (ರಸಿಕಂ); ಹಿಸಿಕಂ; ಬಾರಿಕಂ.

ಅಡಿಗಪ್ರತ್ಯಯಕ್ಕೆ—ದೇವಡಿಗಂ; ಹಾವಡಿಗಂ; ಪೂವಡಿಗಂ.

## ಸೂತ್ರಂ.

By the Affix ಉಗ Nouns are formed which denote people who deal in, or who abide somewhere (?); by ಅಟಿಗ Nouns for rope-dancers, light-bearers and drivers (?).

ವ್ಯವಹರಣತದಾಚರಣ
ಪ್ರವಣನೊಳಕ್ಕುಂ ಸಮಂತುಗಪ್ರತ್ಯಯಮೊಂ |
ದುವುದಟಿಗಪ್ರತ್ಯಯಮಾ
ಡುವ ದೀವಿಗೆವಿಡಿವ ಹರದುಗೆಯ್ವನಿಬರೊಳಂ || 204 ||

## ಪದಚ್ಛೇದಂ.

ವ್ಯವಹರಣತದಾಚರಣಪ್ರವಣನೊಳ್ ಅಕ್ಕುಂ ಸಮಂತು ಉಗಪ್ರತ್ಯಯಂ; ಒಂದುವುದು ಅಟಿಗಪ್ರತ್ಯಯಂ ಆಡುವ ದೀವಿಗೆವಿಡಿವ ಹರದುಗೆಯ್ವ ಅನಿಬರೊಳಂ.

## ಅನ್ವಯಂ.

ವ್ಯವಹರಣತದಾತರಣಪ್ರವಣನೊಳ್ ಸಮಂತು ಉಗಪ್ರತ್ಯಯಂ ಅಕ್ಕುಂ; ಆಡುವ ದೀವಿಗೆ ವಿಡಿವ ಹರದುಗೆಯ್ವನಿಬರೊಳಂ ಅಟಿಗಪ್ರತ್ಯಯಂ ಒಂದುವುದು.

## ಟೀಕು.

ವ್ಯವಹರಣ=ವ್ಯವಹಾರದಲ್ಲಿ; ತದಾಚರಣ=ಅದರಾಚರಣೆಯಲ್ಲಿ; ಪ್ರವಣನೊಳ್=ಪ್ರಸಿದ್ಧ ವಾದವನಲ್ಲಿ; ಸಮಂತು=ಹಾಂಗೆ; ಉಗಪ್ರತ್ಯಯಂ=ಉಗ ಎಂಬ ಪ್ರತ್ಯಯಂ; ಅಕ್ಕುಂ=ಆಗುವದು; ಆಡುವ=(ಬಿದರಿನ) ಗಳೆವಿಡಿದಾಡುವ; ದೀವಿಗೆವಿಡಿವ=ದೀವಿಗೆಯಂ ಪಿಡಿವ; ಹರದುಗೆಯ್ವ=ಬೇಹಾರವಂ ಮಾಡುವ; ಅನಿಬರೊಳಂ=ಅನಿಬರಲ್ಲಿಯುಂ; ಅಟಿಗಪ್ರತ್ಯಯಂ=ಅಟಿಗ ಎಂಬ ಪ್ರತ್ಯಯಂ; ಒಂದುವುದು=ಪೊರ್ದುಗೆಯಾಗುವದು.

## ವೃತ್ತಿ.

ವ್ಯವಹರಿಸುವನೊಳಮ್ ಅಲ್ಲಿ ವರ್ತಿಸುವನೊಳಮ್ ಉಗಪ್ರತ್ಯಯಮಕ್ಕುಂ; ಗಱವಿಡಿದಾಡುವ ದೀವಿಗೆವಿಡಿವ ಎಲೆವರಿದಾಡುವನೊಳಮ್ [ಎಲೆವರದಾ–] ಅಟಿಗಪ್ರತ್ಯಯಮಕ್ಕುಂ.

## ಪ್ರಯೋಗಂ.

ಉಗಪ್ರತ್ಯಯಕ್ಕೆ—ನಾರುಗಂ; ಬೇರುಗಂ; ಊರುಗಂ; ಕಾಳುಗಂ; ನೇಱುಗಂ.

ಅಟಿಗಪ್ರತ್ಯಯಕ್ಕೆ—ಕೊಲ್ಲಟಿಗಂ; ದೀವಟಿಗಂ; [ಎಲೆವಿಡಿದಾಡುವಂಗೆ] ಮಾವಟಿಗಂ. [and ಉಗ M. A. ಬೆಱುಗಂ]

ಸೂತ್ರಂ.

The Affix ಕ is used for denoting persons of a certain condition; ಇಲ for denoting persons occupied with.

ಏನಾನುವೊಂದು ಭಾವಮು
ನಾನಲ್ ಸಲ್ಬುವನೊಳಱಿಗೆ ಕಪ್ರತ್ಯಯಮಂ |
ಪೀನಂ ತದ್ವರ್ತನಗತ
ಮಾನವನೊಳ್ ತಿಳಿಗೆ ಮತ್ತಿಲಪ್ರತ್ಯಯಮಂ || 205 ||

ಪದಚ್ಛೇದಂ.

ಏನಾನುಂ ಒಂದು ಭಾವಮುಂ ಆನಲ್ ಸಲ್ವವನೊಳ್ ಅಱಿಗೆ ಕಪ್ರತ್ಯಯಮಂ; ಪೀನಂ ತದ್ವರ್ತನಗತಮಾನವನೊಳ್ ತಿಳಿಗೆ ಮತ್ತೆ ಇಲಪ್ರತ್ಯಯಮಂ.

ಅನ್ವಯಂ.

ಏನಾನುಂ ಒಂದು ಭಾವಮುಂ ಆನಲ್ ಸಲ್ವವನೊಳ್ ಕಪ್ರತ್ಯಯಮಂ ಅಱಿಗೆ; ಪೀನಂ ತದ್ವರ್ತನಗತಮಾನವನೊಳ್ ಮತ್ತೆ ಇಲಪ್ರತ್ಯಯಮಂ ತಿಳಿಗೆ.

ಟೀಕು.

ಏನಾನುವೊಂದು=ಅವುದಾನೊಂದು; ಭಾವಮುಂ=ಭಾವಮುಂ; ಆನಲ್=ಧರಿಸಲ್; ಸಲ್ವವನೊಳ್=ಸಲ್ವವನಲ್ಲಿ; ಕಪ್ರತ್ಯಯಮಂ=ಕ ಎಂಬ ಪ್ರತ್ಯಯಮಂ; ಅಱಿಗೆ=ತಿಳಿಗೆ; ಪೀನಂ=ವಿಶೇಷವಾಗಿ; ತದ್ವರ್ತನ=ಆ ವರ್ತನೆಯಲ್ಲಿ; ಗತ=ಎಯ್ದಲ್ಪಟ್ಟ; ಮಾನವನೊಳ್=ಮನುಷ್ಯನಲ್ಲಿ; ಮತ್ತೆ=ಬಳಿಕಂ; ಇಲಪ್ರತ್ಯಯಮಂ=ಇಲ ಎಂಬ ಪ್ರತ್ಯಯಮಂ; ತಿಳಿಗೆ=ಅಱಿಗೆ.

ವೃತ್ತಿ.

ಆವುದಾನೊಂದು ಭಾವಮುಂ ತಳೆದಿರ್ಪವನೊಳ್ ಕಪ್ರತ್ಯಯಮಕ್ಕುಂ; ಅದಱೊಳೀತಂ ವರ್ತಿಪನೆಂಬಲ್ಲಿ ಇಲಪ್ರತ್ಯಯಮಕ್ಕುಂ.

ಪ್ರಯೋಗಂ.

ಕಪ್ರತ್ಯಯಕ್ಕೆ—ಬಡಕಂ; ನಿಡುಕಂ; ಒಱಕಂ; ಕಿಡುಕಂ; ಬಱುಕಂ; ಅಲಿಕಂ; ಬೆಳುಕಂ; ತೊಳಕಂ.

ಇಲಪ್ರತ್ಯಯಕ್ಕೆ—ಪಚ್ಚಯಿಲಂ [ಪಚ್ಚಾಯಿಲಂ, also M. B.]; ಪಡೆಯಿಲಂ; ಗಾವಿಲಂ.

ಸೂತ್ರಂ.

By the Affixes ಉಳ್ಳ, ಒಡೆಯ and ವಂತ persons are denoted who possess; by ವಣಿಗ persons whose delight is eating (or taking).

ಇದಱೊಳಿದುಂಟೆಂಬರ್ಥದೊ
ಳುದಯಿಪುದುಳ್ಳೊಡೆಯವಂತಶಬ್ದಂ ಕ್ರಕೊ |
ಳ್ವುದು ವಣಿಗಪ್ರತ್ಯಯಮು
ಣ್ಬುದು ಜೀವಿತಮಾಗಿ ಬಱಿದೆ ತಿನುತಿರ್ಪವನೊಳ್ || 206 ||

ಪದಚ್ಛೇದಂ.

ಇದಱೊಳ್ ಇದು ಉಂಟು ಎಂಬ ಅರ್ಥದೊಳ್ ಉದಯಿಪುದು ಉಳ್ಳ ಒಡೆಯ ವಂತ (ಎಂಬ) ಶಬ್ದಂ; ಕೈಕೊಳ್ವುದು ವಣಿಗಪ್ರತ್ಯಯಂ, ಉಣ್ಬುದು ಜೀವಿತಂ ಆಗಿ, ಬಱಿದೆ ತಿನುತೆ ಇರ್ಪ ಅವನೊಳ್.

ಅನ್ವಯಂ.

ಉಣ್ಬುದು ಜೀವಿತಂ ಆಗಿ, ಬರಿದೆ ತಿನುತೆ ಇರ್ಪವನೊಳ್ ವಣಿಗಪ್ರತ್ಯಯಂ ಕೈಕೊಳ್ವುದು.

ಟೀಕು.

ಇದಱೊಳ್=ಇದರಲ್ಲಿ; ಇದು=ಇದು; ಉಂಟೆಂಬರ್ಥದೊಳ್=ಉಂಟೆಂಬ ಅರ್ಥದಲ್ಲಿ; ಉಳ್ಳೊಡೆಯವಂತಶಬ್ದಂ=ಉಳ್ಳ ಎಂಬ, ಒಡೆಯ ಎಂಬ, ವಂತ ಎಂಬ ಶಬ್ದಂ; ಉದಯಿಪುದು=ಹುಟ್ಟುವದು; ಉಣ್ಬುದು=ತಿಂಬುದು; ಜೀವಿತಮಾಗಿ=ಬಾಳ್ವೆಯಾಗಿ; ಬಱಿದೆ=ಸುಮ್ಮನೆ; ತಿನುತಿರ್ಪವನೊಳ್=ತಿನುತಿರ್ಪವನಲ್ಲಿ; ವಣಿಗಪ್ರತ್ಯಯಂ=ವಣಿಗ ಎಂಬ ಪ್ರತ್ಯಯಂ; ಕೈಕೊಳ್ವುದು=ಸ್ವೀಕಾರವಪ್ಪುದು.

ವೃತ್ತಿ.

ಇಲ್ಲಿ ಈ ವಸ್ತುವುಂಟೆಂಬರ್ಥದೊಳ್ ಉಳ್ಳವೊಡೆಯವಂತಪ್ರತ್ಯಯಮಕ್ಕುಂ; ಊಟಮೇ ಜೀವಿತಮಾಗಿ ಬಾೞ್ವನೊಳ್ ವಣಿಗಪ್ರತ್ಯಯಮಕ್ಕುಂ.

ಪ್ರಯೋಗಂ.

ಉಳ್ಳಪ್ರತ್ಯಯಕ್ಕೆ—ಧನಮುಳ್ಳಂ; ಧಾನ್ಯಮುಳ್ಳಂ; ಗುಣಮುಳ್ಳಂ; ಓದುಳ್ಳಂ; ತೇಜಮುಳ್ಳಂ.

ಒಡೆಯಪ್ರತ್ಯಯಕ್ಕೆ—ಪೆರ್ಮೆಯೊಡೆಯಂ; ಜಗದೊಡೆಯಂ; ಕೊಡೆಯೊಡೆಯಂ; ಜಾಣೊಡೆಯಂ.

ವಂತಪ್ರತ್ಯಯಕ್ಕೆ—ಸಿರಿವಂತಂ; ಜಯವಂತಂ; ಹೂನ್ಯವಂತಂ.

ವಣಿಗಪ್ರತ್ಯಯಕ್ಕೆ—ಕೂೞ್ವಣಿಗಂ.

ಮತ್ತೆ ಕೆಲವಱೊಳುಂಟು—ಲಂಚವಣಿಗಂ; ಸಾಲವಣಿಗಂ.

ಸೂತ್ರಂ.

The Affix ಅನೆಯ is used for denoting grades in quantity and number; ಮೆ for denoting so and so many times.

ಅನೆಯಪ್ರತ್ಯಯಮನಿತಿನಿ
ತೆನಿತೆಂಬ ಲಸತ್ಪ್ರಮಾಣಪೂರಣದೊಳ್ಮೆ |
ಟ್ಟನೆ ಸಂಖ್ಯಾಪೂರಣದೊಳ್
ಜನಿಯಿಪುದು ಮೆಯೆಂಬುದಕ್ಕುಮೆಣಿಸುವ ಸೊಱೊಳ್ ||207||

### ಪದಚ್ಛೇದಂ.

ಅನೆಯಪ್ರತ್ಯಯಂ ಅನಿತು ಇನಿತು ಎನಿತು ಎಂಬ ಲಸತ್ಪ್ರಮಾಣಪೂರಣದೊಳ್ ನೆಟ್ಟನೆ ಸಂಖ್ಯಾಪೂರಣದೊಳ್ ಜನಿಯಿಪುದು; ಮೆ ಎಂಬುದು ಅಕ್ಕುಂ ಎಣಿಸುವ ಸೂೞೊಳ್.

### ಅನ್ವಯಂ.

ಅನಿತಿನಿತೆನಿತೆಂಬ ಲಸತ್ಪ್ರಮಾಣಪೂರಣದೊಳ್ ನೆಟ್ಟನೆ ಸಂಖ್ಯಾಪೂರಣದೊಳ್ ಅನೆಯಪ್ರತ್ಯಯಂ ಜನಿಯಿಪುದು; ಎಣಿಸುವ ಸೂೞೊಳ್ ಮೆಯೆಂಬುದಕ್ಕುಂ.

### ಟೀಕು.

ಅನಿತು=ಅನಿತೆಂದು; ಇನಿತು=ಇನಿತೆಂದು; ಎನಿತು=ಎನಿತೆಂದು; ಎಂಬ=ಎಂಬ; ಲಸತ್=ಒಪ್ಪಲ್ಪಟ್ಟ; ಪ್ರಮಾಣಪೂರಣದೊಳ್=ಪ್ರಮಾಣಪೂರಣದಲ್ಲಿ; ನೆಟ್ಟನೆ=ವ್ಯಕ್ತವಾಗಿ; ಸಂಖ್ಯಾ=ಲೆಕ್ಕದ; ಪೂರಣದೊಳ್=ಪೂರಣದಲ್ಲಿ; ಅನೆಯಪ್ರತ್ಯಯಂ=ಅನೆಯ ಎಂಬ ಪ್ರತ್ಯಯಂ; ಜನಿಯಿಪುದು=ಹುಟ್ಟುವದು; ಎಣಿಸುವ ಸೂೞೊಳ್=ಎಣಿಸುವ ಸೂಳಲ್ಲಿ; ಮೆ ಎಂಬುದು=ಮೆ ಎಂಬ ಪ್ರತ್ಯಯಂ; ಅಕ್ಕುಂ=ಆಗುವದು.

### ವೃತ್ತಿ.

ಅನಿತಿನಿತೆನಿತೆಂಬ ಪ್ರಮಾಣಪೂರಣದೊಳಂ ಸಂಖ್ಯಾಪೂರಣದೊಳಮ್ ಅನೆಯಪ್ರತ್ಯಯಮಕ್ಕುಂ; ಎಣಿಸುವ ಸೂೞೊಳ್ ಮೆಯೆಂಬುದಕ್ಕುಂ.

### ಪ್ರಯೋಗಂ.

ಅನೆಯಪ್ರತ್ಯಯಕ್ಕೆ—ಅನಿತನೆಯಂ; ಇನಿತನೆಯಂ; ಎನಿತನೆಯಂ; ಒಂದನೆಯಂ; ಎರಡನೆಯಂ; ಮೂಱನೆಯಂ; ಪದಿನಾಱನೆಯಂ; ನೂಱನೆಯಂ; ಐನೂಱನೆಯಂ.

ಮೆಪ್ರತ್ಯಯಕ್ಕೆ—ಒರ್ಮೆ; ಇರ್ಮೆ; ಮೂರ್ಮೆ; ಸಾಸಿರ್ಮೆ; ಪಲರ್ಮೆ.

### ಸೂತ್ರಂ.

In forming Feminines chiefly of Secondary and other Nouns with final ಅ, the Affixes ಇತಿ, ತಿ, ಅೞ್ (Ss. 143; 153; 154), or ಎ are added.

ಕಾಂತಾವಿಷಯದೊಳಾದವ
ದಂತಕ್ಕಿತಿಯುಂ ತದಾದಿಲೋಪಮುಮಕ್ಕುಂ |
ಭ್ರಾಂತೆಂನಳಂತಮುಂ ನೆಗ
ೞ್ಗುಂ[1] ತೋಱದದರ್ಕದಂತದಲ್ಲಿ ವಿಕಲ್ಪಂ || 208 ||

1) ಶಿಥಿಲತ್ವಂ.

### ಪದಚ್ಛೇದಂ.

ಕಾಂತಾವಿಷಯದೊಳ್ ಆದಂ ಅದಂತಕ್ಕೆ ಇತಿಯುಂ ತದಾದಿಲೋಪಮುಂ ಅಕ್ಕುಂ; ಭ್ರಾಂತೆಂ, ಅಳಂತಮುಂ ನೆಗಟ್ಗಿಂ, ತೋಱಿದು ಅದರ್ಕೆ ಅದಂತದಲ್ಲಿ ವಿಕಲ್ಪಂ.

### ಅನ್ವಯಂ.

ಅದರ್ಕೆ ಅದಂತದಲ್ಲಿ ವಿಕಲ್ಪಂ ತೋಱಿದು ಎಂಬುದನ್ವಯಂ.

### ಟೀಕು.

ಕಾಂತಾವಿಷಯದೊಳ್=ಸ್ತ್ರೀವಿಷಯದಲ್ಲಿ; ಆದಂ=ಆದಂ ಎಂಬ ಪೀನ ಗ್ರಹಣದಿಂದೆ; ಅದಂತಕ್ಕೆ=ಅಕಾರಾಂತಕ್ಕೆ; ಇತಿಯುಂ=ಇತಿಯೆಂಬ ಪ್ರತ್ಯಯಮುಂ; ತದಾದಿಲೋಪಮುಂ=ಆ ಇತಿ ಪ್ರತ್ಯಯದಾದಿಗೆ ಲೋಪಮುಂ; ಅಕ್ಕುಂ=ಅಪ್ಪುದು; ಭ್ರಾಂತೆಂ=ಭ್ರಮೆಯೆಂ; ಅಳಂತಮುಂ=ಅಳ್ ಎಂಬ ಪ್ರತ್ಯಯಾಂತಮುಂ; ನೆಗಟ್ಗಿಂ=ಪ್ರಸಿದ್ಧಿವಡೆವುದು; ಅದರ್ಕೆ=ಆ ಅಳ್ ಎಂಬ ಪ್ರತ್ಯಯಕ್ಕೆ; ಅದಂತದಲ್ಲಿ=ಅಕಾರಾಂತದಲ್ಲಿ; ವಿಕಲ್ಪಂ=ವಿಕಲ್ಪಂ; ತೋಱಿದು=ಬಾರದು.

### ವೃತ್ತಿ.

ಸ್ತ್ರೀವಿಷಯದೊಳದಂತಕ್ಕೆ ಇತಿಪ್ರತ್ಯಯಮುಮ್ ಆದಿಯಿತ್ತಕ್ಕೆ ಲೋಪಮುಮ್ ಆದಮೆಂಬುದಱಿಂ ಕಿಱಿದೆಡೆಯೊಳಮ್ ಅದಂತಮಲ್ಲದಲ್ಲಿಯುಮ್ ಅದಂತಕ್ಕೆ ವಿಕಲ್ಪಮಿಲ್ಲದಳ್ಪ್ರತ್ಯಯಮುಮ್ ಆದಮೆಂಬುದಱಿಂದಂತಕ್ಕೆತ್ತಮುಮಕ್ಕುಂ.

### ಪ್ರಯೋಗಂ.

ಇತಿಗೆ—ಚಾಮರಿಗಿತಿ; ಮದ್ದಳಿಗಿತಿ; ಆವುಜಿಗಿತಿ; ಕನ್ನಡಿಗಿತಿ; ಲೇಪಾಳಿಗಿತಿ; ಪಂಚಮಿಗಿತಿ; ರೆವೆಕಿಣಿಗಿತಿ [ವೆರಣಿಗಿತಿ]; ಕುಱುಂಬಿತಿ; ತೆಲುಂಗಿತಿ (s. S. 209); ಚಿಪ್ಪಿಗಿತಿ; ಒಕ್ಕಲಿಗಿತಿ, ಒಕ್ಕಲಿತಿಯೆಂದುಮುಂಟು. [M. A. ತೆಲಿಗಿತಿ]

ಒಕ್ಕಲಿತಿ ಜೋಡೆಯಾದಂ
ತಕ್ಕುದವಳ್ ಸಿತಗೆ ಪತಿಗೆ ಕಾಯ್ವುಳ್ ನೋ[1] |
ಟಕ್ಕೆ ಕಡುಸೊಂದಿ ನಾಣಿಲಿ
ಬಕ್ಕಂಬಯಲೊಳ್ ಮದಾರಮಂ ಭಂಜಿಸುವಳ್ || ಕಂದಂ ||

ಅದಂತಮಲ್ಲದಲ್ಲಿಯುಂ—ಅಕ್ಕಸಾಲಿತಿ; ಒಕ್ಕಲಿತಿ.

ಇತ್ತಲೋಪಕ್ಕೆ—ಮಣಿಗಾರ್ತಿ; ಕಂಚಗಾರ್ತಿ; ಗಾಡಿಗಾರ್ತಿ; ಘಟ್ಟಿವಳ್ತಿ (s. S. 209); ಪೊಲತಿ, ನರತಿ, ಎಡತಿ ಎಂಬ ಮೂಱು ಶಬ್ದದೆತ್ತಕ್ಕೆ ಸಮಾಸದಂತಿರತ್ತಂ (—ಪಿಂದಣಂತಿರತ್ತಂ).

1) There is a metrical defect in this line; perhaps: ಕಾಯ್ವುಳವಳ್.

ವಿಕಲ್ಪಮಿಲ್ಲದ ಅಳ್ಪ್ರತ್ಯಯಕ್ಕೆ—ಅವಳ್, ಇವಳ್, ಉವಳ್; ಆವಳ್; ಪೆಱಳ್; ಕಿಱಿಯಳ್; ಪಿರಿಯಳ್; ಅಸಿಯಳ್; ಇಂಮಿದಳ್; ಕಂಮಿದಳ್. (cf. Ss. 77; 78; 153).

ಕೃತ್ತಿನೊಳಮಪ್ಪುದರ್ಕೆ—ಒಸರಿಸಿದಳ್; ರಾಗಿಸಿದಳ್; ಭೋಗಿಸಿದಳ್; ಪಾಡಿಸಿದಳ್; ಒಸಿದಳ್. (cf. S. 73).

ಎತ್ವಕ್ಕೆ—ಜೋಡೆ; ಸಿತಗೆ; ಚದುರೆ; ಪಾಣ್ಬೆ.

ಸೂತ್ರಂ.

ಚರಮಸ್ವರಕ್ಕೆ ಚರಮಾ
ಕ್ಷರಕಕ್ಕುಂ ಲೋಪಮಗ್ರದೊಳ್ ತದ್ಧಿತಮೊಂ |
ದಿರೆ ತನ್ನೊಳಾ ಸಮಾಸಾಂ
ತರದಾಖ್ಯಾತಕದ ಲಕ್ಷ್ಮಣಂ ವ್ಯವಹರಿಕುಂ || 209 ||

In the formation of Secondary nouns there appears also an Elision of vowels and consonants, and a Changing of consonants similar to what we see in the chapters on Compounds (III) and Verbs (V).

ಪದಚ್ಛೇದಂ.

ಚರಮಸ್ವರಕ್ಕೆ ಚರಮಾಕ್ಷರಕೆ ಅಕ್ಕುಂ ಲೋಪಂ, ಅಗ್ರದೊಳ್ ತದ್ಧಿತಂ ಒಂದಿ ಇರೆ; ತನ್ನೊಳ್ ಆ ಸಮಾಸಾಂತರದ ಆಖ್ಯಾತಕದ ಲಕ್ಷಣಂ ವ್ಯವಹರಿಕುಂ.

ಅನ್ವಯಂ.

ಅಗ್ರದೊಳ್ ತದ್ಧಿತಂ ಒಂದಿರೆ, ಚರಮಸ್ವರಕ್ಕೆ ಚರಮಾಕ್ಷರಕೆ ಲೋಪಂ ಅಕ್ಕುಂ; ತನ್ನೊಳ್ ಆ ಸಮಾಸಾಂತರದ ಆಖ್ಯಾತಕದ ಲಕ್ಷಣಂ ವ್ಯವಹರಿಕುಂ.

ಟೀಕು.

ಅಗ್ರದೊಳ್=ಮುಂದೆ; ತದ್ಧಿತಂ=ತದ್ಧಿತಪ್ರತ್ಯಯಂ; ಒಂದಿರೆ=ಕೂಡಿರೆ; ಚರಮಸ್ವರಕ್ಕೆ=ಅಂತ್ಯದ ಸ್ವರಕ್ಕೆ; ಚರಮಾಕ್ಷರಕೆ=ಅಂತ್ಯದಕ್ಷರಕ್ಕೆ; ಲೋಪಂ=ಅದರ್ಶನಂ; ಅಕ್ಕುಂ=ಅಪ್ಪುದು; ತನ್ನೊಳ್=ತದ್ಧಿತಮೊಂದಿದ ಪದಂ ತನ್ನಲ್ಲಿ; ಆ ಸಮಾಸಾಂತರದ=ಆ ಸಮಾಸಪ್ರಕರಣಮಧ್ಯದ; ಆಖ್ಯಾತಕದ=ಆಖ್ಯಾತಪ್ರಕರಣದ; ಲಕ್ಷಣಂ=ಲಕ್ಷಣಮಾದ ಸೂತ್ರಂ; ವ್ಯವಹರಿಕುಂ=ವ್ಯವಹರಿಸುವುದು.

ವೃತ್ತಿ.

ತದ್ಧಿತಪ್ರತ್ಯಯಂ ಪರದೊಳಿರೆ, ಅಂತ್ಯಸ್ವರಕ್ಕಮುಂತ್ಯಾಕ್ಷರಕ್ಕಂ ಲೋಪಂ; ಸಮಾಸಾಂತರಾಳಲಕ್ಷಣಮುಮ್ ಆಖ್ಯಾತಲಕ್ಷಣಮುಂ ತದ್ಧಿತದೊಳೆ ವ್ಯವಹರಿಸುಗುಂ.

ಪ್ರಯೋಗಂ.

ಸ್ವರಲೋಪಕ್ಕೆ—[ಘಟ್ಟಿವಳ್ತಿ; ಸೆಜ್ಜೆವಳ್ತಿ;] ತೆಲುಂಗಿತಿ; ಜೋಸರಗಿತಿ; ದೇಸಿಗಿತಿ; ಕಂಮಱಿತಿ; ನಾವಿದಿತಿ (ನಾಱಿದಿಗಿತಿ); ಹಾದರಿಗಿತಿ. (cf. S. 52).

(ಱು, ದು ಎಂಬ) ಅಕ್ಷರಂಗಳ ಲೋಪಕ್ಕೆ—ಏಱುತಕ್ಕೆ ಏತಂ (S. 210); ಒದಿಂಗೆ ಒತಂ (S. 210).

ಸಮಾಸಲಕ್ಷಣಕ್ಕೆ—ಮಾಲೆಗಾಱನೆಂಬುದಱ ಱಕಾರಕ್ಕೆ ರೇಫಮಾದುದಾಗಿ ಮಾಲೆಗಾರ್ತಿ; ಕಂಚಗಾರ್ತಿ; ಜಾಲಗಾರ್ತಿ; ಬಳೆಗಾರ್ತಿ. (cf. S. 199 with S. 191).

ಆಖ್ಯಾತಲಕ್ಷಣಕ್ಕೆ—ಆಟಂ; ಪಾಟಂ; ಕೂಟಂ. (cf. S. 213 with Ss. 238; 239).

ಸೂತ್ರಂ.

One class of Abstract nouns (ಭಾವಾರ್ಥನಾಮಗಳು) is formed by adding ವಿ, ವು or ವೆ to (Verbal) themes, in which case ಅ frequently generates before the Affixes (cf. S. 218);—another class by adding ತ or ತೆ.

ಇತ್ತದೊಳುತ್ತದೊಳಾ ಹ್ರ
ಸ್ವೈತ್ತದೊಳೊಂದಿದ ವಕಾರಮಕ್ಕುಂ ಭಾವ |
ಕ್ಕತ್ತಂ ಪಿರಿದುಂ ಪೆಱಗುಂ
ಟತ್ತಂ ಹ್ರಸ್ವೈತ್ತತತ್ತಮದು ಕೆಲವೆಡೆಯೊಳ್ || 210 ||

ಪದಚ್ಛೇದಂ.

ಇತ್ವದೊಳ್ ಉತ್ವದೊಳ್ ಆ ಹ್ರಸ್ವೈತ್ವದೊಳ್ ಒಂದಿದ ವಕಾರಂ ಅಕ್ಕುಂ ಭಾವಕ್ಕೆ; ಅತ್ವಂ ಪಿರಿದುಂ ಪೆಱಗೆ ಉಂಟು. ಅತ್ವಂ ಹ್ರಸ್ವೈತ್ವತತ್ವಂ ಅದು ಕೆಲವೆಡೆಯೊಳ್.

ಅನ್ವಯಂ.

ಭಾವಕ್ಕೆ ಇತ್ವದೊಳ್ ಉತ್ವದೊಳ್ ಆ ಹ್ರಸ್ವೈತ್ವದೊಳ್ ಒಂದಿದ ವಕಾರಂ ಅಕ್ಕುಂ; ಅತ್ವಂ ಪಿರಿದುಂ ಪೆಱಗೆ ಉಂಟು. ಕೆಲವೆಡೆಯೊಳ್ ಅತ್ವಂ ಹ್ರಸ್ವೈತ್ವತತ್ವಂ ಅದು.

ಟೀಕು.

ಭಾವಕ್ಕೆ=ಭಾವಾರ್ಥಕ್ಕೆ; ಇತ್ವದೊಳ್=ಇಕಾರದಲ್ಲಿ; ಉತ್ವದೊಳ್=ಉಕಾರದಲ್ಲಿ; ಆ ಹ್ರಸ್ವೈತ್ವದೊಳ್=ಆ ಹ್ರಸ್ವವಾದೆಕಾರದಲ್ಲಿ; ಒಂದಿದ ವಕಾರಂ=ಕೂಡಿದ ವಕಾರಂ; ಅಕ್ಕುಂ=ಆಗುವದು; ಅತ್ವಂ=ಅಕಾರಂ; ಪಿರಿದುಂ=ವಿಶೇಷವಾಗಿ; ಪೆಱಗೆ=ಪಿಂದೆ; ಉಂಟು=ಉಂಟಾಗುವದು; ಕೆಲವೆಡೆಯೊಳ್=ಕೆಲವು ತಾವಿನಲ್ಲಿ; ಅತ್ವಂ ಹ್ರಸ್ವೈತ್ವತತ್ವಂ=ಅಕಾರಮುಂ ಹ್ರಸ್ವದೆಕಾರಮುಂ ಕೂಡಿದ ತಕಾರಂ; ಅದು=ಅದು ಆಗುವದು.

ವೃತ್ತಿ.

ಇಕಾರದೊಳಂ ಉಕಾರದೊಳಂ ಎಕಾರದೊಳಂ ಕೂಡಿದ ಭಾವಾರ್ಥದ ವಕಾರಮಿರ್ದೊಡೆ ಅದಱ ಪಿಂದೆ ಅಕಾರಮಕ್ಕುಂ; ಅತ್ತಮೆತ್ತಮುಂ ತಳೆದ ತಕಾರಂ ಕೆಲವೆಡೆಯೊಳಕ್ಕುಂ.

ಪ್ರಯೋಗಂ.

ವಕಾರಕ್ಕೆ—ಕೊಳವಿ, ಅಳವಿ, [ಬಳವಿ]; ಕಳವು, ಪೆಳವು, ಕೆಳವು, ತೆಱವು [M. A. ತೆರವು]; ಮಱವೆ, ತೆಱವೆ [also M. A.], ಪಳವೆ, ಎಳವೆ.

ವ್ಯಂಜನದ ಮೇಲಣಾತ್ತಕ್ಕೆ—ನಿಲವು; ಓಲವು; ಬಲವು; ಸಲವು; ಗೆಲವು; ಇರವು; ಬರವು; ಎರವು (ಎಱವು?).

ಪಿರಿದೆಂಬುದಱಿಂದತ್ತಮಿಲ್ಲದಲ್ಲಿಯುಮ್ ಇವಾದುವು—ಉಱಿವು; ಕಳೆವು; ತಿಳಿವು; ಅಱಿವು (ಅಳಿವು). [M. A. and B. always have the ಳ್].

ತಕಾರಕ್ಕೆ—ಅಱಿತಂ, ಕಡಿತಂ, ಉಱಿತಂ [M. A.], ಏತಂ, ಓತಂ (S. 209), ಎರ್ತಂ, ಪೊರ್ತಂ.

ತೆಕಾರಕ್ಕೆ—ಅಗಲ್ತೆ, ಪೊಗಲ್ತೆ, ನೆಗಲ್ತೆ, ಪುಗುತೆ.

ಸೂತ್ರಂ.

Further, Abstract nouns denoting distinction (ಚೇತನಂ) are formed by the Affixes ಇಕೆ, ಇಕ್ಕೆ (being added to themes with a final vowel), and ತನ (not to be added to Sanskṛt themes). Others are formed by means of ಉಮೆ, ಅಮೆ, ಗೆ, ಕೆ, ಮೆ (S. 207), ಪು, ಪಿ and ಉ (cf. S. 39?).

ಪ್ರಕಟಂ ಚೇತನಭಾವದೊ
ಳಿಕೆ ತನಮುಮೆಯಕ್ಕುಮುಱಿದ ಭಾವದೊಳಮೆಯುಂ |
ಗೆ ಕೆ ಮೆಗಳುಮುತ್ತದಿತ್ತದ
ಪಕಾರಮುಂ ಮತ್ತುಕಾರಮುಂ ಸಮನಿಸುಗುಂ. || 211 ||

ಪದಚ್ಛೇದಂ.

ಪ್ರಕಟಂ ಚೇತನಭಾವದೊಳ್ ಇಕೆ ತನಂ ಉಮೆ ಅಕ್ಕುಂ; ಉಱಿದ ಭಾವದೊಳ್ ಅಮೆಯುಂ ಗೆ ಕೆ ಮೆಗಳುಂ ಉತ್ವದ ಇತ್ವದ ಪಕಾರಮುಂ ಮತ್ತೆ ಉಕಾರಮುಂ ಸಮನಿಸುಗುಂ.

ಅನ್ವಯಂ.

ಚೇತನಭಾವದೊಳ್ ಇಕೆ ತನಂ ಉಮೆ ಪ್ರಕಟಂ ಅಕ್ಕುಂ. ಉಳಿದುದು ಯಥಾನ್ವಯಂ.

ಟೀಕು.

ಚೇತನಭಾವದೊಳ್=ಚೈತನ್ಯಭಾವದಲ್ಲಿ; ಇಕೆ=ಇಕೆ ಎಂಬ ಪ್ರತ್ಯಯಂ; ತನಂ=ತನಂ ಎಂಬ ಪ್ರತ್ಯಯಂ; ಉಮೆ=ಉಮೆ ಎಂಬ ಪ್ರತ್ಯಯಂ; ಪ್ರಕಟಂ=ಪ್ರಸಿದ್ಧಂ; ಅಕ್ಕುಂ=ಆಗುವದು; ಉಱಿ

ದ ಭಾವದೊಳ್=ಚೈತನ್ಯಭಾವವಲ್ಲದುಳಿದ ಭಾವದಲ್ಲಿ; ಅಮೆಯುಂ=ಅಮೆ ಎಂಬ ಪ್ರತ್ಯಯಮುಂ; ಗೆ ಕೆ ಮೆಗಳುಂ=ಗೆ ಪ್ರತ್ಯಯ, ಕೆ ಪ್ರತ್ಯಯ, ಮೆ ಪ್ರತ್ಯಯಂಗಳುಂ; ಉತ್ವದ=ಉಕಾರದ; ಇತ್ವದ=ಇಕಾರದ; ಪಕಾರಮುಂ=ಪತ್ವಮುಂ; ಮತ್ತೆ=ಬಳಿಕಂ; ಉಕಾರಮುಂ=ಉ ಪ್ರತ್ಯಯಮುಂ; ಸಮನಿಸುಗುಂ=ಬರ್ಪುವು.

ವೃತ್ತಿ.

ಚೇತನಭಾವದೊಳಿಕೆಯೆಂಬುದುಂ ತನವೆಂಬುದುಮ್ ಉಮೆಯೆಂಬುದುಮ್ ಅಕ್ಕುಂ; ಉೞಿದ ಭಾವದೊಳ್ ಅಮೆ ಎಂದುಂ ಗೆ ಎಂದುಂ ಕೆ ಎಂದುಂ ಮೆ ಎಂದುಂ ಪು ಎಂದುಂ ಪಿ ಎಂದುಂ ಉ ಎಂದುಮ್ ಅಕ್ಕುಂ.

ಪ್ರಯೋಗಂ.

ಇಕೆಗೆ—ಉನ್ನತಿಕೆ; ಉದ್ಧತಿಕೆ; ಪನ್ನತಿಕೆ; ಬಲ್ಲಂಟಿಕೆ; ದೂಸರಿಕೆ; ಮಾನಸಿಕೆ.

ಇಕೆಗೆ ದ್ವಿತ್ವಮುಂಟು—ಉನ್ನತಿಕ್ಕೆ; ಉದ್ಧತಿಕ್ಕೆ.

ವ್ಯಂಜನಾಂತದ ಮೇಲೆ ಇಕೆಯಂ ಪತ್ತಿಸಲಾಗದು—ಕಾಣಿಕೆ, ಪೂಣಿಕೆ, ಜಾಣಿಕೆ, ತೆರಳಿಕೆ ಎಂದೊಡೆ ದೋಷಂ.

ತನಕ್ಕೆ—ಕಲಿತನಂ, ಚದುರತನಂ, ಆಳ್ತನಂ, ಎಗ್ಗತನಂ, ಮರುಳ್ತನಂ, ಪೆಣ್ತನಂ. ಸಂಸ್ಕೃತದೊಳಿದು ಸಲ್ಲದು; ಆರೋಹಕತನವೆಂಬುದಬದ್ಧಂ.

ಉಮೆಗೆ—ತಕ್ಕುಮೆ.

ಅಮೆಗೆ—ತಿರಮೆ; ಅಳ್ಕಮೆ.

ಗೆಕಾರಕ್ಕೆ—ಉಡುಗೆ; ಪಸುಗೆ; ಪೊಲ್ಗೆ; ಬಿಸುಗೆ; ಪಂಣುಗೆ; ಪತ್ತುಗೆ.

ಕೆಕಾರಕ್ಕೆ—ಮಡಿಕೆ; ಹಡಿಕೆ; ಕಾಣ್ಕೆ; ಪೂಣ್ಕೆ; ತೆರಳ್ಕೆ; ನಿರ್ಮಿಕೆ; ತೋರ್ಕೆ.

ಮೆಕಾರಕ್ಕೆ—ಬಲ್ಮೆ; ಜಾಣ್ಮೆ; ಕಡುಮೆ; ಮುಯಿಮೆ; ಕೂರ್ಮೆ; ಪೆರ್ಮೆ.

ಪುಕಾರಕ್ಕೆ—ಪಡೆಪು; ಕಡುಪು (ಕಡಪು); ಬಲ್ಪು; ಮೆಲ್ಪು; ತಣ್ಪು; ನುಣ್ಪು; ಕರ್ಪು; ಪಸುರ್ಪು; ಕೆಂಪು; ಪೆಂಪು (S. 212); ಬಿಸುಪು.

ಪಿಕಾರಕ್ಕೆ—ಕಲ್ಪಿ.

ಉಕಾರಕ್ಕೆ—ಉಗ್ಗು; ಸಿಗ್ಗು; ಎಗ್ಗು; ಕಿವುಡು; ಕೆಂಚು; ಗುಜ್ಜು.

ಸೂತ್ರಂ.

The Noun ಪೆಂಪು mentioned under S. 211, is formed of ಪಿರಿದು.

ಪಿರಿದೆಂಬೀ ರೇಫಕ್ಕಾ
ಚರಿಪರ್ ಭಾವಾರ್ಥಮಪ್ಪುದೊಂದು ಪುಕಾರಂ |
ಪರಮಾಗೆ ಬಿಂದುಮಂ ವಾ
ಕ್ಪರಿಣತರಿಂ ಸಿದ್ಧಮಾಯ್ತು ಪೆಂಪೆಂಬ ಪದಂ || 212 ||

ಪದಚ್ಛೇದಂ.

ಪಿರಿದು ಎಂಬ ಈ ರೇಫಕ್ಕೆ ಆಚರಿಪರ್, ಭಾವಾರ್ಥಂ ಅಪ್ಪುದು ಒಂದು ಪುಕಾರಂ ಪರಂ ಆಗೆ, ಬಿಂದುವಂ; ವಾಕ್ಪರಿಣತರಿಂ ಸಿದ್ಧಂ ಆಯ್ತು ಪೆಂಪು ಎಂಬ ಪದಂ.

ಅನ್ವಯಂ.

ಭಾವಾರ್ಥಂ ಅಪ್ಪುದು ಒಂದು ಪುಕಾರಂ ಪರಂ ಆಗೆ, ಪಿರಿದು ಎಂಬೀ ರೇಫಕ್ಕೆ ಬಿಂದುವಂ ಆಚರಿಪರ್; ವಾಕ್ಪರಿಣತರಿಂ ಪೆಂಪು ಎಂಬ ಪದಂ ಸಿದ್ಧಂ ಆಯ್ತು.

ಟೀಕು.

ಭಾವಾರ್ಥಂ=ಭಾವಾರ್ಥಂ; ಅಪ್ಪುದು=ಆಗುವದು; ಒಂದು ಪುಕಾರಂ=ಒಂದು ಪುಪ್ರತ್ಯಯಂ; ಪರಮಾಗೆ=ಪರವಾಗೆ; ಪಿರಿದೆಂಬೀ ರೇಫಕ್ಕೆ=ಪಿರಿದು ಎಂಬ ಶಬ್ದದ ರೇಫೆಗೆ; ಬಿಂದುವಂ=ಸೊನ್ನೆಯಂ; ಆಚರಿಪರ್=ಪೇಳ್ವರ್; ವಾಕ್ಪರಿಣತರಿಂ=ವಾಕ್ಪ್ರೌಢರಿಂದೆ; ಪೆಂಪೆಂಬ ಪದಂ=ಪೆಂಪು ಎಂಬ ಪದಂ; ಸಿದ್ಧಂ=ಪ್ರಸಿದ್ಧಂ; ಆಯ್ತು=ಆಯಿತ್ತು.

ವೃತ್ತಿ.

ಭಾವಾರ್ಥದ ಪುಕಾರಂ ಪರಮಾಗೆ, ಪಿರಿದೆಂಬ ರೇಫಕ್ಕೆ ಬಿಂದುವುಂ ಪೆಱಗಣೊತ್ತುಕ್ಕೆತ್ತುಮುಮಕ್ಕುಂ.

ಪ್ರಯೋಗಂ.

ಪೆಂಪು.

ಸೂತ್ರಂ.

ಮೊದಲಿತ್ತಕ್ಕೆತ್ತಮುಮು
ತ್ತದೊಳೊತ್ತಮುಮೆಸೆವ ದೀರ್ಘಮುಂ ಚರಮಕ್ಕ |
ತ್ವದ ವಿಧಿಯುಂ ಧಾತುಗೆ ಭಾ
ವದೊಳಕ್ಕುಂ ಧಾತು ನಿಜದೆ ಭಾವಮದಕ್ಕುಂ || 213 ||

Besides, Abstract nouns are formed by changing the Verbal theme, viz. its penultimate; when ಇ, it may become ಎ; when ಉ, ಒ; when short, long; when ಡು, ಟ. — Also the Verbal theme itself may form an Abstract noun. (cf. Ss. 72; 73; and 170 where such nouns, as it appears, are also called ಕೃತ್ which is the only true appellation. cf. also Ss. 218; 225).

ಪದಚ್ಛೇದಂ.

ಮೊದಲ ಇತ್ವಕ್ಕೆ ಎತ್ವಮುಂ, ಉತ್ವದೊಳ್ ಒತ್ವಮುಂ, ಎಸೆವ ದೀರ್ಘಮುಂ, ಚರಮಕ್ಕೆ ಅತ್ವದ ವಿಧಿಯುಂ ಧಾತುಗೆ ಭಾವದೊಳ್ ಅಕ್ಕುಂ; ಧಾತು ನಿಜದೆ ಭಾವಂ ಅದು ಅಕ್ಕುಂ.

ಅನ್ವಯಂ.

ಧಾತುಗೆ ಭಾವದೊಳ್ ಮೊದಲ ಇತ್ವಕ್ಕೆ ಎತ್ವಮುಂ, ಉತ್ವದೊಳ್ ಒತ್ವಮುಂ, ಎಸೆವ ದೀರ್ಘಮುಂ, ಚರಮಕ್ಕೆ ಅತ್ವದ ವಿಧಿಯುಂ ಅಕ್ಕುಂ; ಧಾತು ಅದು ನಿಜದೆ ಭಾವಂ ಅಕ್ಕುಂ.

ಟೀಕು.

ಧಾತುಗೆ=ಧಾತುಗಳ್ಗೆ; ಭಾವದೊಳ್=ಭಾವಾರ್ಥದಲ್ಲಿ; ಮೊದಲ=ಆದಿಯ; ಇತ್ವಕ್ಕೆ=ಇಕಾ

ರಕ್ಕೆ; ಎತ್ವಮುಂ=ಎಕಾರಮುಂ; ಉತ್ವದೊಳ್=ಉಕಾರದಲ್ಲಿ; ಒತ್ವಮುಂ=ಒಕಾರಮುಂ; ಎಸೆವ= ಒಪ್ಪುವ; ದೀರ್ಘಮುಂ=ದೀರ್ಘವುಂ; ಚರಮಕ್ಕೆ=ಅಂತ್ಯಕ್ಕೆ; ಅತ್ವದ ವಿಧಿಯುಂ=ಅಕಾರದ ವಿಧಿ ಯುಂ; ಅಕ್ಕುಂ=ಅಪ್ಪುದು; ಧಾತು=ಧಾತು; ನಿಜದೆ=ನಿಜದಿಂದೆ; ಭಾವಂ=ಭಾವಾರ್ಥಂ; ಅಕ್ಕುಂ= ಆಗುವದು.

ವೃತ್ತಿ.

ಭಾವದೊಳ್ಧಾತುವಿನ ಮೊದಲಿಕಾರಕ್ಕೆಕಾರಮುಂ ಉತ್ತದೊಳೊತ್ತಮುಂ ಹ್ರಸ್ವಕ್ಕೆ ದೀರ್ಘಮುಮಕ್ಕುಂ; ಧಾತುವಿನ ಕಡೆಯೊಳತ್ತಮಕ್ಕುಂ; ಸಹಜಧಾತುವುಂ ಭಾವಮಕ್ಕುಂ.

ಪ್ರಯೋಗಂ.

ಎತ್ತಕ್ಕೆ—(ಕಿಡು ಇಸು ಧಾತುಗಳ್ಗೆ) ಕೆಡು, ಎಸು. (284; 697. cf. S. 238).

ಒತ್ತಕ್ಕೆ—ತೊಡು. (276; cf. S. 238).

ದೀರ್ಘಕ್ಕೆ—ಈಡು (283); ಬೀಡು (278); ಸೂಡು (275).

ಕಡೆಯಣತ್ತಕ್ಕೆ—ಆಟ (286); ಪಾಟ (287); ನೋಟ (288). (cf. S. 209).

ನಿಜಧಾತುಗೆ—ತಡೆ (356); ನಡೆ (358); ಬಿಸು (698); ಪರ್ಚು (173); ಮರ್ಚು (166); ಉರ್ಕು (70); ಸೊರ್ಕು (71); ದಾಂಟು (226); ಕೂಂಟು (228).

ಸೂತ್ರಂ.

ವೋಲೆಂಬಂತೆಂಬೆರಡುಂ
ಪೋಲಿಸುವೆಡೆಗಾದುವಂತೆವೋಲೆನಲಕ್ಕುಂ |
ವೋಲೊಳ್ ಹ್ರಸ್ವಮುಮಕ್ಕುಂ
ಮೇಲತ್ವಕ್ಕುಂಟು ಬಿಂದು ವತ್ವಂ ಬತ್ವಂ || 214 ||

ವೋಲ್ (Verbal theme used as a noun, the verb being ವೋಲ್, ಪೋಲ್ or ಹೋಲ್, 643) may form a Compound with ಅಂತೆ (ಅಂತೆವೋಲ್), or may become ವೊಲ್; following a word with final ಅ (and forming a kind of Compound) the Bindu is inserted and ವೋಲ್ becomes ಬೋಲ್. (cf. S. 316).

ಪದಚ್ಛೇದಂ.

ವೋಲ್ ಎಂಬ ಅಂತೆ ಎಂಬ ಎರಡುಂ ಪೋಲಿಸುವ ಎಡೆಗೆ ಆದುವು; ಅಂತೆವೋಲ್ ಎನಲ್, ಅಕ್ಕುಂ (p. 73); ವೋಲೊಳ್ ಹ್ರಸ್ವಮುಂ ಅಕ್ಕುಂ; ಮೇಲೆ ಅತ್ವಕ್ಕೆ ಉಂಟು ಬಿಂದು, ವತ್ವಂ ಬತ್ವಂ.

ಅನ್ವಯಂ.

ಪೋಲಿಸುವೆಡೆಗೆ ವೋಲೆಂಬಂತೆಂಬೆರಡುಂ ಆದುವು; ಅಂತೆವೋಲೆನಲ್, ಅಕ್ಕುಂ; ವೋಲೊಳ್ ಹ್ರಸ್ವಮುಂ ಅಕ್ಕುಂ; ಮೇಲೆ ಅತ್ವಕ್ಕೆ ಬಿಂದು ಉಂಟು, ವತ್ವಂ ಬತ್ವಂ.

ಟೀಕು.

ಪೋಲಿಸುವೆಡೆಗೆ=ಪೋಲಿಸುವ ತಾವಿಂಗೆ; ವೋಲೆಂಬಂತೆಂಬೆರಡುಂ=ವೋಲ್ ಎಂಬ ಅಂತೆ

ಎಂಬ ಎರಡುಂ; ಆದುವು=ಸಲುವಳಿಯಾದುವು; ಅಂತೆವೋಲೆನಲ್=ಅಂತೆವೋಲ್ ಎಂದು, ಪೇಳಲ್; ಅಕ್ಕುಂ=ಆಗುವದು; ವೋಲೊಳ್=ವೋಲ್ ಎಂಬುದರಲ್ಲಿ; ಹ್ರಸ್ವಮುಂ=ಹ್ರಸ್ವಮುಂ; ಅಕ್ಕುಂ=ಆಗುವದು; ಮೇಲೆ=ಆ ಮೇಲೆ; ಅತ್ವಕ್ಕೆ=ಅಕಾರಾಂತಶಬ್ದಕ್ಕೆ; ಬಿಂದು=ಸೊನ್ನೆ; ಉಂಟು=ಉಂಟಾಗುವದು; ವತ್ವಂ=ವಕಾರಂ; ಬತ್ವಂ=ಬಕಾರಂ ಆಗುವದು.

ವೃತ್ತಿ.

ವೋಲೆಂಬುದುಮ್ ಅಂತೆ ಎಂಬುದುಮ್ ಉಪಮೆಯೊಳ್ ಪ್ರತ್ಯೇಕಂ ಪತ್ತುಗುಂ; ಅಂತೆವೋಲೆಂಬೆರಡುಮನೊಂದು ಮಾಡಿ ಪೇೞ್ದೊಡಂ ಪುನರುಕ್ತದೋಷಮಿಲ್ಲ; ವೋಲೆಂಬುದು ವಿಕಲ್ಪದಿಂ ಹ್ರಸ್ವಮುಮಕ್ಕುಂ; ಅದಂತಕ್ಕೆ ಮುಂದೆ ವಕಾರಂ ಬಿಂದುವೆರಸುಬಕಾರಮಕ್ಕುಂ.

ಪ್ರಯೋಗಂ.

ಜಲನಿಧಿಯ ವೋಲ್ ಗಭೀರಂ
ಬಲವೈರಿಯ ವೋಲ್ ಸಮಗ್ರವಿಭವಸನಾಥಂ |
ಕುಲಗಿರಿವೋಲ್ ನಿಷ್ಕಂಪಂ
ಬಲಿಯಂತೆವೊಲಧಿಕದಾನಿ ದಾನವಿನೋದಂ || ಕಂದಂ ||

ಗಿರಿಯಂತೆ ಬಿಣ್ಪಿದಂ ಸುರ
ಕರಿಯಂತೆ ಬಲಾಢ್ಯನಬ್ಧಿಯಂತೆ ಗಭೀರಂ | ಕಂದಾರ್ಧಂ |
[ರವಿಸುತನಂತೆವೊಲಧಿಕದಾನಿ]
ಪರಾಕ್ರಮಸಿಂಹದಂತೆವೊ
ಲಾ ಮುನೀಶ್ವರಂ ಶಾಂತಿರಸದ ಕಡಲ ವೋಲಿರ್ದಂ.

ನಿಜ ತೇಜಂ ನೀಳ್ದ ಕನ್ನೆಯ್ದಿಲ ವೊಲಿರೆ [ತನುಚ್ಛಾಯೆಯಿಂ ಬಲಿಯಂತೆ
ವೊಲಧಿಕದಾನಿ ದಾನವಿನೋದಂ]. (ನೀೞ್ದ)
ಇಂದ್ರಂಬೋಲ್ ವಿಭವಯುತಂ
ಚಂದ್ರಂಬೋಲ್ ಕಾಂತಿವಂತನಾದಿತ್ಯಂಬೋಲ್ |
ಸಾಂದ್ರಪರಿಪೂರ್ಣತೇಜನು
ಪೇಂದ್ರಂಬೋಲ್ ನೀತಿನಿಪುಣನಾ ನರನಾಥಂ || ಕಂದಂ ||

ಸೂತ್ರಂ.

The Author mentions two other Affixes:

ಒದವಿರ್ಕುಂ ಸಂಸ್ಕೃತವೆಂ
ನದೆ ಕನ್ನಡವೆನ್ನದಾಯಿಲಪ್ರತ್ಯಯಮುಂ |

ಆಯಿಲ (put as well to Sanṣkṛt as Canarese themes) and ವಳಿ;

ತದು ತಾಮಿವು ಮೊದಲಾಗಱಿ
ವುದನ್ವಿತರ್ ಮಿಕ್ಕ ತದ್ಧಿತಪ್ರತ್ಯಯಮಂ || 215 ||

and for further ones refers his readers to the writings of other grammarians.

## ಪದಚ್ಛೇದಂ.

ಒದವಿ ಇರ್ಕುಂ–ಸಂಸ್ಕೃತಂ ಎನ್ನದೆ ಕನ್ನಡಂ ಎನ್ನದೆ–ಆಯಿಲಪ್ರತ್ಯಯಂ ಅಂತು ಅದು ತಾಂ. ಇವು ಮೊದಲ್ ಆಗಿ ಅಱಿವುದು ಅನ್ವಿತರ್ ಮಿಕ್ಕ ತದ್ಧಿತಪ್ರತ್ಯಯಮಂ.

## ಅನ್ವಯಂ.

ಸಂಸ್ಕೃತಂ ಎನ್ನದೆ ಕನ್ನಡಂ ಎನ್ನದೆ, ಆಯಿಲಪ್ರತ್ಯಯಂ ಅಂತು ಅದು ತಾಂ ಒದವಿರ್ಕುಂ. ಇವು ಮೊದಲ್ ಆಗಿ ಅನ್ವಿತರ್ ಮಿಕ್ಕ ತದ್ಧಿತಪ್ರತ್ಯಯಮಂ ಅಱಿವುದು.

## ಟೀಕು.

ಸಂಸ್ಕೃತವೆನ್ನದೆ=ಸಂಸ್ಕೃತಶಬ್ದವೆನ್ನದೆ; ಕನ್ನಡವೆನ್ನದೆ=ಕರ್ಣಾಟಕ ಶಬ್ದವೆನ್ನದೆ; ಆಯಿಲಪ್ರತ್ಯಯಂ=ಆಯಿಲ ಎಂಬ ಪ್ರತ್ಯಯಂ; ಅಂತು=ಹಾಂಗೆ; ಅದು ತಾಂ=ತಾನದು; ಒದವಿರ್ಕುಂ=ಪ್ರಾಪ್ತಿಸಿರ್ಪುದು; ಇವು ಮೊದಲಾಗಿ=ಇವಾದಿಯಾಗಿ; ಅನ್ವಿತರ್=ವಿದ್ವಾಂಸರ್; ಮಿಕ್ಕ ತದ್ಧಿತಪ್ರತ್ಯಯಮಂ=ಉಳಿದ ತದ್ಧಿತಪ್ರತ್ಯಯಂಗಳಂ; ಅಱಿವುದು=ತಿಳಿವುದು.

## ವೃತ್ತಿ.

ಸಂಸ್ಕೃತವೆಂಬ ಕರ್ಣಾಟಕವೆಂಬ ವಿವರಣೆಯಿಲ್ಲದೆ ಆಯಿಲಪ್ರತ್ಯಯಮೆಲ್ಲಿಯುಂ ಪತ್ತುಗುಂ.

## ಪ್ರಯೋಗಂ.

ಸಂಸ್ಕೃತಕ್ಕೆ, ಆಯಿಲಪ್ರತ್ಯಯಕ್ಕೆ—ಗಾಢಾಯಿಲಂ; ರೇಖಾಯಿಲಂ.

ಕನ್ನಡಕ್ಕೆ—ಓಜಾಯಿಲಂ; ಅಡ್ಡಾಯಿಲಂ; ಗೋಱಾಯಿಲಂ; ಪುಗ್ಗಾಯಿಲಂ.

ಈ ಪೇೞ್ದುವು ಮೊದಲಾಗಿ, ನಡೆವಳಿ ನುಡಿವಳಿ ಸಲ್ಲುಳಿ (ಸಲುವಳಿ) ಎಂಬಂತೆ, ವಳಿಪ್ರತ್ಯಯ ಮುಂತಾದುೞಿದ ಪ್ರತ್ಯಯಂಗಳಂ ಶಾಬ್ದಿಕರಿನನ್ವಿತರಱಿವುದು.

## ಗದ್ಯಂ.

ಇದು ಸಮಸ್ತಶಾಬ್ದಿಕಜನಮನೋಜನಿತಶಬ್ದಸಂದೇಹಶಲ್ಯಚಾರುಚುಂಬಕಾಯಮಾನಾನೂನಕರ್ಣಾಟಕಲಕ್ಷಣಶಿಕ್ಷಾಚಾರ್ಯಸುಕವಿಕೇಶಿರಾಜವಿರಚಿತಮಪ್ಪ ಶಬ್ದಮಣಿದರ್ಪಣದೊಳ್ ತದ್ಧಿತಪ್ರತ್ಯಯನಿರೂಪಣಮೆಂಬ ಚತುರ್ಥಸಂಧಿ ಸಂಪೂರ್ಣಂ.

೪ನೆಯ ಅಧ್ಯಾಯಂ ಸಮಾಪ್ತಂ.



# ೫ನೆಯ ಅಧ್ಯಾಯಂ. V. CHAPTER.

## ಆಖ್ಯಾತಪ್ರಕರಣಂ.

### ON THE CONJUGATION OF VERBS.

ಸೂತ್ರಂ.

ಕ್ರಿಯೆಯರ್ಥದ ಮೂಲಂ ಪ್ರ
ತ್ಯಯರಹಿತಂ ಧಾತುವದನಭಾವಕ್ರಿಯೆಯೊ |
ಳ್ನಿಯತಂ ನಿಶ್ಚಯಿಪುದು ಬುಧ
ಚಯಮಾ ಧಾತುಗೆ ವಿಭಕ್ತಿಯಾಱಾಗಿರ್ಕುಂ || 216 ||

The source (ಮೂಲಂ) for the different manners of action (ಕ್ರಿಯಾರ್ಥಂ; cf. S. 72, note)[1] is that form of the verb (ಆಖ್ಯಾತಂ) which has no affixes (ಪ್ರತ್ಯಯಂ, ವಿಭಕ್ತಿ, cf. S. 35); it is called the Root (ಧಾತು). This is found when the affix ಅಂ of the 3rd Person Masculine Singular of the Negative mood (ಪ್ರತಿಷೇಧಂ; Ss. 71; 222) is removed (cf. S. 230)[2]. — There are 6 Personal Affixes (ಪುರುಷವಿಭಕ್ತಿ, excepting the specific feminine and neuter ones; Ss. 225; 226).

ಪದಚ್ಛೇದಂ.

ಕ್ರಿಯೆಯ ಅರ್ಥದ ಮೂಲಂ ಪ್ರತ್ಯಯರಹಿತಂ ಧಾತು; ಅದಂ ಅಭಾವಕ್ರಿಯೆಯೊಳ್ ನಿಯತಂ ನಿಶ್ಚಯಿಪುದು ಬುಧಚಯಂ; ಆ ಧಾತುಗೆ ವಿಭಕ್ತಿ ಆಱು ಆಗಿ ಇರ್ಕುಂ.

ಅನ್ವಯಂ.

ನಿಯತಂ ಬುಧಚಯಂ ನಿಶ್ಚಯಿಪುದು ಎಂಬುದನ್ವಯಂ.

ಟೀಕು.

ಕ್ರಿಯೆಯ=ಕ್ರಿಯೆಯ; ಅರ್ಥದ=ಅರ್ಥಕ್ಕೆ; ಮೂಲಂ=ಮೊದಲಾದುದು; ಪ್ರತ್ಯಯ=ವಿಭಕ್ತಿಯಿಂದೆ; ರಹಿತಂ=ವಿರಹಿತಮಾದುದು; ಧಾತು=ಧಾತುವೆನಿಸುವದು; ಅದಂ=ಆ ಧಾತುವಂ; ಅಭಾವಕ್ರಿಯೆಯೊಳ್=ಪ್ರತಿಷೇಧದ ಕ್ರಿಯೆಯಲ್ಲಿ; ನಿಯತಂ=ಕಟ್ಟಾಗಿ; ಬುಧಚಯಂ=ವಿದ್ವತ್ಸಮೂಹಂ; ನಿಶ್ಚಯಿಪುದು=ನಿಶ್ಚಯಿಸುವದು; ಆ ಧಾತುಗೆ=ಆ ಧಾತುಗಳ್ಗೆ; ವಿಭಕ್ತಿ=ಪ್ರತ್ಯಯಂ; ಆಱಾಗಿ=ಆಱು ತೆಱನಾಗಿ; ಇರ್ಕುಂ=ಇರ್ಪುದು.

1) ಕ್ರಿಯಾರ್ಥಂ occurs again S. 234. 2) and an elided ಉ restituted.

## ವೃತ್ತಿ.

ಕ್ರಿಯಾರ್ಥದ ಮೂಲಂ ವಿಭಕ್ತಿರಹಿತಮುಂ ಧಾತುವೆಂಬುದು; ಆ ಧಾತುವಂ, ಪ್ರತಿಷೇಧಕ್ರಿಯೆಯಂ ಕಳೆಯೆ, ಕಾಣಲಕ್ಕುಂ; ಆ ಧಾತುಗಳ್ಗೆ ವಿಭಕ್ತಿಗಳಾಱಾಗಿ ರ್ಪುವು.

## ಪ್ರಯೋಗಂ.

ಧಾತು ನಿಶ್ಚಯಕ್ಕೆ—ಮಾಡಿದಂ ಎಂಬ ಕ್ರಿಯೆಗೆ ಪ್ರತಿಷೇಧಮಾಗೆ, ಮಾಡಂ ಎಂದಿರ್ಪುದು; ಅಲ್ಲಿ ಅಮ್ ಎಂಬ ವಿಭಕ್ತಿಯಂ ಕಳೆಯೆ, ಮಾಡು ಎಂದೆ ನಿಲ್ವುದು. ಈ ತೆಱದಿಂ—ಕೂಡು, ನೋಡು, ತೀಡು, ಕಾಡು, ಸುಡು (ಸೂಡು) ಎಂಬಿವಾದಿಯಾಗಱಿವುದು.[1] (cf. S. 221).

## ಸೂತ್ರಂ.

The 6 Affixes for the 3 Persons (ಪುರುಷಂ) are: a., for the 2 first persons (ಉತ್ತಮಪುರುಷಂ): ಎನ್, ಎವು; b., for the 2 second persons (ಮಧ್ಯಮಪುರುಷಂ): ಅಯ್, ಇರ್; c., for the 2 third persons (ಪ್ರಥಮಪುರುಷಂ): ಅಮ್, ಅರ್.

ಅಮರಯಿರೆನೆವುಗಳಕ್ಕುಂ
ಕ್ರಮದೇಕಾನೇಕವಚನದೊಳ್ಪ್ರತ್ಯೇಕಂ |
ಸಮನಿಸೆ ಯುಗಳತೆಯಾಖ್ಯಾ
ತಮಾರ್ಗದೊಳ್ನೆಲಸಿ ನಿಂದ ಪುರುಷತ್ರಯಕಂ || 217 ||

## ಪದಚ್ಛೇದಂ.

ಅಮ್ ಅರ್, ಅಯ್ ಇರ್, ಎನ್ ಎವುಗಳ್ ಅಕ್ಕುಂ ಕ್ರಮದೆ ಏಕಾನೇಕವಚನದೊಳ್, ಪ್ರತ್ಯೇಕಂ ಸಮನಿಸೆ ಯುಗಳತೆ, ಆಖ್ಯಾತಮಾರ್ಗದೊಳ್ ನೆಲಸಿ ನಿಂದ ಪುರುಷತ್ರಯಕಂ.

## ಅನ್ವಯಂ.

ಆಖ್ಯಾತಮಾರ್ಗದೊಳ್ ನೆಲಸಿ ನಿಂದ ಪುರುಷತ್ರಯಕಂ ಕ್ರಮದೆ ಏಕಾನೇಕವಚನದೊಳ್, ಪ್ರತ್ಯೇಕಂ ಯುಗಳತೆ ಸಮನಿಸೆ, ಅಮರಯಿರೆನೆವುಗಳ್ ಅಕ್ಕುಂ.

## ಟೀಕು.

ಆಖ್ಯಾತಮಾರ್ಗದೊಳ್=ಕ್ರಿಯಾಪದಸಿದ್ಧಿಯಂ ಮಾಡುವಾಖ್ಯಾತಮಾರ್ಗದಲ್ಲಿ; ನೆಲಸಿ=ನೆಲೆಗೊಂಡು; ನಿಂದ ಪುರುಷತ್ರಯಕಂ=ನಿಂದ ಪ್ರಥಮಪುರುಷ ಮಧ್ಯಮಪುರುಷ ಉತ್ತಮಪುರುಷಂಗಳೆಂಬ ಪುರುಷತ್ರಯಕ್ಕೆಯುಂ; ಕ್ರಮದೆ=ತರುವಾಯಿಂದೆ; ಏಕಾನೇಕವಚನದೊಳ್=ಏಕವ

1) This does not put in question the existence of original verbal-themes (ಪ್ರಕೃತಿ) ending in half-consonants, for which see the list of verbs in chapter VI, and their being called roots (ಧಾತು; see S. 230).

ಚನ ಬಹುವಚನಂಗಳಲ್ಲಿ; ಪ್ರತ್ಯೇಕಂ=ಬೇಱೆ ಬೇಱೆ; ಯುಗಳತೆ=ಎರಡೆರಡಾಗಿ; ಸಮನಿಸೆ=ಪ್ರಾಪ್ತಿಸೆ; ಅಮರಯಿರೆನೆವುಗಳ್=ಅಮ್ ಅರ್, ಅಯ್ ಇರ್, ಎನ್ ಎವು ಎಂಬಾಱು ವಿಭಕ್ತಿಗಳ್; ಅಕ್ಕುಂ=ಅಪ್ಪುವು.

ವೃತ್ತಿ.

ಆಖ್ಯಾತದೊಳ್ವರ್ತಿಪ ಪ್ರಥಮಮಧ್ಯಮೋತ್ತಮಪುರುಷಂಗಳ್ಗೆ ಅಮ್ ಅರ್, ಅಯ್ ಇರ್, ಎನ್ ಎವು ಎಂಬಾಱು ವಿಭಕ್ತಿಗಳ್ ಪರಿವಿಡಿಯಿಂದೇಕವಚನ ಬಹುವಚನಂಗಳೊಳ್ಪ್ರತ್ಯೇಕಮೆರಡೆರಡೊಂದಾಗಿ ಪತ್ತುವುವು.

ಪ್ರಯೋಗಂ.

ಅಂಗೆ—ಎಸೆದಂ, ಬೆಸೆದಂ, ಒಸೆದಂ, ಎತ್ತಿ ನಡೆದಂ, ನುಡಿದಂ, ಒಗೆದಂ, ಬಗೆದಂ.

ಅರ್ಗೆ—ಆಡಿದರ್, ಪಾಡಿದರ್, ಕಟ್ಟಿದರ್, ಮುಟ್ಟಿದರ್, ಮೆಟ್ಟಿದರ್.

ಅಯ್ಗೆ—ತೆಗೆದಯ್, ಬಗೆದಯ್, ಪೊರ್ದಿದಯ್, ನೋಡಿದಯ್, ಪಾಡಿದಯ್, ಆಡಿದಯ್.

ಇರ್ಗೆ—ಪಾರ್ದುವಿರ್ (ಪೊರ್ದುವಿರ್), ತಿರ್ದುವಿರ್, ನೀಮ್ ಎಳಿಪಿರ್.

ಎನ್ಗೆ—ಅಮರ್ಚಿದೆನ್; ನಿಮಿರ್ಚಿದೆನ್; ಜನೋದಯಂಗಿದೆ ಪೇೞಲೊಡರ್ಚಿದೆನ್; ಬಣ್ಣಿಪೆನ್ ಆನ್ ಜಯದುಂಕರಾಮನಂ.

ಎವುಗೆ—ಕೇಳ್ದೆವು; ಕಂಡೆವು; ಉಸಿರ್ದೆವು; ಆಂಪೆವು, ಕೃಪನಂ ಸಂಗ್ರಾಮದೊಳಾಂಪೆವು ಅರಾತಿಯಂ ಎಂಬಂತೆ.

ಸೂತ್ರಂ.

The Root ಬೆಳೆ (924) is used only literally; when speaking figuratively, ಬಳೆ (925) is used instead. (Shown by their respective abstract nouns; Ss. 210; 213).

ಬೆಳೆಯೆಂಬ ಧಾತು ಸಸ್ಯಾ
ವಳಿಯೊಳ್ಬಳೆಯೆಂಬ ಧಾತು ಮಿಕ್ಕೆಡೆಯೊಳ್ಸಂ |
ಗಳಿಕುಂ ತಿಳಿಯಲ್ಬರ್ಪುದು
ಬೆಳೆಬಳವಿಗಳೆಂಬ ಭಾವವಚನದ್ವಯದೊಳ್ || 218 ||

ಪದಚ್ಛೇದಂ.

ಬೆಳೆ (924) ಎಂಬ ಧಾತು ಸಸ್ಯಾವಳಿಯೊಳ್, ಬಳೆ (925) ಎಂಬ ಧಾತು ಮಿಕ್ಕ ಎಡೆಯೊಳ್ ಸಂಗಳಿಕುಂ; ತಿಳಿಯಲ್ ಬರ್ಪುದು ಬೆಳೆ ಬಳವಿಗಳ್ ಎಂಬ ಭಾವವಚನದ್ವಯದೊಳ್.

ಅನ್ವಯಂ.

ಸಸ್ಯಾವಳಿಯೊಳ್ ಬೆಳೆ ಎಂಬ ಧಾತು, ಮಿಕ್ಕೆಡೆಯೊಳ್ ಬಳೆ ಎಂಬ ಧಾತು ಸಂಗಳಿಕುಂ; ಬೆಳೆ ಬಳವಿಗಳ್ ಎಂಬ ಭಾವವಚನದ್ವಯದೊಳ್ ತಿಳಿಯಲ್ ಬರ್ಪುದು.

ಟೀಕು.

ಸಸ್ಯಾವಳಿಯೊಳ್=ಸಸಿಗಳ ಸಮೂಹದಲ್ಲಿ; ಬೆಳೆಯೆಂಬ ಧಾತು=ಬೆಳೆ ಎಂಬ ಧಾತು; ಸಂಗಳಿಕುಂ=ಬರ್ಪುದು; ಮಿಕ್ಕೆಡೆಯೊಳ್=ಸಸ್ಯಾವಳಿಯಲ್ಲದುಳಿದ ತಾವಿನಲ್ಲಿ; ಬಳೆಯೆಂಬ ಧಾತು=ಬಳೆ ಎಂಬ ಧಾತು ಬರ್ಪುದು; ಬೆಳೆ ಬಳವಿಗಳ್=ಬೆಳೆ ಬಳವಿಗಳೆಂದು; ಎಂಬ ಭಾವವಚನದ್ವಯದೊಳ್=ಎಂಬ ಭಾವವಚನಂಗಳೆರಡಱಲ್ಲಿ; ತಿಳಿಯಲ್ಬರ್ಪುದು=ಅಱಿಯಲ್ಬರ್ಪುದು.

ವೃತ್ತಿ.

ಸಸ್ಯಾದಿತರುಲತಾವಳಿಯ ಪೆರ್ಚುಗೆಯಂ ಪೇೞ್ವ ಧಾತುವಿನೊಳ್ ಬೆಳೆಯೆನಲ್ಕೇೞ್ಕುಂ; ಉೞಿದ ವಸ್ತುವಿನ ಪೆರ್ಚುಗೆಯಂ ಪೇೞ್ವ ಧಾತುವಿನೊಳ್ ಬಳೆಯೆಂದಕ್ಕುಂ. ಬೆಳೆಯೆಂಬ ಧಾತುವಿನ ಭಾವವಚನಂ ಬೆಳೆಯೆಂದುಂ ಬೆಳಸೆಂದುಮಿರ್ಪುದು; ಬಳೆಯೆಂಬ ಧಾತುವಿನ ಭಾವವಚನಂ ಬಳವಿಯೆಂದಿರ್ಪುದು.

ಪ್ರಯೋಗಂ.

ನೆಲ್ಲುಂ ಕೊಂಗುಂ ಮಾವುಂ ಮಲ್ಲಿಗೆಯುಂ ಬೆಳೆವುವಲ್ಲಿ ಭಾವಕ್ಕೆ—
ಬೆಳೆಗಳ್ಕಳನಂ ಪೊಕ್ಕುವು
ಬೆಳಸುಂ ಕುಂದದು ಪಾಳಿನೊಳೆಂದುಂ || ಕಂದಭಾಗಂ ||
ಬಳೆಯೆಂಬುದರ್ಕೆ—ಮೃದುಮುಗ್ಧಾಲಾಪಂ ಬಳೆದಂ.
ಭಾವಕ್ಕೆ—ತನುಜನ ಬಳವಿಯನೆ ನೋಡಿ
ಜನಕಂ ನಲಿದಂ || ಕಂದಭಾಗಂ ||

ಸೂತ್ರಂ.

Also Adjectives, Pronouns, Numerals and other Nouns are conjugated by adding the Personal Affixes (cf. the Denominative Verbs in Sanskṛt. Ss. 77; 78).

ವಿನುತಗುಣವಚನದೊಳ್ಸ
ರ್ವನಾಮದೊಳ್ಸಂಖ್ಯೆಯೊಳ್ಪ್ರವರ್ತಿಪುವಾಖ್ಯಾ |
ತನಿಯುಕ್ತವಿಭಕ್ತಿಗಳವು
ಘನತರಸಂಸ್ಕೃತಗುಣೋಕ್ತಿಯೊಳಮಮರ್ದಿರ್ಕುಂ || 219 ||

ಪದಚ್ಛೇದಂ.

ವಿನುತಗುಣವಚನದೊಳ್ ಸರ್ವನಾಮದೊಳ್ ಸಂಖ್ಯೆಯೊಳ್ ಪ್ರವರ್ತಿಪುವು ಆಖ್ಯಾತನಿಯುಕ್ತವಿಭಕ್ತಿಗಳ್ ಅವು; ಘನತರಸಂಸ್ಕೃತಗುಣೋಕ್ತಿಯೊಳಂ ಅಮರ್ದು ಇರ್ಕುಂ.

ಅನ್ವಯಂ.

ವಿನುತಗುಣವಚನದೊಳ್ ಸರ್ವನಾಮದೊಳ್ ಸಂಖ್ಯೆಯೊಳ್ ಆಖ್ಯಾತನಿಯುಕ್ತವಿಭಕ್ತಿಗಳ್ ಅವು ಪ್ರವರ್ತಿಪುವು; ಘನತರಸಂಸ್ಕೃತಗುಣೋಕ್ತಿಯೊಳಂ ಅಮರ್ದು ಇರ್ಕುಂ.

ಟೀಕು.

ವಿನುತ=ಕೊಂಡಾಡಲ್ಪಟ್ಟ; ಗುಣವಚನದೊಳ್=ಗುಣವಚನಂಗಳಲ್ಲಿ; ಸರ್ವನಾಮದೊಳ್=ಸರ್ವನಾಮಂಗಳಲ್ಲಿ; ಸಂಖ್ಯೆಯೊಳ್=ಸಂಖ್ಯಾವಾಚಿಗಳಲ್ಲಿ; ಆಖ್ಯಾತ=ಆಖ್ಯಾತದಲ್ಲಿ; ನಿಯುಕ್ತ=ಕೂಡಲ್ಪಟ್ಟ; ವಿಭಕ್ತಿಗಳ್=ಪ್ರತ್ಯಯಂಗಳ್; ಅವು=ಅವು; ಪ್ರವರ್ತಿಪುವು=ಪ್ರವರ್ತಿಸುವುವು; ಘನತರ=ದೊಡ್ಡಿತ್ತಾದ; ಸಂಸ್ಕೃತ=ಸಂಸ್ಕೃತದ; ಗುಣೋಕ್ತಿಯೊಳಂ=ಗುಣವಚನಂಗಳಲ್ಲಿಯುಂ; ಅಮರ್ದು=ಪೊರ್ದುಗೆಯಾಗಿ; ಇರ್ಕುಂ=ಇರ್ಪುವು.

ವೃತ್ತಿ.

ಗುವಚನದೊಳಂ ಸರ್ವನಾಮದೊಳಂ ಸಂಖ್ಯೆಯೊಳಂ ಸಂಸ್ಕೃತಗುಣೋಕ್ತಿಯೊಳಮ್ ಆಖ್ಯಾತವಿಭಕ್ತಿಗಳ್ವರ್ತಿಸುಗುಂ.

ಪ್ರಯೋಗಂ.

ಕನ್ನಡಗುಣವಚನಕ್ಕೆ—ಒಳ್ಳಿದಂ, ಒಳ್ಳಿದರ್; ಒಳ್ಳಿದಯ್, ಒಳ್ಳಿದಿರ್, ಒಳ್ಳಿದರಿರ್ (S. 220); ಒಳ್ಳಿದೆನ್, ಒಳ್ಳಿದೆವು, ಒಳ್ಳಿದರೆವು (S. 220).

ಸರ್ವನಾಮಕ್ಕೆ—ಪೆಱಂ, ಪೆಱರ್; ಪೆಱಯ್, ಪೆಱಿರ್, ಪೆಱರಿರ್; ಪೆಱೆನ್, ಪೆಱನೆನ್ (S. 220), ಪೆಱೆವು, ಪೆಱರೆವು.

ಸಂಖ್ಯೆಗೆ—ಒರ್ವಂ, ಒರ್ವರ್; ಒರ್ವಯ್, ಒರ್ವಿರ್, ಒರ್ವರಿರ್; ಒರ್ವೆನ್, ಒರ್ವನೆನ್ (S. 220); ಒರ್ವೆವು, ಒರ್ವರೆವು.

ಸಂಸ್ಕೃತಗುಣವಚನಕ್ಕೆ—ಉದ್ಧತಂ, ಉದ್ಧತರ್; ಉದ್ಧತಯ್, ಉದ್ಧತರಿರ್ (S. 220); ಉದ್ಧತನೆನ್, ಉದತರೆವು (S. 220).

ಸಮುಚ್ಚಯದಿಂ ಗುಣವಚನಮಲ್ಲದಲ್ಲಿಯುಮುಂಟು (see Introduction, v. 2)—ಕವಿಕೇಶವನೆಂ; ಮಲ್ಲಿಕಾರ್ಜುನಸುತನೆಂ; ದೌಹಿತ್ರನೆಂ; ಪೆಂಡತಿಯೆಂ.

ಸೂತ್ರಂ.

ಆದೇಶಮಾಗಿ ಮುಂಗ
ಳ್ಗಾದರುವದು ನಿಲ್ಕುಮಿರ್ಗಮೆವುಗಂ ಪೂರ್ವ |
ಕ್ಕಾದಿಗೆ ನತ್ತಮದೆನ್ಪರ
ಮಾದೊಡೆ ಕೆಲರಿಂದೆ ಬಿಂದುವೆವುವಿನ ವತ್ತಂ || 220 ||

Regarding S. 219 it is to be remarked that before the Affixes ಇರ್ and ಎವು the syllable ಅರ್ (S. 98) may be inserted in Canarese words; when Sanskṛt Adjectives (or Nouns) are conjugated, this must be done. Further, before ಎನ್ the letter ನ (ನ್) may be inserted.—The ಎವು (1st Person Plural) may become ಎಂ (i. e. like the 1st Person Singular).

## ಪದಚ್ಛೇದಂ.

ಆದೇಶಂ ಆಗಿ ಮುಂಗಳ್ಗೆ ಆದ ಅರು ಅದು ನಿಲ್ಕುಂ ಇರ್ಗಂ ಎವುಗಂ ಪೂರ್ವಕ್ಕೆ; ಆದಿಗೆ ನತ್ವಂ ಅದು ಎನ್ ಪರಂ ಆದೊಡೆ; ಕೆಲರಿಂದೆ ಬಿಂದು ಎವುವಿನ ವತ್ವಂ.

## ಅನ್ವಯಂ.

ಮುಂಗಳ್ಗೆ ಆದೇಶಂ ಆಗಿ ಆದ ಅರು ಅದು ಇರ್ಗಂ ಎವುಗಂ ಪೂರ್ವಕ್ಕೆ ನಿಲ್ಕುಂ; ಎನ್ ಅದು ಪರಂ ಆದೊಡೆ ಆದಿಗೆ ನತ್ವಂ; ಕೆಲರಿಂದೆ ಎವುವಿನ ವತ್ವಂ ಬಿಂದು.

## ಟೀಕು.

ಮುಂಗಳ್ಗೆ=ಮುಂನಿನ ಗಳಾಗಮಕ್ಕೆ; ಆದೇಶಮಾಗಿ=ಆದೇಶವಾಗಿ; ಆದರು=ಆದ ಅರು (ಅರ್) ಆಗಮಂ; ಅದು=ಅದು; ಇರ್ಗಂ=ಇರೆಂಬಾಖ್ಯಾತವಿಭಕ್ತಿಗಂ; ಎವುಗಂ=ಎವು ಎಂಬಾಖ್ಯಾತವಿಭಕ್ತಿಗಂ; ಪೂರ್ವಕ್ಕೆ=ಮೊದಲ್ಗೆ; ನಿಲ್ಕುಂ=ಆಗಮವಾಗಿ ನಿಲ್ವುದು; ಎನ್=ಎನ್ ಎಂಬುದು; ಅದು=ಅದು; ಪರಮಾದೊಡೆ=ಪರವಾದೊಡೆ; ಆದಿಗೆ=ಮೊದಲ್ಗೆ; ನತ್ವಂ=ನಕಾರವಪ್ಪುದು; ಕೆಲರಿಂದೆ=ಕೆಲಂಬರಿಂದೆ; ಎವುವಿನ=ಎವು ಎಂಬ ವಿಭಕ್ತಿಯ; ವತ್ವಂ=ವಕಾರಂ; ಬಿಂದು=ಸೊನ್ನೆಯಾಗುವದು.

## ವೃತ್ತಿ.

ಪುರುಷಸ್ತ್ರೀವಿಷಯದೊಳ್ಬಹುವಚನದ ಗಳಾದೇಶಮಾಗಿ ಬಂದ ಅರ್ ಎಂಬುದು ಮಧ್ಯಮಪುರುಷದ ಇರ್ ಎಂಬುದಱಾದಿಯೊಳಮ್ ಉತ್ತಮಪುರುಷದೆವುವಿನಾದಿಯೊಳಂ ಕನ್ನಡದೊಳ್ವಿಕಲ್ಪದಿಂ ಪತ್ತುಗುಂ; ಸಂಸ್ಕೃತಗುಣವಚನದೊಳ್ನಿತ್ಯಂ; ಉತ್ತಮಪುರುಷದೆನ್ ಎಂಬುದಱಾದಿಗೆ ನತ್ವಮಕ್ಕುಂ.—ಎವುವಿನ ಉಕಾರಂ ಕೆಲರಿಂ ಬಿಂದುವಕ್ಕುಂ.

## ಪ್ರಯೋಗಂ.

ಕನ್ನಡದೊಳ್ ವಿಕಲ್ಪದ ಅರ್ಗೆ—ಕೂರಿದರಿರ್, ಕೂರಿದಿರ್; ನೇರಿದರಿರ್ ಕೂಡಿದವರೊಳೆನೆ, ನೇರಿದಿರ್ [M. B. ನೇಱಿದಿರ್]; ಪಿರಿಯರೆವು, ಪಿರಿಯೆವು, ಪಿರಿಯರೆಂದು ಧಿಕ್ಕರಿಸಿ ಬಯ್ವುದು ತಕ್ಕುದೆ (—ದಂತಕ್ಕುದೆ).

ಸಂಸ್ಕೃತದೊಳ್ ನಿತ್ಯದ ಅರ್ಗೆ—ವೃದ್ಧರಿರ್, ಆಪ್ತರಿರ್, ಅತಿಬಲರಿರ್; ನಯವಿದರೆವು, ಸಹೋದರರರೆಂದೊಸೆದಾಳ್ವುದು ಭೃತ್ಯವಿತಾನಮುಂ.

ನಕಾರಕ್ಕೆ—ಪಿರಿಯನೆನ್, ಅಸಿಯನೆನ್, ಆಂ ಪೆಱನೆನ್, ಆನ್ ಓರ್ವನೆನೊರ್ವನೆಂ ಸಮರಕೇಳಿಯೊಳ್, ಅತಿಚದುರನೆನ್, ಕಳಾಪಂಡಿತನೆನ್, ಅವದಾನನೆನ್.

ಎವುವಿನೊಳ್ ಬಿಂದುವಿನ ವಿಕಲ್ಪಕ್ಕೆ—ನೋಡುವೆವು, ನೋಡುವೆಂ; ಪಾಡುವೆವು, ಪಾಡುವೆಂ; ಅವರಾರುಮೆನ್ನಾಳ್ದನೆಡಱನಾಮೆ ತಿರ್ದುವೆಂ. ಏಕವಚನದೆಂಗಾ

ದ ಬಿಂದುವುಮ್ ಆ ಬಹುವಚನದೆವುಗಾದ ಬಿಂದುವುಂ ತವ್ಮೊಳೇಕರೂಪವಾಗಿ ಪರ್ವು; ಅವಂ ಕ್ರಮಣಾದಿನಱಿವುದು—ಕೋೞಂಟೆಯುಂ ಪತ್ತುವೆಂ; ವ್ಯಾಕರಣಮನೆಲ್ಲರುಂ ಕೇಳ್ವೆಂ ತಿಳಿವಿನಂ ಎಂಬಂತೆ.

ಸೂತ್ರಂ.

Of the 3 Tense-augments (ಕಾಲಾಗಮಂ) ದ is used for the Past (Imperfect), ದಪ for the Present, and ವ for the Future. — Verbs ending in ಉ (see the list of verbs in Chapter VI. and S. 216) insert ಇತ್ (ಇ) before ದ and ದಪ.

ದದಪವಕಾರಂಗಳ್ತ
ಪ್ಪದೆ ಕಾಲತ್ರಯವಿಭಕ್ತಿಮೂಲದೊಳಕ್ಕುಂ |
ದದಪಾದಿಗಿದಾಗಮಮ
ಪ್ಪುದು ವತ್ವಕ್ಕಿಲ್ಲದುಂ ತ್ರಿವಚನಾನುಗತಂ || 221 ||

ಪದಚ್ಛೇದಂ.

ದ || ದಪ || ವಕಾರಂಗಳ್, ತಪ್ಪದೆ, ಕಾಲತ್ರಯವಿಭಕ್ತಿಮೂಲದೊಳ್ ಅಕ್ಕುಂ; ದದಪಾದಿಗೆ ಇದಾಗಮಂ ಅಪ್ಪುದು; ವತ್ವಕ್ಕೆ ಇಲ್ಲ; ಅದುಂ ತ್ರಿವಚನಾನುಗತಂ.

ಅನ್ವಯಂ.

ಕಾಲತ್ರಯವಿಭಕ್ತಿಮೂಲದೊಳ್, ತಪ್ಪದೆ, ದ || ದಪ || ವಕಾರಂಗಳ್ ಅಕ್ಕುಂ; ದದಪಾದಿಗೆ ಇದಾಗಮಂ ಅಪ್ಪುದು; ವತ್ವಕ್ಕೆ ಇಲ್ಲ; ಅದುಂ ತ್ರಿವಚನಾನುಗತಂ.

ಟೀಕು.

ಕಾಲತ್ರಯವಿಭಕ್ತಿಮೂಲದೊಳ್=ಭೂತಕಾಲ ವರ್ತಮಾನಕಾಲ ಭವಿಷ್ಯತ್ಕಾಲಂಗಳೆಂಬ ಕಾಲತ್ರಯದ ವಿಭಕ್ತಿಗಳ ಮೊದಲಲ್ಲಿ; ತಪ್ಪದೆ=ತೊಲಗದೆ; ದದಪವಕಾರಂಗಳ್=ದಕಾರ ದಪಕಾರ ವಕಾರಂಗಳ್; ಅಕ್ಕುಂ=ಅಪ್ಪುವು; ದದಪಾದಿಗೆ=ದಕಾರ ದಪಕಾರಂಗಳ ಮೊದಲ್ಗೆ; ಇದಾಗಮಂ=ಇತ್ ಎಂಬಾಗಮಂ; ಅಪ್ಪುದು=ಉಕಾರಾಂತಧಾತುವಿಂಗೆ ಆಗುವದು; ವತ್ವಕ್ಕೆ=ಭವಿಷ್ಯಂತಿಯ ವಕಾರಕ್ಕೆ; ಇಲ್ಲ=ಇದಾಗಮಂ ಬಾರದು; ಅದುಂ=ಆ ಇದಾಗಮವುಂ; ತ್ರಿವಚನ=ಏಕವಚನ ದ್ವಿವಚನ ಬಹುವಚನಂಗಳೆಂಬ ತ್ರಿವಚನಂಗಳಲ್ಲಿ; ಅನುಗತಂ=ಎಯ್ದಲ್ಪಡುವದು.

ವಿಚಾರಂ.

ಉಕಾರಾಂತಧಾತುಗಳ್ಗೆ ಇದಾಗಮಂ ಬರ್ಪುದು.

ವೃತ್ತಿ.

ದ ದಪ ವ ಎಂಬಾಗಮಂಗಳ್ ಪೋದ ವರ್ತಿಪ ಬರ್ಪ ಕಾಲತ್ರಯಂಗಳ್ಗೆ ಸೂಚಕಂಗಳಾಗಿ, ಪುರುಷತ್ರಯಂಗಳ ವಿಭಕ್ತಿಗಳ ಮೊದಲೊಳಪ್ಪುವು; ದ ದಪಂಗಳ ಪೆಱಗೆ, ವಚನತ್ರಯದ ಮೇರೆಯಿಲ್ಲದೆ, ಉಕಾರಾಂತಕ್ಕೆ ಇದಾಗಮಮಕ್ಕುಂ; ಭವಿ

ಷ್ಯಂತಿಯ ವಕಾರಕ್ಕೆಯುಮ್ ಎಕಾರಾಂತ ಇಕಾರಾಂತ ವ್ಯಂಜನಾಂತಂಗಳ್ಗೆ ಪರ ವಾದ ದ ದಪಂಗಳ್ಗೆಯುಮ್ ಇದಾಗಮಮಿಲ್ಲ.

ಪ್ರಯೋಗಂ.

ದಕಾರಕ್ಕೆ—ಪಡೆದಂ, ಗೆಲ್ದಂ, ಇಡಿದಂ, ಕೇಳ್ದಂ.

ದಪಕ್ಕೆ—ಎತ್ತಿದಪಂ, ಒತ್ತಿದಪಂ, ತಂದಪಂ, ಮಾಡಿದಪಂ.

ವಕಾರಕ್ಕೆ—ಕುಡುವಂ, ಉಡುವಂ, ಪಿಡಿವಂ.

ಉಕಾರಾಂತಕ್ಕೆ ಇದಾಗಮಮುಮಪ್ಪುದರ್ಕೆ—ನೋಡಿದಂ, ಬೇಡಿದಂ, ಸಾರಿಸಿದಂ, ಅಂಜಿಸಿದಂ ಮೊದಲಾದುವು; ಮಾಡಿದಪಂ, ಎತ್ತಿದಪಂ.

ಭವಿಷ್ಯಂತಿಯ ವಕಾರಕ್ಕೆಯುಂ ಎಕಾರಾಂತ ಇಕಾರಾಂತ ವ್ಯಂಜನಾಂತಂಗಳ್ಗೆ ಇದಾಗಮಮಿಲ್ಲದುದರ್ಕೆ—ಬಿರಿವಂ, ಮುಚ್ಚುವಂ, ನಡೆವಂ, ಮಾಡುವಂ;—ಪಡೆದಂ, ಪಡೆದಪಂ; ಸಿಡಿದಂ, ಸಿಡಿದಪಂ; ಕಟಿಲ್ದಂ, ಕಟಿಲ್ದಪಂ.

ಸೂತ್ರಂ.

The Negative Mood with the Personal affixes (S.216) is used for all tenses, also for the Past. (cf. Ss. 216; 238; 244; 245).

ಪರಿಭಾವಿಸೆ ಕಾಲತ್ರಯ
ಪರಿಣಾಮಿಗಳೆನಿಸಿ ನೆಗೞ್ದ[1] ಮೂಱುಂ ಕ್ರಿಯೆಯೊಳ್ |
ನಿರುತಂ ಪ್ರತಿಷೇಧಕ್ರಿಯೆ
ಬರೆ ಭೂತಾರ್ಥದೊಳೆ ಸಲ್ವುದೆಂಬರ್ಪಿರಿಯರ್ || 222 ||

ಪದಚ್ಛೇದಂ.

ಪರಿಭಾವಿಸೆ, ಕಾಲತ್ರಯಪರಿಣಾಮಿಗಳ್ ಎನಿಸಿ ನೆಗೞ್ದ ಮೂಱುಂ ಕ್ರಿಯೆಯೊಳ್ ನಿರುತಂ ಪ್ರತಿಷೇಧಕ್ರಿಯೆ ಬರೆ, ಭೂತಾರ್ಥದೊಳೆ ಸಲ್ವುದು ಎಂಬರ್ ಪಿರಿಯರ್.

ಅನ್ವಯಂ.

ಪ್ರತಿಷೇಧಕ್ರಿಯೆ ಬರೆ, ಪಿರಿಯರ್ ಭೂತಾರ್ಥದೊಳೆ ಸಲ್ವುದು ಎಂಬರ್. ಉಳಿದದು ಯಥಾನ್ವಯಂ.

ಟೀಕು.

ಪರಿಭಾವಿಸೆ=ವಿಚಾರಿಸೆ; ಕಾಲತ್ರಯದ=ಕಾಲತ್ರಯದಲ್ಲಿ; ಪರಿಣಾಮಿಗಳ್=ಪರಿಣಾಮವುಳ್ಳವು; ಎನಿಸಿ=ಎನಿಸಿ; ನೆಗೞ್ದ ಮೂಱುಂ ಕ್ರಿಯೆಯೊಳ್=ಪ್ರಸಿದ್ಧವಡೆದ ಮೂಱು ಕ್ರಿಯೆಗಳಲ್ಲಿ; ನಿರುತಂ=ನಿಶ್ಚಯವಾಗಿ; ಪ್ರತಿಷೇಧಕ್ರಿಯೆ=ಪ್ರತಿಷೇಧಕ್ರಿಯೆ; ಬರೆ=ಬಂದೊಡೆ; ಪಿರಿಯರ್=ವಿದ್ವಾಂಸರ್; ಭೂತಾರ್ಥದೊಳೆ=ಭೂತಕಾಲದರ್ಥದಲ್ಲಿಯೆ; ಸಲ್ವುದು=ಸಲ್ವುದೆಂದು; ಎಂಬರ್=ಪೇಳ್ವರ್.

1) ಶಿಥಿಲತ್ವಂ.

ವೃತ್ತಿ.

ಕಾಲತ್ರಯಂಗಳಂ ಪೇಳ್ವ ಮೂಱು ಕ್ರಿಯಾಪದಂಗಳಲ್ಲಿ ಪ್ರತಿಷೇಧಕ್ರಿಯೆ ಬರೆ, ಭೂತವತಿಯಾಗಿಯೇ ಸಲ್ವುದು.

ಪ್ರಯೋಗಂ.

ಮಾಡಿದನೆಂಬುದರ್ಕೆ ಮಾಡಂ, ಮಾಡಿದಪನೆಂಬುದರ್ಕಂ ಮಾಡಂ, ಮಾಡುವನೆಂಬುದರ್ಕಂ ಮಾಡಂ.

ಸೂತ್ರಂ.

ಪುರುಷತ್ರಯಮುಂ ಸ್ವಾರ್ಥೋ
ಚ್ಚರಿತಂಗಳ್ ಯುಗಪದುಕ್ತಿಗುತ್ತಮಪುರುಷಂ |
ಪರಮದನುೞಿದಿರೆ ಮಧ್ಯಮ
ಪುರುಷಂ ಕ್ರಮಗಣನಮಿರೆಯುಮೊಲ್ದಂತಿರೆಯುಂ || 223 ||

Each of the 3 Persons, when by itself with its respective Pronoun (S. 224), is quite independent. When, in a sentence, all the 3 Persons (as personal pronouns) are made the Subject, the Predicate stands in the 1st Person Plural; when the 2nd and 3rd Persons only form the Subject, the Predicate is put in the 2nd Person Plural (cf. Ss. 141; 142).

ಪದಚ್ಛೇದಂ.

ಪುರುಷತ್ರಯಮುಂ ಸ್ವಾರ್ಥೋಚ್ಚರಿತಂಗಳ್; ಯುಗಪದುಕ್ತಿಗೆ ಉತ್ತಮಪುರುಷಂ ಪರಂ; ಅದಂ ಉೞಿದು ಇರೆ, ಮಧ್ಯಮಪುರುಷಂ; ಕ್ರಮಗಣನಂ ಇರೆಯುಂ ಒಲ್ದ ಅಂತೆ ಇರೆಯುಂ.

ಅನ್ವಯಂ.

ಪುರುಷತ್ರಯಮುಂ ಸ್ವಾರ್ಥೋಚ್ಚರಿತಂಗಳ್; ಕ್ರಮಗಣನಂ ಇರೆಯುಂ ಒಲ್ದಂತೆ ಇರೆಯುಂ, ಯುಗಪದುಕ್ತಿಗೆ ಉತ್ತಮಪುರುಷಂ ಪರಂ; ಅದಂ ಉೞಿದು ಇರೆ, ಮಧ್ಯಮಪುರುಷಂ.

ಟೀಕು.

ಪುರುಷತ್ರಯಮುಂ=ಪ್ರಥಮಮಧ್ಯಮೋತ್ತಮಂಗಳೆಂಬ ಪುರುಷತ್ರಯಮುಂ; ಸ್ವಾರ್ಥೋಚ್ಚರಿತಂಗಳ್=ಸ್ವತಂತ್ರಂಗಳಾಗಿ ತಮ್ಮರ್ಥದಲ್ಲಿ ಉಚ್ಚರಿಸಲ್ಪಟ್ಟುವು; ಕ್ರಮಗಣನಂ=ಕ್ರಮದಿಂ ಗಣನೆಯಾಗಿ; ಇರೆಯುಂ=ಇರ್ದೊಡೆಯುಂ; ಒಲ್ದಂತೆ=ಪಲ್ಲಟವಾಗಿ, ಇಚ್ಛೆ ಬಂದಂತೆ; ಇರೆಯುಂ=ಇರ್ದೊಡೆಯುಂ; ಯುಗಪದುಕ್ತಿಗೆ=ಒಂದಾಗಿ ನುಡಿಯುವದರ್ಕೆ; ಉತ್ತಮಪುರುಷಂ=ಉತ್ತಮಪುರುಷಂ; ಪರಂ=ಮುಖ್ಯಂ; ಅದಂ=ಆ ಉತ್ತಮಪುರುಷಮಂ; ಉೞಿದಿರೆ=ಬಿಟ್ಟಿರೆ; ಮಧ್ಯಮಪುರುಷಂ=ಮಧ್ಯಮಪುರುಷಂ ಮುಖ್ಯವಾಗುವದು.

ವೃತ್ತಿ.

ಪುರುಷತ್ರಯಂಗಳ್ ತಂಮರ್ಥಂಗಳೊಳ್ ಸ್ವತಂತ್ರಂಗಳ್; ಪುರುಷತ್ರಯಂ ಕ್ರಮದಿನಿರ್ದೊಡಂ ವ್ಯತ್ಯಯಮಾಗಿರ್ದೊಡಂ ಕೂಡಿ ನುಡಿವೆಡೆಯೊಳ್ ಉತ್ತಮ

ಪುರುಷಕ್ಕೆ ಮುಖ್ಯತ್ವಂ; ಉತ್ತಮಪುರುಷಂ ಕಳೆದುೞಿದ ಪ್ರಥಮಮಧ್ಯಮಪುರುಷಂಗಳನುಕ್ರಮದಿನಿರ್ದೊಡಂ ವ್ಯತ್ಯಯದಿನಿರ್ದೊಡಂ ಮಧ್ಯಮಪುರುಷಕ್ಕೆ ಮುಖ್ಯತ್ವಂ; ಯುಗಪದುಕ್ತಿಯೊಳ್ಪ್ರಥಮಪುರುಷಕ್ಕೆ ಮುಖ್ಯತ್ವಮಿಲ್ಲ.

ಪ್ರಯೋಗಂ.

ಸ್ವತಂತ್ರಾರ್ಥಕ್ಕೆ—ತಾನಿರ್ದಂ, ತಾಮಿರ್ದರ್; ನೀನ್ ಕಂಡಯ್, ನೀಂ ಕಂಡಿರ್; ಆನ್ ಕೇಳ್ದೆಂ, ಆಂ ಕೇಳೆವು.

ಉತ್ತಮಪುರುಷಮುಖ್ಯತ್ವಕ್ಕೆ—ಆತನುಂ ನೀನುಂ ಆನುಂ ಪೊಱಗಾಗಿರ್ದೆವು ಅವನಿಪತಿಗೆ ಪಿಶುಣರಿಂ.

ವ್ಯತ್ಯಯಕ್ಕೆ—ನೀನುಮಾತನುಮಾನುಂ ಮಣಿಕೂಟನಗರಕ್ಕೆ ಪೋಪೆವು; ಆತನುಮಾನುಂ ನೀನುಂ ಕಜ್ಜದ ತೆಱವನಱಿದು ಪೇೞ್ದೆವು; ಆನುಂ ನೀನುಮಾತನುಂ ಬೆಸಕೆಯ್ದೆವು.

ಮಧ್ಯಮಪುರುಷಮುಖ್ಯತ್ವಕ್ಕೆ—ಆತನುಂ ನೀನುಂ ಕೂಡಿದಿರಪ್ಪೊಡೆ ಆಹವಕ್ಕೆ ಕಿಚ್ಚುಂ ಗಾಳಿಯುಂ ಕೂಡಿದಂತೆ.

ವ್ಯತ್ಯಯಕ್ಕೆ—ನಾಳಿನ ದಿನದೊಳ್ನೀನುಮಾತನುಂ ಕೂಡಿದಪಿರ್.

ಸೂತ್ರಂ.

ತಾಂ, ನೀಂ, ಆಂ (cf. Ss. 104; 161; 220) are the forms of the 3 Personal Pronouns, for the Singular and Plural, on which the 3 Personal Affixes depend.

ತಿಳಿ ತಾಂ ನೀನಾನೆಂಬ
ರ್ಥಳಂಬಿಗಳ್ಪ್ರಥಮಮಧ್ಯಮೋತ್ತಮಪುರುಷಂ |
ಗಳವೇಕವಚನಮೊರ್ವನ
ಬಳಕೆಗೆ ಬಹುವಚನಮೆಲ್ಲರಂ ಪೇೞ್ವೆಡೆಯೊಳ್ || 224 ||

ಪದಚ್ಛೇದಂ.

ತಿಳಿ, ತಾಂ ನೀಂ ಆಂ ಎಂಬ ಅರ್ಥಳಂಬಿಗಳ್ ಪ್ರಥಮಮಧ್ಯಮೋತ್ತಮಪುರುಷಂಗಳ್; ಅವು ಏಕವಚನಂ ಒರ್ವನ ಬಳಕೆಗೆ, ಬಹುವಚನಂ ಎಲ್ಲರಂ ಪೇೞ್ವೆಡೆಯೊಳ್.

ಅನ್ವಯಂ.

ತಾಂ ನೀಂ ಆಂ ಎಂಬರ್ಥಳಂಬಿಗಳ್ ಪ್ರಥಮಮಧ್ಯಮೋತ್ತಮಪುರುಷಂಗಳ್, ತಿಳಿ! ಅವು ಒರ್ವನ ಬಳಕೆಗೆ ಏಕವಚನಂ, ಎಲ್ಲರಂ ಪೇೞ್ವೆಡೆಯೊಳ್ ಬಹುವಚನಂ.

ಟೀಕು.

ತಾಂ=ತಾನೆಂದು; ನೀಂ=ನೀನೆಂದು; ಆಂ=ಆನೆಂದು; ಎಂಬ=ಎಂಬ; ಅರ್ಥ=ಅರ್ಥದಲ್ಲಿ; ಳಂ

ಬಿಗಳ್=ಆಲಂಬಮುಳ್ಳ ಶಬ್ದಂಗಳ್; ಪ್ರಥಮಮಧ್ಯಮೋತ್ತಮಪುರುಷಂಗಳ್=ಪ್ರಥಮಪುರುಷ ಮಧ್ಯಮಪುರುಷ ಉತ್ತಮಪುರುಷಂಗಳೆಂದು; ತಿಳಿ=ಅಱಿ; ಅವು=ಆ ಪುರುಷತ್ರಯಂಗಳ್; ಒರ್ವನ=ಒರ್ವನ; ಬಳಕೆಗೆ=ಹೇಳುವದಕ್ಕೆ; ಏಕವಚನಂ=ಏಕವಚನಂ ಬರ್ಪುದು; ಎಲ್ಲರಂ=ಸರ್ವರಂ; ಪೇೞ್ವೆಡೆಯೊಳ್=ಹೇಳ್ವ ತಾವಿನಲ್ಲಿ; ಬಹುವಚನಂ=ಬಹುವಚನಂ ಬರ್ಪುದು.

## ವೃತ್ತಿ.

ತಾನ್ ನೀನ್ ಆನ್ ಎಂಬರ್ಥಮನಾಶ್ರಯಿಸಿ, ಪುರುಷತ್ರಯಂಗಳಿರ್ಪುವು; ಅಲ್ಲಿಯೊರ್ವನಂ ಪೇೞ್ವೆಡೆಯೊಳೇಕವಚನಮಕ್ಕುಂ, ಪಲಂಬರಂ ಪೇೞ್ವೆಡೆಯೊಳ್ಬಹುವಚನಮಕ್ಕುಂ.

## ಪ್ರಯೋಗಂ.

ತಾಂ ಎಂಬುದರ್ಕೆ—ತಾನೆಚ್ಚಂ ಪೊಚ್ಚಮಲ್ಲದರಿವಾಹಿನಿಯಂ; ತಾಂ ಸವ್ಯಸಾಚಿಯೊಳೆ ತೊಡರ್ದಿಱಿಯರ್.

ನೀಂ ಎಂಬುದರ್ಕೆ—ರಣಕ್ಕೆನ್ನಿಂದೆ ನೀಂ ಮುಂಚಿದಯ್; ನೀಂ ಪೇೞ್ವಿರ್; ನೀಂ ಬಂದಿರ್; ಮೊನೆಯೊಳ್ಸೂೞ್ಪಡವಾಯ್ತು, ನೀಮಿರೆ ಮತ್ತವಾರಣಮುಂ ತಾರಕಚಕ್ರವರ್ತಿಗೆ; ದಿವಾಸುರಮಂ ಕೇಳಿರೆ ದೇವಾ (s. S. 125).

ಆಂ ಎಂಬುದರ್ಕೆ—

ಆನಱಿವೆಂ ಪ್ರಥೆಯಱಿವಳ್ [ಪೃಥೆ]
ದಾನವರಿಪುವಱಿವನರ್ಕನಱಿವಂ ದಿವ್ಯ |
ಜ್ಞಾನಿಸಹದೇವನಱಿವಂ
ನೀನಾರ್ಗೆನ್ದಾರುಮಱಿಯರಂಗಾಧಿಪತಿ || ಕಂದಂ; the last line with a metrical defect; ಕೀ might correct it ||
ಆಮಱಿವೊಡಮುಸಿರಲಮ್ಮೆವಾಳ್ದನ [-ಲಮ್ಮೆನಾಳ್ದನ] ಗತಿಯಂ.

## ಸೂತ್ರಂ.

ಉದುವುವುವೆಂಬಾದೇಶಂ
ಪುದಿದಿರ್ಕುಂ ಪ್ರಥಮಪುರುಷದೇಕಬಹುತ್ವ |
ಕ್ಕೊದವಿರ್ದ ನಪುಂಸಕಲಿಂ
ಗದೊಳುದು ಭಾವಾರ್ಥದಲ್ಲಿಯುಂ ಸಂಗಳಿಕುಂ || 225 ||

For the 3rd Person Singular and Plural the Neuter personal affixes are: ಉದು, ಉವು.—The form with ಉದು is used also as an Abstract noun (cf. Ss. 213; 227), and in the sense of the Imperative.

## ಪದಚ್ಛೇದಂ.

ಉದು ಉವು ಎಂಬ ಆದೇಶಂ ಪುದಿದು ಇರ್ಕುಂ ಪ್ರಥಮಪುರುಷದ ಏಕಬಹುತ್ವಕ್ಕೆ ಒದವಿ ಇರ್ದ ನಪುಂಸಕಲಿಂಗದೊಳ್; ಉದು ಭಾವಾರ್ಥದಲ್ಲಿಯುಂ ಸಂಗಳಿಕುಂ.

## ಅನ್ವಯಂ.

ಒದವಿ ಇರ್ದ ನಪುಂಸಕಲಿಂಗದೊಳ್ ಪ್ರಥಮಪುರುಷದ ಏಕಬಹುತ್ವಕ್ಕೆ ಉದು ಉವು ಎಂಬಾದೇಶಂ ಪುದಿದು ಇರ್ಕುಂ; ಉದು ಭಾವಾರ್ಥದಲ್ಲಿಯುಂ ಸಂಗಳಿಕುಂ.

## ಟೀಕು.

ಒದವಿರ್ದ=ಪ್ರಾಪ್ತಿಸಿ ಇರ್ದ; ನಪುಂಸಕಲಿಂಗದೊಳ್=ನಪುಂಸಕಲಿಂಗದಲ್ಲಿ; ಪ್ರಥಮಪುರುಷದ=ಅನ್ಯಪುರುಷದ; ಏಕಬಹುತ್ವಕ್ಕೆ=ಏಕವಚನ ಬಹುವಚನಂಗಳ್ಗೆ; ಉದು=ಉದು ಎಂದು; ಉವು=ಉವು ಎಂದು; ಎಂಬಾದೇಶಂ=ಎಂಬಾದೇಶಂ; ಪುದಿದು=ಪ್ರವೇಶವಾಗಿ; ಇರ್ಕುಂ=ಇರ್ಪುವು; ಭಾವಾರ್ಥದಲ್ಲಿಯುಂ=ಭಾವಾರ್ಥದೊಳಂ; ಉದು=ಉದು ಎಂಬುದು; ಸಂಗಳಿಕುಂ=ಸಂಬಂಧವಾಗುವುದು. ಉಂ ಎಂಬ ಸಮುಚ್ಚಯದಿಂ ವಿಧ್ಯರ್ಥದಲ್ಲಿಯುಂ ಬರ್ಪುದೆಂಬರ್ಥಂ.

## ವೃತ್ತಿ.

ಪ್ರಥಮಪುರುದೇಕವಚನಬಹುವಚನಕ್ಕಾದೇಶವಾಗಿ ನಪುಂಸಕಲಿಂಗದೊಳುದುವೆಂಬುದುಂ ಉವುವೆಂಬುದುಮಪ್ಪುವು. ಭಾವಾರ್ಥದೊಳುದುವುಂಟು.

## ಪ್ರಯೋಗಂ.

ಏಕವಚನಕ್ಕೆ—ಬರೆದುದು; ನೆರೆದುದು; ಕರೆದುದು; ಪರಿದುದು (ಪರೆದುದು).
ಬಹುವಚನಕ್ಕೆ—

ನಿಮಿರ್ದುವು ಪೊಳೆದುವಳುಂಕಿದು
ವಮರ್ದುವು ಚುಂಬಿಸಿದುವರ್ಪಿದವು ಸಂಭ್ರಮದಿಂ |
ಸಮದೃಷ್ಟಿಯಾಗಿ ಸಿಲ್ಕಿದು
ವೆಮೆಯಿಕ್ಕಲ್ಮರೆದುವವಳಧವಳಕಟಾಕ್ಷಂ || ಕಂದಂ || [-ಯಿಕ್ಕದೆ ಮ-]

ಭಾವಕ್ಕೆ—ಈವುದು ಕರ್ಣಂಗೆ ಸಹಜಮಾನಾರೋಪಿತಂ; ಕೂರ್ಪುದು; ಇರ್ಪುದು; ಮಾಳ್ಪುದು.

ಸಮುಚ್ಚಯವಶದಿಂ ವಿಧ್ಯರ್ಥದೊಳುದುವುಂಟು—ರಕ್ಷಿಪುದೆಂನಂ; ಅವಧರಿಪುದು ಬಿಂನಪಮಂ ಎಂಬಂತೆ.

## ಸೂತ್ರಂ.

Instead of the ಉದು (S.225) for the 3rd Person Neuter Singular also ಇತು, ಇತ್ತು, ಅತ್ತು are in use.—Remark: The ದ of the Past tense is put before these Affixes in monosyllabic Cases (cf. Ss. 236; 241); in Cases with final ಎ only ಇತು and ಇತ್ತು; in Cases which change their soft final into a hard one, the ದ; in Cases with ಇ and final consonants there is option; ಅತ್ತು appears always as ದ+ಅತ್ತು.—The Feminine Personal affix for the 3rd Person Singular is ಅಳ್. (cf. Ss. 154; 208).

ನೆಗಟ್ದಾ[1] ನಪುಂಸಕೈಕೋ
ಕ್ತಿಗೆ ಕೆಲರಿತುವಿತ್ತುವತ್ತುವೆಂದುಸಿರ್ವರ್ ನೆ |
ಟ್ಟಗೆ ಪುಗಿಸುವರಂತೇಕೋ
ಕ್ತಿಗೆ ತಾಂ ಸ್ತ್ರೀವಿಷಯಮಾಗಳಂತಸ್ಥಿತಿಯಂ || 226 ||

## ಪದಚ್ಛೇದಂ.

ನೆಗಟ್ದಾ ನಪುಂಸಕೈಕೋಕ್ತಿಗೆ ಕೆಲರ್, ಇತು ಇತ್ತು ಅತ್ತು ಎಂದು, ಉಸಿರ್ವರ್; ನೆಟ್ಟಗೆ ಪುಗಿಸುವರ್ ಅಂತು ಏಕೋಕ್ತಿಗೆ ತಾಂ, ಸ್ತ್ರೀವಿಷಯಂ ಆಗೆ, ಅಳಂತಸ್ಥಿತಿಯಂ.

## ಅನ್ವಯಂ.

ಸ್ತ್ರೀವಿಷಯಂ ಆಗೆ, ಅಂತು ಏಕೋಕ್ತಿಗೆ ಅಳಂತಸ್ಥಿತಿಯಂ ತಾಂ ನೆಟ್ಟಗೆ ಪುಗಿಸುವರ್ ಎಂಬುದನ್ವಯಂ.

## ಟೀಕು.

ನೆಗಟ್ದ=ಪ್ರಸಿದ್ಧವಡೆದ; ಆ ನಪುಂಸಕೈಕೋಕ್ತಿಗೆ=ಆ ಉದುವೆಂಬ ನಪುಂಸಕಲಿಂಗದ ಏಕವಚನಕ್ಕೆ; ಕೆಲರ್=ಕೆಲಂಬರ್; ಇತು=ಇತು ಎಂದು; ಇತ್ತು=ಇತ್ತು ಎಂದು; ಅತ್ತು=ಅತ್ತು ಎಂದು; ಉಸಿರ್ವರ್=ಬಹುಳದಿಂ ಪೇಳ್ವರ್; ಸ್ತ್ರೀವಿಷಯಂ=ಸ್ತ್ರೀಲಿಂಗದ ವಿಷಯಂ; ಆಗೆ=ಆಗೆ; ಅಂತು=ಹಾಂಗೆ; ಏಕೋಕ್ತಿಗೆ=ಏಕವಚನಕ್ಕೆ; ಅಳಂತಸ್ಥಿತಿಯಂ=ಅಳ್ ಎಂಬ ಪ್ರತ್ಯಯಾಂತದ ಸ್ಥಿತಿಯಂ; ತಾಂ=ವಿದ್ವಾಂಸರ್ ತಾಂ; ನೆಟ್ಟಗೆ=ವ್ಯಕ್ತವಾಗಿ; ಪುಗಿಸುವರ್=ಪ್ರವೇಶವಂ ಮಾಡುವರ್.

## ವಿಚಾರಂ.

ನಪುಂಸಕಲಿಂಗದ ಭೂತಕಾಲದ ಪ್ರಥಮಪುರುಷದೇಕವಚನಕ್ಕೆ ಇತು ಇತ್ತು ಅತ್ತು ಎಂಬಿವರ್ಕೆ ಆ ಭೂತಕಾಲದ ದಕಾರಂ ಬಹುಳವಾಗಿ ಬರ್ಪುದು; ಅದೆಂತೆಂದೊಡೆ—ಈ (1), ಓ (2), ಕಾ (3), ಕೀ (4), ಕೇ (5), ಪೂ (443), ಬೇ (490), ಬಾ (491), ಮೇ (506) ಎಂಬೇಕಾಕ್ಷರಧಾತುಗಳ್ಗೆ ಪರದಲ್ಲಿ ದಕಾರಂ ನಿತ್ಯಂ; ಎಕಾರಾಂತಂಗಳಲ್ಲಿ ಇತು ಇತ್ತು ಎಂಬೆರಡರ್ಕೆ ದತ್ವಮಿಲ್ಲ; ವರ್ಗತೃತೀಯಾಂತದ ವರ್ಗಪ್ರಥಮಂಗಳಾಗುವಲ್ಲಿ ನಿತ್ಯಂ (Ss. 239; 241); ಇಕಾರಾಂತಂಗಳಲ್ಲಿ ವಿಕಲ್ಪಂ; ವ್ಯಂಜನಾಂತಂಗಳಲ್ಲಿ ಬಹುಳಂ; ಸರ್ವಧಾತುಗಳಲ್ಲಿಯುಂ ಅತ್ತು ಎಂಬುದರ್ಕೆ ದತ್ವಂ ನಿತ್ಯವಾಗಿ ಬರ್ಪುದು. ಇವನುದಾಹರಣೆಯ ಮುಖದಿಂದಱಿವುದು.

1) ಶಿಥಿಲತ್ವಂ: in the next line an instance of that of Rêpha.

### ವೃತ್ತಿ.

ನಪುಂಸಕಲಿಂಗದೇಕವಚನಕ್ಕೆ ಇತುವೆಂದುಂ ಇತ್ತುವೆಂದುಂ ಅತ್ತುವೆಂದುಮ್ ಅಕ್ಕುಂ; ಪ್ರಥಮಪುರುಷದೇಕವಚನಕ್ಕೆ, ಸ್ತ್ರೀವಿವಕ್ಷೆಯಾಗೆ, ಅಳ್ ಎಂದಕ್ಕುಂ.

### ಪ್ರಯೋಗಂ.

ಇತುಗೆ—ಮುಟ್ಟಿತು; ಮೆಟ್ಟಿತು.

ಮುಟ್ಟಿತು ಮುಟ್ಟದು ದಿಶಮಂ
ಮೆಟ್ಟಿತು ಮೆಟ್ಟದು ರಸಾತಳಾಗ್ರಮನೆವ್ವೊ |
ಳ್ಬಿಟ್ಟಳವಾಗಿರೆ ದಿವಜರ
ದಿಟ್ಟಿಗೆ ಸೊಗಯಿಪುದು ಮುಂದೆ ಮಂದರಶೈಲಂ || ಕಂದಂ ||

ಇತ್ತುಗೆ—ಅಲ್ಲಾಡಿತ್ತು; ಓಡಿತ್ತು. ಈಶ್ವರನ ಮನವನಲ್ಲಾಡಿತ್ತೋಡಿತ್ತು ಕಿನ್ನರಸೈನ್ಯಂ.

ಅತ್ತುಗೆ—ಇರ್ದತ್ತು; ಪಸರಿಸಿದತ್ತು. ಶಿರಃಕರೋಟಿ ನಗುವಂತಿರ್ದತ್ತು; ಪಸರಿಸಿದತ್ತು ಮೂಡಣ ದೆಸೆಯೊಳ್ ಬೆಳಗೆಂಪು.

ಅಳ್ಗೆ—ಕಡೆದಳ್; ಪಡೆದಳ್; ಅಱಿದಳ್ (ಅರಿದಳ್) ಪಾಂಡುತನುಜರ ತೆಱನೆಲ್ಲಮನೀಕೆ.

### ಸೂತ್ರಂ.

There are two other Affixes for the 3rd Person (also in the Singular): ಗುಂ and ಕುಂ. The forms created by them (are, like the forms with ಉದು of S. 225, a sort of verbal noun, and) may be used for all tenses, also the Past (cf. S. 222), for all numbers and all genders.

ಸವನಾಗಿ ಭೂತದೊಳ್ ಲಿಂ
ಗವಚನದೊಳ್ತಳ್ತು ವರ್ತಮಾನಭವಿಷ್ಯ |
ದ್ವ್ಯವಹೃತಿಗಳ ಗುಂ ಕುಂ ಸ
ಲ್ವುವು ತಾವನ್ಯೈಕವಚನದೊಳ್ನೆಲಸಿರ್ದುಂ || 227 ||

### ಪದಚ್ಛೇದಂ.

ಸವಂ ಆಗಿ ಭೂತದೊಳ್ ಲಿಂಗವಚನದೊಳ್ ತಳ್ತು, ವರ್ತಮಾನಭವಿಷ್ಯದ್ವ್ಯವಹೃತಿಗಳ ಗುಂ ಕುಂ ಸಲ್ವುವು, ತಾಂ ಅನ್ಯೈಕವಚನದೊಳ್ ನೆಲಸಿ ಇರ್ದುಂ.

### ಅನ್ವಯಂ.

ವರ್ತಮಾನಭವಿಷ್ಯದ್ವ್ಯವಹೃತಿಗಳ ಗುಂ ಕುಂ, ತಾಂ ಅನ್ಯೈಕವಚನದೊಳ್ ನೆಲಸಿ ಇರ್ದುಂ, ಭೂತದೊಳ್ ಲಿಂಗವಚನದೊಳ್ ತಳ್ತು, ಸವಂ ಆಗಿ ಸಲ್ವುವು.

ಟೀಕು.

ವರ್ತಮಾನ=ವರ್ತಮಾನಕಾಲದ; ಭವಿಷ್ಯತ್=ಭವಿಷ್ಯತ್ಕಾಲದ; ವ್ಯವಹೃತಿಗಳ=ವ್ಯವಹಾರಂಗಳ; ಗುಂ=ಗುಂಕಾರಂ; ಕುಂ=ಕುಂಕಾರಂ; ತಾಂ=ತಾಂ; ಅನ್ಯ=ಪ್ರಥಮಪುರುಷದ; ಏಕವಚನದೊಳ್=ಏಕವಚನದಲ್ಲಿ; ನೆಲಸಿರ್ದುಂ=ನೆಲೆಗೊಂಡಿರ್ದುಂ; ಭೂತದೊಳ್=ಭೂತಕಾಲದಲ್ಲಿ; ಲಿಂಗವಚನದೊಳ್=ಲಿಂಗತ್ರಯ ವಚನತ್ರಯಂಗಳಲ್ಲಿ; ಸವನಾಗಿ=ಸಮಾನವಾಗಿ; ತಳ್ತು=ಪೊರ್ದುಗೆಯಾಗಿ; ಸಲ್ವುವು=ಸಲುವಳಿಯಪ್ಪುವು.

ವೃತ್ತಿ.

ಭೂತಕಾಲವೆನ್ನದೆ, ಲಿಂಗತ್ರಯವಚನತ್ರಯವೆನ್ನದೆ, ವರ್ತಮಾನಭವಿಷ್ಯತ್ಕಾಲಂಗಳೊಳ್ ವರ್ತಿಸುವ ಗುಂ ಕುಮ್ ಎಂಬಿವು ಪ್ರಥಮದೇಕವಚನಕ್ಕಮಾದೇಶಮಪ್ಪುವು.

ಪ್ರಯೋಗಂ.

ಗುಮೆಂಬುದಱ ಭೂತಕಾಲಕ್ಕೆ—ಅಂದು ಮಾಡುಗುಂ, ಅಂದು ಮಾಳ್ಕುಂ.

ಲಿಂಗತ್ರಯಕ್ಕೆ—

ಅಸವಸದಿಂಪಳಗೆಯ್ದುಂ
ಕಸವಂ ಸೋದಿಸದೆ ಬಿತ್ತಿದೊಕ್ಕಲಿಗನ ವೋಲ್ |
ಸಸಿಯಂ ನೋಡಿ ತಳೋದರಿ
ಬಿಸುಸುಯ್ಗುಂ ಬಯ್ಗುಮಂತೆ ಮಾಡಿದ ಬೀದಿಯಂ || ಕಂದಂ ||

ಭೂವಳೆಯಾಧಿಪಂ ನುಡಿಗುಮಾ ದೂತಂಗೆ ಸ್ವಚಿತ್ತಗತಾರ್ಥಮಂ. ಕೋಗಿಲೆಯುಲಿಗುಂ ನಯದಿಂ. ಬೀಸುಗುಂ ಗಂಧವಾಹಂ.

ವಚನತ್ರಯಕ್ಕೆ—ಒರ್ವನೆ ಗೆಲ್ಗುಂ ಕಿರೀಟಿ ಕೌರವಬಲಮಂ. ಬಲನಾರಾಯಣರಿರ್ವರುಂ ನುಡಿಗುಂ ಆ ದೂತಂಗೆ. ಮೂದೇವರುಮಱ್ಕ್ಕಣಿವೊಗಿಸುಗುಮಸುರರ್ [-ಕೋಣೆಯೊ-]. ಎಮಗೀಗಳೆ ಸುಚಿಸುಗುಮವರ್ ನಾಳೆ ಕಾಣ್ಗುಂ.

ಕುಮಿಂಗೆ—ಕೇಳ್ದಾತನ ಕಿವಿಯುಮಂ ನಟ್ಟು ಕರಿಮುರಿವೋಕುಂ.

ಅರ್ಕೇಂದುಗಳಂ ತವೆ ನುಂ
ಗಿರ್ಕುಂ ಕಟ್ಟಿಲೆ ಸಿಡಿಲ್ಗಳೆಱಗುಗುಮತ್ತಂ |
ಬರ್ಕುನ್ನಿನ್ನೋಪಳಭಯ
ಮಿರ್ಕುಮೆ ನೀನಿಪ್ಪ ಮನದೊಳುಗ್ರತುಳಾರ್ಕಾ || ಕಂದಂ ||

ಇದುಮದಱಂತೆ ಸಲ್ವುದು. ಶ್ರಾವ್ಯಮಾದೊಡೇಕಪದದೊಳೆರಡುಂ ಪತ್ತುಗುಂ—ಸೂಚಿಸುಗುಂ, ಸೂಚಿಕುಂ; ಮಾಳ್ಕುಂ, ಮಾಡುಗುಂ.

ಸೂತ್ರಂ.

ಇಸುವಿನ ಸುಕಾರಮಂ ಲೋ
ಪಿಸುವರ್ ಕುಂ ಪರದೊಳಾಗೆ ಕುಂಮಿಂಗೆ ಕೆಲ |
ರ್ಪೊಸಯಿಸುವರ್ ದ್ವಿರ್ಭಾವಮ
ನೆಸಗಲದಂ ಬೇಡ ಕಿವಿಗೆ ಸೊಗಯಿಸದೆಡೆಯೊಳ್ || 228 ||

When the ಕುಂ (S. 227) is joined to ಇಸು, the affix of causation (ಹೇತು; cf. Ss. 52; 54; 74; 231), the ಸು is dropped (cf. S. 232). The ಕ in ಕುಂ may be doubled (cf. Ss. 115; 184; 229; 232).

ಪದಚ್ಛೇದಂ.

ಇಸುವಿನ ಸುಕಾರಮಂ ಲೋಪಿಸುವರ್, ಕುಂ ಪರದೊಳ್ ಆಗೆ; ಕುಂಮಿಂಗೆ ಕೆಲರ್ ಪೊಸಯಿಸುವರ್ ದ್ವಿರ್ಭಾವಮಂ; ಎಸಗಲ್ ಅದಂ ಬೇಡ ಕಿವಿಗೆ ಸೊಗಯಿಸದ ಎಡೆಯೊಳ್.

ಅನ್ವಯಂ.

ಕುಂ ಪರದೊಳ್ ಆಗೆ, ಇಸುವಿನ ಸುಕಾರಮಂ ಲೋಪಿಸುವರ್; ಕೆಲರ್ ಕುಂಮಿಂಗೆ ದ್ವಿರ್ಭಾವಮಂ ಪೊಸಯಿಸುವರ್; ಕಿವಿಗೆ ಸೊಗಯಿಸದೆಡೆಯೊಳ್ ಅದಂ ಎಸಗಲ್ ಬೇಡ.

ಟೀಕು.

ಕುಂ=ಕುಂಕಾರಂ; ಪರದಲ್ಲಿ=ಧಾತುಗಳ ಪರದಲ್ಲಿ; ಆಗೆ=ಪೊರ್ದುಗೆಯಾಗೆ; ಇಸುವಿನ=ಇಸುಪ್ರತ್ಯಯದ; ಸುಕಾರಮಂ=ಸುತ್ವವಂ; ಲೋಪಿಸುವರ್=ಲೋಪವಂ ಮಾಡುವರ್; ಕೆಲರ್=ಕೆಲಂಬರ್; ಕುಂಮಿಂಗೆ=ಕುಂಕಾರಕ್ಕೆ; ದ್ವಿರ್ಭಾವಮಂ=ದ್ವಿತ್ವವಂ; ಪೊಸಯಿಸುವರ್=ಪೊರ್ದುಗೆಯಂ ಮಾಡುವರ್; ಕಿವಿಗೆ=ಕರ್ಣಕ್ಕೆ; ಸೊಗಯಿಸದೆಡೆಯೊಳ್=ಹಿತವಾಗದ ತಾವಿನಲ್ಲಿ; ಅದಂ=ಆ ಕುಂಕಾರದ ದ್ವಿತ್ವವಂ; ಎಸಗಲ್ ಬೇಡ=ಮಾಡ ಬೇಡ.

ವೃತ್ತಿ.

ಹೇತುವಿನೊಳಾದ ಇಸುವಿನ ಸುಕಾರಕ್ಕೆ ಕುಂ ಪರಮಾಗೆ, ಆ ಸುತ್ವಂ ಲೋಪಮಕ್ಕುಂ; ಕೆಲರಾ ಕುಂಮಿಂಗೆ ದ್ವಿತ್ವಮಂ ಪೇೞ್ವರ್; ಅದುಂ ಶ್ರವಣಕ್ಕೆ ಶೋಭನವಾಗದ ತಾಣದೊಳ್ ಪೇೞಲಾಗದು.

ಪ್ರಯೋಗಂ.

ಸುಕಾರಲೋಪಕ್ಕೆ—[M. B. ಈ ಯೋಗದೊಡನಾವ ರೋಗಮುಂ] ಪರಿಹರಿಕುಂ; ಸಮನಿಕುಂ [M. B. ಸಮನಿಕುಮಾಕಾರಮೆಣಿವಣ್ಣೂ]; ರಂಭೆ ಕೇಳಿಕುಂ ಪೆಕ್ಕಣಮುಂ; ಭಾವಿಕುಂ; ಮಾಣಿಕುಂ.

ದ್ವಿತ್ವಕ್ಕೆ—ಪುರುಡಿಕ್ಕುಂ; ಪೊಗೞಿಕ್ಕುಂ; ರಂಜಿಕ್ಕುಂ; ಪಾಲಿಕ್ಕುಂ (ಪಾಳಿಕ್ಕುಂ) ಜಗವೆಲ್ಲಮುಂ ಕಮಲಭವಂ.

ಶ್ರಾವ್ಯಮಲ್ಲದುದರ್ಕೆ—ಬಿಡಿಕ್ಕುಂ, ಕೆಡಿಕ್ಕುಂ, ಸೊಪಿಕ್ಕುಮೆನ ಬೇಡ. ಸಂಸ್ಕೃತ ದೊಳಿಂತಿದು ಮನೋಹರಂ.

ಸೂತ್ರಂ.

Regarding the Imperative (ವಿಧಿ; cf. S. 225) there are the Affixes ಗೆ and ಕೆ (ಕ್ಕೆ, cf. S. 228) for the Singular and Plural of the 3rd Person (the Elision regarding ಇಸು also occurring here); ಇಂ for the 2nd Person Plural; and ಅಂ for the 1st Person Plural (see s. S. 230).

ಸೊಗಯಿಪುವು ಗೆ ಕೆಗಳನ್ಯೋ
ಕ್ತಿಗೆ ವಿಧ್ಯರ್ಥಕ್ಕೆ ಮಧ್ಯಮೋತ್ತಮಪುರುಷ |
ಪ್ರಗತಬಹೂಕ್ತಿಯೊಳಿಮಮೆಂ
ದೊಗೆತರ್ಕುಂ ಯುಗಪದುಕ್ತಿಯೊಳ್ಕ್ರಮದಿಂದಂ || 229 ||

ಪದಚ್ಛೇದಂ.

ಸೊಗಯಿಪುವು ಗೆ ಕೆಗಳ್ ಅನ್ಯೋಕ್ತಿಗೆ ವಿಧ್ಯರ್ಥಕ್ಕೆ; ಮಧ್ಯಮೋತ್ತಮಪುರುಷಪ್ರಗತಬಹೂಕ್ತಿಯೊಳ್, ಇಂ ಅಂ ಎಂದು, ಒಗೆತರ್ಕುಂ, ಯುಗಪದುಕ್ತಿಯೊಳ್ ಕ್ರಮದಿಂದಂ.

ಅನ್ವಯಂ.

ವಿಧ್ಯರ್ಥಕ್ಕೆ ಅನ್ಯೋಕ್ತಿಗೆ ಗೆ ಕೆಗಳ್ ಸೊಗಯಿಪುವು; ಯುಗಪದುಕ್ತಿಯೊಳ್ ಮಧ್ಯಮೋತ್ತಮಪುರುಷಪ್ರಗತಬಹೂಕ್ತಿಯೊಳ್ ಕ್ರಮದಿಂದಂ, ಇಂ ಅಂ ಎಂದು, ಒಗೆತರ್ಕುಂ.

ಟೀಕು.

ವಿಧ್ಯರ್ಥಕ್ಕೆ=ವಿಧಿಯರ್ಥಕ್ಕೆ; ಅನ್ಯ=ಪ್ರಥಮಪುರುಷದ; ಉಕ್ತಿಗೆ=ಅಂ ಅರ್ ಎಂಬೇಕವಚನಬಹುವಚನಕ್ಕೆ; ಗೆ ಕೆಗಳ್=ಗೆಕಾರ ಕೆಕಾರಂಗಳ್; ಸೊಗಯಿಪುವು=ಹಿತವಾಗವುವು; ಯುಗಪದುಕ್ತಿಯೊಳ್=ಒಂದಾಗಿ ನುಡಿವುದಾದ; ಮಧ್ಯಮ=ಮಧ್ಯಮಪುರುಷದಲ್ಲಿ; ಉತ್ತಮ=ಉತ್ತಮಪುರುಷದಲ್ಲಿ; ಪ್ರಗತ=ವಿಶೇಷವಾಗಿ ಎಯ್ದಲ್ಪಟ್ಟ; ಬಹೂಕ್ತಿಯೊಳ್=ಇರ್, ಎವು ಎಂಬ ಬಹುವಚನದಲ್ಲಿ; ಕ್ರಮದಿಂದಂ=ತರುವಾಯಿಂದೆ; ಇಂ=ಇಂ ಎಂದು; ಅಂ=ಅಂ ಎಂದು; ಒಗೆತರ್ಕುಂ=ಬರ್ಪುವು.

ವೃತ್ತಿ.

ಪ್ರಥಮಪುರುಷದೇಕವಚನಕ್ಕಂ ಬಹುವಚನಕ್ಕಂ ವಿಧ್ಯರ್ಥದೊಳ್ ಗೆ ಎಂದುಂ ಕೆ ಎಂದುಮಕ್ಕುಂ; ಕೆಕಾರಕ್ಕೆ ಕುಮ್ಮಿನಂತೆ ದ್ವಿತ್ವವಿಕಲ್ಪಂ. ಮಧ್ಯಮೋತ್ತಮಪುರುಷಂಗಳ ಬಹುವಚನಕ್ಕೆ ಯುಗಪದುಕ್ತಿಯೊಳ್ಪರಿವಿಡಿಯಿಂ ಇಮ್ ಅಮ್ ಎಂಬಿವಕ್ಕುಂ.

ಪ್ರಯೋಗಂ.

ಗೆಕಾರಕ್ಕೆ—ಅವಂ ಕುಡುಗೆ; ಅವಂ ಪಡೆಗೆ; ಅವಂ ತರ್ಕೆ; ಅವಂ ಬರ್ಕೆ; ವಿಷ್ಣು ಪರಿಪಾಳಿಕೆ.

ಬಹುವಚನಕ್ಕೆ—ಅವಮ್ಮರ್ಟಿಕ್ಕೆ; ಅವತೋರ್ಕೆ.

ಕೆಕಾರಕ್ಕೆ ದ್ವಿತ್ವವಿಕಲ್ಪಂ—ರಕ್ಷಿಕೆ, ರಕ್ಷಿಕ್ಕೆ; ಪೂಜಿಕೆ, ಪೂಜಿಕ್ಕೆ.

ಇಂಗೆ—ಸಮಕಟ್ಟಿಂ! ಇರಿಸಿಂ! ತರಿಸಿಂ!

ಅಂಗೆ—ನೆನೆಯದ ಕಜ್ಜದ ಬಿಣ್ಪಿಂ

ಮುನಿವಯನೀನೊರ್ಬನೆಂಬ ಹರಿಗಮಸಾಧ್ಯಂ |
ಮನುಜಪ್ರಾಕಾರಕ್ಕನೊ
ಳನಿಬರುಮೊಂದಾಗಿ ತಾಗುಮಂ ಫಲ್ಗುಣನೊಳ್! || ಕಂದಂ ||

ಎಡೆಗೆಯ್ದುಂ (ಎಗ್ಗೈಮ, also M.)! ಪೇೞಿಮೆಂದೊಡೆಂದರ್ಭೀಷ್ಮರ್.

ಸೂತ್ರಂ.

Further, the form of the 2nd Person Singular Imperative is the Verbal theme or root (S. 216), the final ಉ of which may be dropped (cf. S. 125); the root ಇರ್ (578b.), however, becomes ಇರು.—Remark: ವೆಂ is the affix for the 1st Person Singular Imperative, ವಂ for the 1st Person Plural.—The Imperative may be put twice (cf. S. 195). (On the Imperative see also Ss. 234; 237; 243).

ಪರಿಣಮಿಸಿರ್ಕುಂ ಪ್ರಕೃತಿ
ಸ್ವರೂಪದಿಂ ಮಧ್ಯಮೈಕವಚನಂ ವಿಧಿಯೊಳ್ |
ದೊರೆಕೊಳ್ಗುಮುತ್ವಮಿರ್ಗಂ
ಕುರಿಪುದು ವಿಧಿಯಾ ಕ್ರಿಯಾಸಮಭಿಹಾರದೊಳಂ || 230 ||

ಪದಚ್ಛೇದಂ.

ಪರಿಣಮಿಸಿ ಇರ್ಕುಂ ಪ್ರಕೃತಿಸ್ವರೂಪದಿಂ ಮಧ್ಯಮೈಕವಚನಂ ವಿಧಿಯೊಳ್; ದೊರೆಕೊಳ್ಗುಂ ಉತ್ವಂ ಇರ್ಗೆ; ಅಂಕುರಿಪುದು ವಿಧಿ ಆ ಕ್ರಿಯಾಸಮಭಿಹಾರದೊಳಂ.

ಅನ್ವಯಂ.

ವಿಧಿಯೊಳ್ ಮಧ್ಯಮೈಕವಚನಂ ಪ್ರಕೃತಿಸ್ವರೂಪದಿಂ ಪರಿಣಮಿಸಿ ಇರ್ಕುಂ; ಇರ್ಗೆ ಉತ್ವಂ ದೊರೆಕೊಳ್ಗುಂ; ಆ ಕ್ರಿಯಾಸಮಭಿಹಾರದೊಳಂ ವಿಧಿ ಅಂಕುರಿಪುದು.

ಟೀಕು.

ವಿಧಿಯೊಳ್=ವಿಧ್ಯರ್ಥದಲ್ಲಿ; ಮಧ್ಯಮೈಕವಚನಂ=ಅಯ್ ಎಂಬ ಮಧ್ಯಮಪುರುಷದೇಕವಚನಂ; ಪ್ರಕೃತಿಸ್ವರೂಪದಿಂ=ಧಾತುಸ್ವರೂಪದಿಂದೆ; ಪರಿಣಮಿಸಿರ್ಕುಂ=ಪರಿಣಮಿಸಿರ್ಪುದು; ಇರ್ಗೆ=ಇರ್ ಎಂಬ ಧಾತುವಿಂಗೆ; ಉತ್ವಂ=ಉಕಾರಂ; ದೊರೆಕೊಳ್ಗುಂ=ಪ್ರಾಪ್ತಿಸುವದು; ಆ ಕ್ರಿಯಾಸಮಭಿಹಾರದೊಳಂ=ಆ ಕ್ರಿಯೆಯನಭಿಮುಖವಾಗಿ ಮಾಡಿ ಕೊಂಬಲ್ಲಿಯುಂ; ವಿಧಿ=ವಿಧ್ಯರ್ಥಂ; ಅಂಕುರಿಪುದು=ಅಂಕುರವಾಗುವದು, ಬರ್ಪುದೆಂಬುದರ್ಥಂ.

## ವಿಚಾರಂ.

ಇಲ್ಲಿ, ಮಾಡು, ಕರಣೇ (293) ಎಂದು, ಧಾತುವಿರೆ, ಪ್ರಥಮಪುರುಷದೇಕವಚನ ಬಹುವಚನಂಗಳ್ಗೆ—ಅವಂ ಮಾಡುಗೆ, ಅವರ್ ಮಾಡುಗೆ; ಅವಂ ಮಾಟ್ಕೆ, ಅವರ್ ಮಾಟ್ಕೆ ಎಂದಾಯ್ತು. ಮಧ್ಯಮಪುರುಷದೇಕಬಹುವಚನಕ್ಕೆ—ನೀಂ ಮಾಡು! ನೀವೆಲ್ಲರ್ ಮಾಡಿಂ! ಎಂದಾಯ್ತು.

ಉತ್ತಮಪುರುಷದೇಕವಚನಕ್ಕೆ ಪೇಳಲಿಲ್ಲಾಗಿ, ಬಹುವಚನಕ್ಕೆ ಭವಿಷ್ಯಂತಿಗೆ ಬರ್ಪ ವಕಾರದ ಮೇಲೆ ಅಂ ಎಂಬುದು ಪತ್ತಿ—ಆವೆಲ್ಲರ್ ಮಾಡುವಂ! ಎಂದು, ಆಯ್ತು. ಏಕವಚನಕ್ಕೆ ಹ್ಯಾಂಗೆಂದೊಡೆ—ಭವಿಷ್ಯಂತಿಯ ವಕಾರದ ಮೇಲೆ ಎನ್ ಎಂಬುದು ಪತ್ತಿದಂತೆ ಆನ್ ಮಾಡುವೆಂ ಎಂದಪ್ಪುದಾಗಿ ಪೇಳಲಿಲ್ಲೆಂದಱಿವುದು.

ಶಬ್ದಾನುಶಾಸನದಲ್ಲಿ— || ಆಶೀರ್ವಿಧಿನಿಮಂತ್ರಣಾಮಂತ್ರಣಾಧ್ಯೇಷಣಸಂಪ್ರಶ್ನಪ್ರೇಷಣವಿಜ್ಞಾಪನಾಜ್ಞಾಪನಪ್ರಾರ್ಥನೇ·ಗೆತ್ || 4, 24 || ಆಶೀರಾದಿವಿವಕ್ಷಾಯಾಂ ಧಾತೋಃ ಪರಯೋರ್ ಅಮ್ ಅರ್ ಇತ್ಯೇತಯೋರ್ ಗೆದ್ ಇತ್ಯಾದೇಶೋ ಭವತಿ || ಎಂದುದಾಗಿ ಆಶೀರಾದಿವಿವಕ್ಷೆಯಲ್ಲಿ ಧಾತುವಿನತ್ತಣಿಂ ಪರಂಗಳಾದ ಅಮ್ ಅರ್ ಎಂಬಿವರ್ಕೆ ಗೆತ್(ಗೆ) ಎಂಬಾದೇಶಂ ಬರ್ಪುದು. ತಕಾರಂ ಇತ್ತು, ಗೆ ಎಂದು ಉಳಿವುದು—ಅವಂ ಮಾಡುಗೆ; ಅವರ್ಮಾಡುಗೆ.

|| ಅಯಿರೋಶ್ಚೋದುಃ || 4, 25 || ಎಂದುದಾಗಿ ಧಾತುವಿನತ್ತಣಿಂ ಪರಂಗಳಾದ ಅಮ್ ಅರ್ ಎಂಬವರ್ಕಂ ಅಯ್ ಇರ್ ಎಂಬಿವರ್ಕಂ ಉದು ಎಂಬಾದೇಶಂ ಬರ್ಪುದು, ಆಶೀರಾದಿವಿಷಯದಲ್ಲಿ—ಅವಂ ಮಾಟ್ಪುದು, ಅವರ್ಮಾಟ್ಪುದು; ನೀಂ ಮಾಟ್ಪುದು, ನೀವೆಲ್ಲರ್ ಮಾಟ್ಪುದು. ಮಾಡುವುದು ಎಂದುಂ ವಿಕಲ್ಪಂ.

|| ಅಯೋಲೋಪೌ || 4, 27 || ಧಾತೋಃ ಪರಸ್ಯ ಅಯಃ । ಅಕಾರೋ ಲೋಪಶ್ಚಾದೇಶೌಭವತ ಆಶೀರಾದಿವಿಷಯೇ || ಎಂದುದಾಗಿ ಧಾತುವಿನತ್ತಣಿಂ ಪರದ ಅಯ್ ಎಂಬುದರ್ಕೆ ಅಕಾರಾದೇಶಮುಂ ಲೋಪಮುಮಕ್ಕುಂ—ನೀ ಮಾಡ! ನೀಂ ಮಾಡು!

|| ಇರ ಇಮ್ || 4, 26 || ಧಾತೋಃ ಪರಸ್ಯ ಇರ ಇಮ್ ಇತ್ಯಾದೇಶೋ ಭವತ್ಯಾಶೀರಾದಿವಿಷಯೇ || ಎಂದುದಾಗಿ ಧಾತುವಿನತ್ತಣಿಂ ಪರದ ಇರ್ ಎಂಬುದರ್ಕೆ ಇಮ್ ಎಂಬಾದೇಶಮಕ್ಕುಂ ಆಶೀರಾದಿವಿಷಯದಲ್ಲಿ—ನೀವೆಲ್ಲರ್ ಮಾಡಿಂ! ಗುರುಗಳಿರಾ, ಮುದದಿನೆಮಗೆ ಬೆಸಸಿಮಾ ಕಥೆಯಂ! ಶಿವ ಸುಖಮಂ ಮಾಡಿಮೆಮಗೆ!

|| ಎನೋ ವೆನ್ || 4, 30 || ಧಾತೋಃ ಪರಸ್ಯ ಎನ್ಪ್ರತ್ಯಯಸ್ಯ ವೆನ್ ಇತ್ಯಾದೇಶೋ ಭವತಿ || ಎಂದುದಾಗಿ ಧಾತುವಿನತ್ತಣಿಂ ಪರ ಎನ್ ಎಂಬುದರ್ಕೆ ವೆನ್ ಎಂಬಾದೇಶಂ ಬರ್ಪುದು, ಆಶೀರಾದಿವಿಷಯದಲ್ಲಿ—ಆನಿದಂ ಮಾಟ್ಪೆಂ! ಆಂ ಶಿವನಂ ಪೂಜಿಸುವೆಂ!

|| ಎವೋರ್ವಂ || 4, 29 || ಧಾತೋಃ ಪರಸ್ಯ ಎವುಪ್ರತ್ಯಯಸ್ಯ ವಮ್ ಇತ್ಯಾದೇಶೋ ಭವತಿ ಆಶೀರಾದಿವಿಷಯೇ || ಎಂದುದಾಗಿ ಧಾತುವಿನತ್ತಣಿಂ ಪರದ ಎವು ಎಂಬುದರ್ಕೆ ವಮ್ ಎಂಬಾದೇಶಂ ಬರ್ಪ್ಪುದು ಆಶೀರಾದಿವಿಷಯದಲ್ಲಿ—ಆಮೆಲ್ಲರೀಗಳಶ್ವಮೇಧವಂ ಮಾಡುವಂ!

ಇಂತು ಪೇಳ್ದುದಾಗಿ ಆಶೀರ್ವಿಧಿಗಳಾದಿಯಾದುವಱಲ್ಲಿ ಪ್ರಥಮೈಕವಚನಂ—ಆತಂ ಮಾಡುಗೆ, ಆತಂ ಮಾಟ್ಕೆ; ಆತಂ ಮಾಡುವದು, ಆತಂ ಮಾಟ್ಪುದು.

ಬಹುವಚನಂ—ಅವರ್ ಮಾಡುಗೆ, ಮಾೞ್ಕೆ; ಅವರ್ ಮಾಡುವದು, ಮಾೞ್ಪುದು.
ಮಧ್ಯಮೈಕವಚನಂ—ನೀಂ ಮಾಡ! ನೀಂ ಮಾಡು! ಮಾಡುವದು! ಮಾೞ್ಪುದು!
ಬಹುವಚನಂ—ನೀವೆಲ್ಲರ್ ಮಾಡುವದು! ಮಾೞ್ಪುದು! ಮಾಡಿಂ!
ಉತ್ತಮಪುರುಷೈಕವಚನಂ—ಆಂ ಮಾಡುವೆಂ! ಮಾೞ್ಪೆಂ!
ಬಹುವಚನಂ—ಆವೆಲ್ಲರ್ ಮಾಡುವಂ! ಮಾೞ್ಪಂ! ಎಂದಿಂತಱಿವುದು.

## ವೃತ್ತಿ.

ಧಾತುಸ್ವರೂಪದಿಂ ಮಧ್ಯಮಪುರುಷದೇಕವಚನಂ ವಿಧ್ಯರ್ಥಮಾಗಿ ಪರಿಣಾಮಿಸುಗುಂ; ಇರ್ ಎಂಬ ಧಾತುವೊಂದರ್ಕೆಮುತ್ತಮಕ್ಕುಂ; ವಿಧ್ಯರ್ಥಂ ಕ್ರಿಯಾಸಮಭಿಹಾರದೊಳಮಕ್ಕುಂ.

## ಪ್ರಯೋಗಂ.

ಧಾತುಸ್ವರೂಪಕ್ಕೆ—ನುಡಿ! ನುಡಿಯೆ ಮಿಗೆ ಬೆಳ್ಪುದು ಬೆಳ್ಪುದು! ಪಾಡೆಲೆ ತುಂಬಿ! ಬಗ್ಗಿಸಲೆ ಕೋಗಿಲೆ! ತೀಡೆಲೆ ಗಂಧವಾಹ (s. S. 125)! ಹರಿ, ಕೇಳ್! ಧೂಮಪತಾಕ, ಕೇಳ್! ನಿರುತಿ, ಕೇಳ್!

ವಾಯಸದಂತೆ ನೋಡು ಕಪಿಯಂತಿರೆ ಮೆಲ್ಲನೆ ಮೆಟ್ಟು ಕಚ್ಛಪಾ
ಪಾಯದಡಂಗು ನಿಲ್ ಭ್ರಮರಿವೋಲ್ ಭ್ರಮಿಯಂತಿರೆ ಬೆಚ್ಚರಾಗು ಖ
ಡ್ಗಾಯುಧಚಾಮರವ್ವೊಳೆವಮಿಂಚನೆ ಪೊತ್ತಿರೆ ಬೀಸು ನೀಂ ಖಳ
ನ್ಯಾಯದಿನೆಲ್ಲಮಂ ನೆಱಿಯೆ ಕಲ್ತುಪದೇಶಕನಾಗು ಲೋಕದೊಳ್ ||
ಉತ್ಪಲಮಾಲಿಕಾವೃತ್ತಂ || [1]

ಇರ್ಗೆ—ಇರು ಮರುಳೆ ಶುಷ್ಕವೈಯಾಕರಣಂಗಂ!
ಕ್ರಿಯಾಸಮಭಿಹಾರದ ವಿಧಿಗೆ—ಬೇಡ! ಬೇಡೆಂದು, ಬಿಡಿಸಿದಂ.

ಕೊಳ್ಕೊಳ್ಳೆಂದೊಡನೊಡನೆಯೆ
ತುಳ್ಕುವ ಯುವತಿಯರ ಕರಪರಿಚ್ಯುತ ಸಲಿಲಂ |
ಗಳ್ಕೊಳೆಬಿಡಿಕೆದರುವ ಕಿಂ
ಜಳ್ಕದಿನಾದುದು ಸರೋವರಂಕಪಿತಜಳಂ || ಕಂದಂ ||

ನಡೆನಡೆಯೆಂದು ನಡೆದುದೊ ಪಡೆದಚ್ಚರಿಯಂ.

## ಸೂತ್ರಂ.

By the Affix ಇಸು such verbs are formed of Canarese

ಧಾತುಗಿಸು ಕನ್ನಡಕ್ಕಾ
ಹೇತುವಿನೊಳ್ ಸ್ವಪರಕರ್ತೃವೊಳ್ ಸಂಸ್ಕೃತದಾ |

1) 4 times: — ◡◡ | — ◡ — | ◡◡◡ | — ◡◡ | — ◡◡ | — ◡ — | ◡ — ||

roots as express that the Subject causes something to happen (ಹೇತು, cf. S. 228), or as show merely the Subject's own action (or experiencing, ಸ್ವಯಂಕರ್ತೃಕಂ), or as indicate that the Subject causes something to be done dy another (ಪರಕರ್ತೃಕಂ, ಅನ್ಯ–, ಭಿನ್ನ–). Saṇskṛt Polysyllables also serve for the formation of verbs with ಇಸು which show merely the Subject's own action, or which, like Canarese words of the same formation, refer to the Subject's professional occupation (? ಪ್ರಯೋಜನವಸ್ತು, S. 234). (cf S. 54).

ಧಾತುಗನೇಕಾಕ್ಷರಕಿಸು
ಜಾತಂ ನಿಜಕರ್ತೃವೊಳ್ ಪ್ರಯೋಜನದೆಡೆಯೊಳ್ || 231 ||

ಪದಚ್ಛೇದಂ.

ಧಾತುಗೆ ಇಸು ಕನ್ನಡಕ್ಕೆ ಆ ಹೇತುವಿನೊಳ್ ಸ್ವಪರಕರ್ತೃವೊಳ್, ಸಂಸ್ಕೃತದ ಆ ಧಾತುಗೆ ಅನೇಕಾಕ್ಷರಕೆ ಇಸು ಜಾತಂ ನಿಜಕರ್ತೃವೊಳ್ ಪ್ರಯೋಜನದ ಎಡೆಯೊಳ್.

ಅನ್ವಯಂ.

ಕನ್ನಡಕ್ಕೆ ಧಾತುಗೆ ಆ ಹೇತುವಿನೊಳ್ ಸ್ವಪರಕರ್ತೃವೊಳ್ ಇಸು ಜಾತಂ, ಸಂಸ್ಕೃತದ ಆ ಧಾತುಗೆ ಅನೇಕಾಕ್ಷರಕೆ ನಿಜಕರ್ತೃವೊಳ್ ಪ್ರಯೋಜನದ ಎಡೆಯೊಳ್ ಇಸು.

ಟೀಕು.

ಕನ್ನಡಕ್ಕೆ=ಕನ್ನಡವಾದ; ಧಾತುಗೆ=ಧಾತುಗಳ್ಗೆ; ಆ ಹೇತುವಿನೊಳ್=ಆ ಕಾರಣದಲ್ಲಿ; ಸ್ವಪರಕರ್ತೃವೊಳ್=ಸ್ವಕರ್ತೃಪರಕರ್ತೃವಿನಲ್ಲಿ; ಇಸು=ಇಸುಪ್ರತ್ಯಯಂ; ಜಾತಂ=ಹುಟ್ಟುವದು; ಸಂಸ್ಕೃತದ=ಸಕ್ಕದದ; ಆ ಧಾತುಗೆ=ಆ ಧಾತುಗಳ್ಗೆ; ಅನೇಕಾಕ್ಷರಕೆ=ಬಹುವರ್ಣಕ್ಕೆ; ನಿಜಕರ್ತೃವೊಳ್=ಸ್ವಕರ್ತೃವಿನಲ್ಲಿ; ಪ್ರಯೋಜನದೆಡೆಯೊಳ್=ಪ್ರಯೋಜನದ ತಾವಿನಲ್ಲಿ; ಇಸು=ಇಸುವೆಂಬ ಪ್ರತ್ಯಯಂ ಹುಟ್ಟುವದು.

ವೃತ್ತಿ.

ಕನ್ನಡದ ಧಾತುವಿಂಗೆ ಹೇತುವಿನೊಳಂ ಸ್ವಯಂಕರ್ತೃಕಪರಕರ್ತೃಕದೊಳಂ ಇಸುವಕ್ಕುಂ; ಸಂಸ್ಕೃತದನೇಕಾಕ್ಷರಧಾತುಗೆ ಸ್ವಯಂಕರ್ತೃವಿನೊಳಿಸುವಕ್ಕುಂ; ಪ್ರಯೋಜನವಸ್ತುವಿನೊಳ್ಕರ್ತೃವಿವಕ್ಷೆಯಾಗೆ, ಇಸುವಕ್ಕುಂ.

ಪ್ರಯೋಗಂ.

ಹೇತುಗೆ—ಮಾತಿಂ ನಗಿಸಿದಂ; ಮೃಗಗಣಮಂ ಪೋದ ಪೆಜ್ಜೆಯಿಂ ಕಾಣಿಸಿದಂ.

ಸ್ವಯಂಕರ್ತೃವಿವಕ್ಷೆಯಾಗೆ—ನಿಟ್ಟಿಸಿದಂ (748); ತುಟ್ಟಿಸಿದಂ (749); ಘೃತಾಹುತಿವಡೆದನಲನಂತೆ ಮಿಗೆ ದಳ್ಳಿಸಿದಂ.

ಅನ್ಯಕರ್ತೃಗೆ—ನುಡಿಯಿಸಿದಂ; ಮುಡಿಯಿಸಿದಂ; ಕಡಿಯಿಸಿದಂ (807).

ಏಕಾಕ್ಷರದೊಳ್ ಅನ್ಯಕರ್ತೃಗೆ—ಈಯಿಸಿದಂ; ಕೇಯಿಸಿದಂ; ನೋಯಿಸಿದಂ; ಜಗುನೆಯ ತಡಿಯಲ್ಲಿ ತುರುಗಳಂ ಮೇಯಿಸಿದಂ.

ಸಂಸ್ಕೃತಧಾತುವಿನ ಸ್ವಯಂಕರ್ತೃಗೆ—ಖಂಡಿಸಿದಂ, ಖಂಡಿಸಿದಪಂ.—ಭಿನ್ನಕರ್ತೃವಿನೊಳಿಸುವಿಲ್ಲ.

ಪ್ರಯೋಜನವಸ್ತುವಿಂಗೆ ಸಂಸ್ಕೃತಕ್ಕೆ—ಚಿತ್ರಿಸಿದಂ; ಮುದ್ರಿಸಿದಂ.

ಕನ್ನಡಕ್ಕೆ—ಪೊಂಗಿಸಿದಂ; ಸೊಪ್ಪಿಸಿದಂ.

ಸೂತ್ರಂ.

ನೆಗೞ್ದಿರ್ದ[1] ರೇಫೞಳನಾಂ
ತಗಾಂತಸಾಂತೋತ್ವದಿದಿರ ವತ್ವಂ ಪತ್ವಂ |
ಪುಗುಗುಂ ದ್ವಿತ್ವಂ ಮೇಣ್ ಸುಗು
ಯುಗಕ್ಕೆ ಲೋಪೋಕ್ತಿ ನಾಂತಣಾಂತಂ ಬತ್ವಂ || 232 ||

The ವ of the Future tense (S. 221), when preceded by ರ್ (ಕ), ೞ್ (ಕ), ಳ್ (cf. S. 18), ನ್, ಗ್, ಸ್ and ಓ, becomes ಪ, and this ಪ may be doubled (cf. Ss. 160; 184; 233). Under such circumstances ಗ್ and ಸ್ (cf. S. 228) must be elided. The ವ preceded by ನ್ (as an exception) and ಣ್ becomes ಬ.

ಪದಚ್ಛೇದಂ.

ನೆಗೞ್ದು ಇರ್ದ ರೇಫೞಳನಾಂತಗಾಂತಸಾಂತೋತ್ವದ ಇದಿರ ವತ್ವಂ ಪತ್ವಂ; ಪುಗುಗುಂ ದ್ವಿತ್ವಂ ಮೇಣ್; ಸುಗುಯುಗಕ್ಕೆ ಲೋಪೋಕ್ತಿ; ನಾಂತಣಾಂತಂ ಬತ್ವಂ.

ಅನ್ವಯಂ.

ನೆಗೞ್ದಿರ್ದ ರೇಫೞಳನಾಂತಗಾಂತಸಾಂತೋತ್ವದ ಇದಿರ ವತ್ವಂ ಪತ್ವಂ; ಮೇಣ್ ದ್ವಿತ್ವಂ ಪುಗುಗುಂ; ಸುಗುಯುಗಕ್ಕೆ ಲೋಪೋಕ್ತಿ; ನಾಂತಣಾಂತಂ ಬತ್ವಂ.

ಟೀಕು.

ನೆಗೞ್ದಿರ್ದ=ಪ್ರಸಿದ್ಧಿವಿಡಿದಿರ್ದ್ದ; ರೇಫ=ರೇಫೆಯ; ೞ=ೞಕಾರದ; ಳ=ಳಕಾರದ; ನಾಂತ=ನಕಾರಾಂತದ; ಗಾಂತ=ಗಕಾರಾಂತದ; ಸಾಂತ=ಸಕಾರಾಂತದ; ಓತ್ವದ=ಓಕಾರದ; ಇದಿರ=ಮುಂದಣ; ವತ್ವಂ=ಭವಿಷ್ಯಂತಿಯ ವಕಾರಂ; ಪತ್ವಂ=ಪಕಾರವಪ್ಪುದು; ಮೇಣ್=ವಿಕಲ್ಪದಿಂದೆ; ದ್ವಿತ್ವಂ=ದ್ವಿರ್ಭಾವಂ; ಪುಗುಗುಂ=ಪ್ರವೇಶವಾಗುವದು; ಸುಗುಯುಗಕ್ಕೆ=ಸುಕಾರ ಗುಕಾರಂಗಳ್ಗೆ; ಲೋಪೋಕ್ತಿ=ಲೋಪದ ವಾಕ್ಯಂ ಬಪ್ಪುದು; ನಾಂತಣಾಂತಂ=ನಕಾರಾಂತ ಣಕಾರಾಂತವಾಗೆ; ಬತ್ವಂ=ವಕಾರಂ ಬಕಾರಮಪ್ಪುದು.

ವೃತ್ತಿ.

ರೇಫೆೞಕಾರಳಕಾರನಕಾರಗಕಾರಸಕಾರಓಕಾರಾಂತದ ಧಾತುವಿನ ಪರದ ಭವಿಷ್ಯಂತಿಯ ವಕಾರಕ್ಕೆ ಪಕಾರಮಕ್ಕುಂ; ಅದರ್ಕೆ ವಿಕಲ್ಪದಿಂ ದ್ವಿತ್ವಮುಮಕ್ಕುಂ; ಗಾಂ

1) ಶಿಥಿಲತ್ವಂ.

ತಸಾಂತಧಾತುವಿನ ಕಡೆಗೆಲ್ಲಿಯುಂ ಲೋಪಮಕ್ಕುಂ; ನಾಂತಣಾಂತಂಗಳ ಪರದ ವತ್ತಕ್ಕೆ ಬತ್ತಮಕ್ಕುಂ.

ಪ್ರಯೋಗಂ.

ರೇಫಕ್ಕೆ—ಕೂರ್ಪ್ಪಂ, ಬರ್ಪ್ಪಂ, ತರ್ಪ್ಪಂ, ಇರ್ಪ್ಪಂ; ಆ ಪುರದೊಳಿರ್ಪ್ಪನಿನಕುಲ ದೀಪಂ.

ಉಕಾರಕ್ಕೆ—ಆರ್ಪ್ಪಂ, ತೋರ್ಪ್ಪಂ, ಮಾರ್ಪ್ಪಂ. (cf. Ss. 42; 66; 183).

ಟಕಾರಕ್ಕೆ—ಅಗಟ್ಬಂ, ಕೀಟ್ಬಂ.

ಡಕಾರಕ್ಕಾದೇಶಮಾದ ಟಕಾರಕ್ಕೆ—ಬೆಗಟ್ಬಂ, ಬಿಸುಟ್ಬಂ, ನೋಟ್ಬಂ, ಬೇಟ್ಬಂ, ಮಾಟ್ಬಂ.

ನಕಾರಕ್ಕೆ—ಆಂಪಂ, ನೋಂಪಂ, ಸೇಂಪಂ; ಮಲೆದುನರನೊಳಾಂಪಂ.

ಗಾಂತಕ್ಕೆ—ಪೋಪಂ, ತಾಪಂ, ತೂಪಂ, ಮಿರುಪಂ, ಮಿರುಪ ಕಣ್ಣುರಿ.

ಸಾಂತಕ್ಕೆ—ತರಿಪಂ, ಬರಿಪಂ, ಇರಿಪಂ, ಬೆಸಪಂ, ಕಾಪಂ; ನಿನ್ನೊಡನೊಂದು ಭಾಗಮುಂ ಬರಿಪುದು.

ಓಕಾರಕ್ಕೆ—ಓಪಂ.

ದ್ವಿತ್ವಕ್ಕೆ—ತೊಳಪ್ಪಂ; ಬೆಳಪ್ಪಂ; ಉದಯಿಪ್ಪಂ.

ಗಕಾರ ಸಕಾರಂಗಳ ಲೋಪಕ್ಕೆ—ಪೋಪಂ, ತಾಪಂ, ಮಿರುಪಂ;—ತರಿಪಂ, ಬರಿಪಂ, ಇರಿಪಂ.

ಬಕಾರಕ್ಕೆ—ನಾಂಬಂ, ಎಂಬಂ, ತಿಂಬಂ; ಅದು ಪಣ್ಣಾದು ಪೋಗು ನೀನುಮಾನುಂ ತಿಂಬಂ.—ಉಣ್ಬಂ, ಕಾಣ್ಬಂ, ಪೂಣ್ಬಂ.

ಸೂತ್ರಂ.

ದಪದ ಪಕಾರಕ್ಕಂ ಸಂ
ದಿಪುದು ವಿಕಲ್ಪದೆ ಬುಧರ್ಕಳಿಂ ದ್ವಿತ್ವಂ ಸಂ |
ದಿಪುದು ನಕಾರಂ ನೋಧಾ
ತುಪರದೊಳಾ ದದಪವೊದವೆ ನೋಗಂ ಹ್ರಸ್ವಂ || 233 ||

Also the ಪ in ದಪ (the affix for the Present, S. 221) may be doubled. — The two roots ನೋ (442) and ಬೇ (490; s. S. 226), when followed by ದ (the affix for the Past, S. 221) or ದಪ, insert ಂ, and become short (cf. S. 240).

ಪದಚ್ಛೇದಂ.

ದಪದ ಪಕಾರಕ್ಕಂ ಸಂದಿಪುದು ವಿಕಲ್ಪದೆ ಬುಧರ್ಕಳಿಂ ದ್ವಿತ್ವಂ. ಸಂದಿಪುದು ನಕಾರಂ, ನೋಧಾತುಪರದೊಳ್ ಆ ದದಪಂ ಒದವೆ; ನೋಗಂ ಹ್ರಸ್ವಂ.

ಅನ್ವಯಂ.

ದಪದ ಪಕಾರಕ್ಕಂ ಬುಧರ್ಕಳಿಂ ದ್ವಿತ್ವಂ ವಿಕಲ್ಪದೆ ಸಂದಿಪುದು. ನೋಧಾತುಪರದೊಳ್ ಆ ದದಪಂ ಒದವೆ, ನಕಾರಂ ಸಂದಿಪುದು; ನೋಗಂ ಹ್ರಸ್ವಂ.

ಟೀಕು.

ದಪದ=ದಪಕಾರದ; ಪಕಾರಕ್ಕಂ=ಪತ್ವಕ್ಕಂ; ಬುಧರ್ಕಳಿಂ=ವಿದ್ವಾಂಸರಿಂದೆ; ದ್ವಿತ್ವಂ=ದ್ವಿಭಾರ್ವಂ; ವಿಕಲ್ಪದೆ=ವಿಕಲ್ಪದಿಂದೆ; ಸಂದಿಪುದು=ಸಂದಿಸುವದು; ನೋಧಾತುಪರದೊಳ್=ನೋ ಎಂಬ ಧಾತುವಿನ ಪರದಲ್ಲಿ; ಆ ದದಪಂ=ಆ ದಕಾರ ದಪಕಾರಂಗಳ್; ಒದವೆ=ಪ್ರಾಪ್ತಿಸೆ; ನಕಾರಂ=ನಕಾರಾಗಮಂ; ಸಂದಿಪುದು=ಬರ್ಪುದು; ನೋಗಂ=ನೋ ಎಂಬುದರ್ಕಂ; ಹ್ರಸ್ವಂ=ಹ್ರಸ್ವಂ ಬರ್ಪುದು.

ವೃತ್ತಿ.

ವಿಕಲ್ಪದಿಂ ದಪದ ಪಕಾರಕ್ಕಂ ದ್ವಿತ್ವಮಕ್ಕುಂ. ದ ದಪಂಗಳೊದವೆ ನೋಧಾತುವಿನ ಪರದೊಳ್ ನಕಾರಮುಂ ನೋಗೆ ಹ್ರಸ್ವಮುಮ್ ಅಕ್ಕುಂ. ಸಮುಚ್ಚಯದಿಂ ಬೇ ಎಂಬ ಧಾತುಗಮಂತೆ.

ಪ್ರಯೋಗಂ.

ದ್ವಿತ್ವವಿಕಲ್ಪಕ್ಕೆ—ಬರೆದಪಂ, ಬರೆದಪ್ಪಂ; ಕರೆದಪಂ, ಕರೆದಪ್ಪಂ; ನಿಲಿಸಿದಪಂ, ನಿಲಿಸಿದಪ್ಪಂ; ಇೞಿದಪಂ, ಇೞಿದಪ್ಪಂ.

ನೋಬೇಧಾತುಗಳ್ಗೆ—ನೊಂದಂ, ನೊಂದಪಂ; ಬೆಂದಂ, ಬೆಂದಪಂ.

ಸೂತ್ರಂ.

ಸತತಂ ಮಧ್ಯಮಪುರುಷ
ಪ್ರತಿಷೇಧದ ವಿಧಿಯೊಳಂ ಪ್ರಯೋಜನವಸ್ತ್ವಾ |
ಶ್ರಿತಹೇತುಕ್ರಿಯೆಯೊಳಮ
ನ್ವಿತಮಲ್ಕ್ರಿಯೆ ತಾಂ ಕ್ರಿಯಾರ್ಥಮಪ್ಪೆಡೆಗಳೊಳಂ || 234 ||

When a prohibition (ಪ್ರತಿಷೇಧಂ) existed and is changed into an order or permission (ವಿಧಿ, i. e. in the Permissive Imperative) ಅಲ್ (in the form of ಅಲ್+ಇಂ, cf. S. 229) is used.[1] (cf. about ಅಲ್ Ss. 61; 70; 119; 121). — Further ಅಲ್ is used before words expressing usefulness or fitness for, and also to make an action the object of an action, i. e. in the Infinitive (ಕ್ರಿಯಾರ್ಥಂ. About the Infinitive with ಅಲ್ see S. 249).

1) In the Canarese of the present day the form is ಅಲಿ for the Singular and Plural. (The 88th Sûtra of the 4th Pâda (cf. Ss. 83 seq.) of the ಶಬ್ದಾನುಶಾಸನಂ has an ಅಲಿಂ just in the same sense as that of the Infinitive ಅಲ್; it says: || ಪ್ರಾಕ್ಪ್ರಯೋಗೇಽಚಾವಿಕೃತಾತ್ || ಅವಿಕೃತಾದಮುಃ ಪ್ರಾಗಲ್ಯ್ಯಭವತಿ ಚ ಬೇಡಂಬೇಡ ಇತ್ಯನಯೋಃ ಪ್ರಯೋಗೇ ಅಪ್ರಯೋಗೇ ಚ ವಿಷಯೇ || Examples: ಪೆಂಡಿರಂ ನಂಬಲಿಂ ಬೇಡಂ | ನಂಬಲಿಂ ಬೇಡ | ನಂಬಲಿಂ | ಅಕಾರ್ಯಮಂ ಮಾಡಲಿಂ ಬೇಡಂ | ಮಾಡಲಿಂ | ಅವಿಕೃತಾದಿತಿಕಿಂ || ನೋಡಲ್ ಬೇಡ | etc.;—it uses ಅಲ್ for the Permissive Imper., S. 87.

## ಪದಚ್ಛೇದಂ.

ಸತತಂ ಮಧ್ಯಮಪುರುಷಪ್ರತಿಷೇಧದ ವಿಧಿಯೊಳಂ ಪ್ರಯೋಜನವಸ್ತ್ವಾಶ್ರಿತಹೇತುಕ್ರಿಯೆಯೊಳಂ ಅನ್ವಿತಂ ಅಲ್ ಕ್ರಿಯೆ ತಾಂ ಕ್ರಿಯಾರ್ಥಂ ಅಪ್ಪ ಎಡೆಗಳೊಳಂ.

## ಅನ್ವಯಂ.

ಸತತಂ ಮಧ್ಯಮಪುರುಷಪ್ರತಿಷೇಧದ ವಿಧಿಯೊಳಂ ಪ್ರಯೋಜನವಸ್ತ್ವಾಶ್ರಿತಹೇತುಕ್ರಿಯೆಯೊಳಂ ಕ್ರಿಯೆ ತಾಂ ಕ್ರಿಯಾರ್ಥಂ ಅಪ್ಪೆಡೆಗಳೊಳಂ ಅಲ್ ಅನ್ವಿತಂ.

## ಟೀಕು.

ಸತತಂ=ಆವಾಗಳುಂ; ಮಧ್ಯಮಪುರುಷ=ಮಧ್ಯಮಪುರುಷದ; ಪ್ರತಿಷೇಧದ=ಪ್ರತಿಷೇಧಾರ್ಥದ; ವಿಧಿಯೊಳಂ=ವಿಧಿಯಲ್ಲಿಯುಂ; ಪ್ರಯೋಜನವಸ್ತು=ಪ್ರಯೋಜನವಸ್ತುವಿನಲ್ಲಿ; ಆಶ್ರಿತ=ಆಶ್ರಯಿಸಲ್ಪಟ್ಟ; ಹೇತುಕ್ರಿಯೆಯೊಳಂ=ಕಾರಣಕ್ರಿಯೆಯಲ್ಲಿಯುಂ; ಕ್ರಿಯೆ=ಕ್ರಿಯೆ; ತಾಂ=ತಾಂ; ಕ್ರಿಯಾರ್ಥಂ=ಕ್ರಿಯಾಪ್ರಯೋಜನಂ; ಅಪ್ಪೆಡೆಗಳೊಳಂ=ಆಗುವೆಡೆಗಳಲ್ಲಿಯುಂ; ಅಲ್=ಅಲ್ಲೆಂಬುದು; ಅನ್ವಿತಂ=ಕೂಡಲ್ಪಡುವದು.

## ವೃತ್ತಿ.

ಮಧ್ಯಮಪುರುಷಪ್ರತಿಷೇಧದ ಕ್ರಿಯೆ ವಿಧ್ಯರ್ಥಮಾದಲ್ಲಿಯುಂ ಪ್ರಯೋಜನವಸ್ತುವಿಂಗೆ ನಿಮಿತ್ತಮಪ್ಪ ಕ್ರಿಯೆಯೊಳಂ ಕ್ರಿಯೆ ತಾಂ ಕ್ರಿಯಾರ್ಥಮುಂ ಪೇೞ್ದೆಡೆಯೊಳಂ ಅಲ್ ಅಕ್ಕುಂ.

## ಪ್ರಯೋಗಂ.

ವಿಧ್ಯರ್ಥಮಾದಲ್ಲಿ—ಉಸುರಲಿಂ; ಸಾರಲಿಂ (ಬಲ್ಲೆರೆಯನೆಂದುದೆ ಮಾತು); ಮಿಱಲಿಂ; ಎಳಿದಂ ಗೆಯ್ಯಲಿಮಿಾಗಳೆಮ್ಮೊಳ್; ಆರಯ್ದಾರುಂ ಸಾರಲಿಂ.

ವಿಧ್ಯರ್ಥಮಲ್ಲದ ಪ್ರತಿಷೇಧಕ್ರಿಯೆಯೊಳ್ ಅಲ್ ಅಕ್ಕುಂ [ವಿಧಿ ಬಾರದಲ್ಲಿಯುಂ][1]—ಪೆಱತೊಂದನಣಂಬಗೆಯಲ್ ಗಡ ನಿನಗೆ ಸುಮತಿ ಬೇೞ್ಪಾಂ ಬೇೞ್ಪೆಂ [ಬನದಲ್ಲಿ ಪುಗಲ್ ಪುಗಲೆಂಬ ಗಂಡುಗೋಗಿಲೆ].

ಪ್ರಯೋಜನವಸ್ತುಕ್ರಿಯೆಗೆ—ತಱಿಯಲ್ಕೆಕ್ಕಳವರ್ತಿಗಳ್ಗೆ [-ಕ್ಕಧಳವ-M. A.] ಬಿಡದೀಯಲ್ಕೆಕ್ಕ ಸಂಪತ್ತಿ; ಮಾತಱಿಯಲ್ಕೆಕ್ಕ ವಿವೇಕಂ.

ಕ್ರಿಯೆಗೆ—ಗೆಲಲ್ಬಂದಂ; ಮುತ್ತಲ್ಪೇೞ್ದಂ; ಈಯಲ್ಬಂದತ್ತು ಕಲ್ಪಾಂಘ್ರಿಪನಭಿಮತಂ (-ತಮಂ).

1) M. B. has here nothing to introduce the example. The second sentence in brackets is in M. B. and in one of our own Manuscripts.

ಸೂತ್ರಂ.

In the last two (Infinitve—) cases the Dative of ಅಲ್ (ಅಲ್ಕೆ) may be used, or the ಲ್ be dropped.

ಸಂದಿಪುದಲ್ವಿನ ಪರದೊಳ್
ಬಂದು ಕೆಕಾರಮುಮದೊರ್ಮೆ ವೈಕಲ್ಪಿಕದಿಂ |
ಸಂದಿಪುದಲ್ಗಂ ಲೋಪಂ
ಬಂದಾ ಪ್ರತಿಷೇಧವಿಧಿಯನೊದವದ ಪಕ್ಷಂ || 235 ||

ಪದಚ್ಛೇದಂ.

ಸಂದಿಪುದು ಅಲ್ವಿನ ಪರದೊಳ್ ಬಂದು ಕೆಕಾರಮುಂ ಅದು ಒರ್ಮೆ, ವೈಕಲ್ಪಿಕದಿಂ ಸಂದಿಪುದು ಅಲ್ಗಂ (ಅಲ್ಲಂ) ಲೋಪಂ ಬಂದು, ಆ ಪ್ರತಿಷೇಧವಿಧಿಯಂ ಒದವದ ಪಕ್ಷಂ.

ಅನ್ವಯಂ.

ಆ ಪ್ರತಿಷೇಧವಿಧಿಯಂ ಒದವದ ಪಕ್ಷಂ ಅಲ್ವಿನ ಪರದೊಳ್ ಕೆಕಾರಮುಂ ಅದು ಒರ್ಮೆ ಬಂದು ಸಂದಿಪುದು, ವೈಕಲ್ಪಿಕದಿಂ ಅಲ್ಗಂ ಲೋಪಂ ಬಂದು ಸಂದಿಪುದು.

ಟೀಕು.

ಆ ಪ್ರತಿಷೇಧವಿಧಿಯಂ=ಆ ಮಧ್ಯಮಪುರುಷದ ಪ್ರತಿಷೇಧದ ವಿಧಿಯಂ; ಒದವದ ಪಕ್ಷಂ=ಪ್ರಾಪ್ತಿಸದ ಪಕ್ಷದಲ್ಲಿ; ಅಲ್ವಿನ=ಅಲ್ ಎಂಬುದಱ; ಪರದೊಳ್=ಮುಂದುಗಡೆಯಲ್ಲಿ; ಕೆಕಾರಮುಂ=ಕೆಕಾರಮುಂ; ಅದು=ಅದು; ಒರ್ಮೆ=ಒಂದು ಬಾರೆ; ಬಂದು=ಬಂದು; ಸಂದಿಪುದು=ಸಂದಿಸುವದು; ವೈಕಲ್ಪಿಕದಿಂ=ವಿಕಲ್ಪದಿಂದೆ; ಅಲ್ಗಂ=ಅಲ್ ಎಂಬುದಱ ಲಕಾರಕ್ಕಂ; ಲೋಪಂ=ಅದರ್ಶನಂ; ಬಂದು ಸಂದಿಪುದು=ಬರ್ಪುದು.

ವೃತ್ತಿ.

ಪ್ರತಿಷೇಧದ ವಿಧಿ ಪೊರ್ದದೊಡಲುವಿನ ಮುಂದೊರ್ಮೆ ಕೆಕಾರಮಕ್ಕುಂ; ಆಯಲ್ಗೆ ವಿಕಲ್ಪದಿಂ ಲೋಪಂ.

ಪ್ರಯೋಗಂ.

ಕೆಕಾರಕ್ಕೆ—ನುಡಿಯಲ್ಕೆ ಬಂದಂ; ಪೇೞಲ್ಕೆ ಕೇಳ್ದಂ; ಬೇಡಲ್ಕೆ ಬಂದಂ; ಬಿತ್ತರಿಸಲ್ಕವೇೞ್ ಸುರ್ವರ್ಣಾಸ್ತೋತ್ರಕರವಮಂ.

ಅಲುವಿನ ಲೋಪಕ್ಕೆ—ಉಡಲ್ವೇೞ್, ಉಡವೇೞ್; ತರಲ್ವೇೞ್, ತರವೇೞ್.

ಸೂತ್ರಂ.

The Terminations for the Past (Gerund, ವಿಹಿತಾವ್ಯಯ;

ಪ್ರತಿಪಾದ್ಯಮುತ್ತಮಿತ್ತಂ
ಮತಿವಂತರಿನೆಯ್ದೆ ಪೂರ್ವಕಾಲಕ್ರಿಯೆಗಾ |

see Conclusion S. 5) Participle (ಭೂತಕ್ರಿಯೆ) are ಉ and ಇ ಯುತುಮುತ್ತುಮುತ್ತೆಯುತೆಯೆಂದು ತಗುಳ್ಗುಂ ವರ್ತಮಾನವಿಹಿತಕ್ರಿಯೆಯೊಳ್ || 236 ||

(cf. S. 221).—Remark: ಉ is joined to all monosyllabic roots (cf. S. 241), and to roots with final ಇ and ಎ; ಇ to roots with final ಉ (cf. S. 230); ಉ or ಇ optionally to roots with final consonants. The ಉ is added to the tense-affix ದ (S. 221).—The Terminations for the Present Participle (ವರ್ತಮಾನಕ್ರಿಯೆ) are ಉತುಂ, ಉತ್ತುಂ, ಉತ್ತೆ, ಉತೆ. (Regarding the so-called present and past "Relative Participles" see S. 73. In the Atharvavêda Prâtiśâkhyam IV, 29 a Participle is called ಕರ್ಮನಾಮಂ).

## ಪದಚ್ಛೇದಂ.

ಪ್ರತಿಪಾದ್ಯಂ ಉತ್ವಂ ಇತ್ವಂ ಮತಿವಂತರಿಂ ಎಯ್ದೆ ಪೂರ್ವಕಾಲಕ್ರಿಯೆಗೆ; ಆ, ಉತುಂ ಉತ್ತುಂ ಉತ್ತೆ ಉತೆ ಎಂದು, ತಗುಳ್ಗುಂ ವರ್ತಮಾನವಿಹಿತಕ್ರಿಯೆಯೊಳ್.

## ಅನ್ವಯಂ.

ಮತಿವಂತರಿಂ ಎಯ್ದೆ ಪೂರ್ವಕಾಲಕ್ರಿಯೆಗೆ ಉತ್ವಂ ಇತ್ವಂ ಪ್ರತಿಪಾದ್ಯಂ; ವರ್ತಮಾನವಿಹಿತಕ್ರಿಯೆಯೊಳ್ ಆ, ಉತುಂ ಉತ್ತುಂ ಉತ್ತೆ ಉತೆ ಎಂದು, ತಗುಳ್ಗುಂ.

## ಟೀಕು.

ಮತಿವಂತರಿಂ=ಬುದ್ಧಿವಂತರಿಂದೆ; ಎಯ್ದೆ=ಚನ್ನಾಗಿ; ಪೂರ್ವಕಾಲಕ್ರಿಯೆಗೆ=ಮೊದಲ ಕಾಲದ ಕ್ರಿಯೆಗೆ; ಉತ್ವಂ=ಉಕಾರಂ; ಇತ್ವಂ=ಇಕಾರಂ; ಪ್ರತಿಪಾದ್ಯಂ=ಪ್ರತಿಪಾದಿಸಲ್ಪಡುವದು; ವರ್ತಮಾನ=ವರ್ತಮಾನಕಾಲದಲ್ಲಿ; ವಿಹಿತ=ಕೂಡಲ್ಪಟ್ಟ; ಕ್ರಿಯೆಯೊಳ್=ಕ್ರಿಯೆಯಲ್ಲಿ; ಆಯುತುಂ=ಆ ಉತುಂ ಎಂದು; ಉತ್ತುಂ=ಉತ್ತುಂ ಎಂದು; ಉತ್ತೆ=ಉತ್ತೆ ಎಂದು; ಉತೆ=ಉತೆ ಎಂದು; ತಗುಳ್ಗುಂ=ಎಯ್ದುವದು.

## ವಿಚಾರಂ.

ಈ (s. S. 226), ಓ (s. S. 226), ಕಾ (s. S. 226), ಕೀ (s. S. 226), ಕೇ (s. S. 226), ನೋ (S. 233), ಪೂ (s. S. 226), ಬೇ (S. 233; s. S. 226), ಬಾ (s. S. 226) ಎಂಬೇಕಾಕ್ಷರ ಧಾತುಗಳ್ಗಂ ಇಕಾರಾಂತಂಗಳ್ಗಂ ಎಕಾರಾಂತಂಗಳ್ಗಂ ಉಕಾರಂ ಪತ್ತುವುದು. ಉಕಾರಾಂತಂಗಳ್ಗೆ ಇಕಾರಂ ಪತ್ತುವುದು. ವ್ಯಂಜನಾಂತಂಗಳ್ಗೆ ಎರಡುಂ ಪತ್ತುಗುಂ. ಅಲ್ಲಿ ಉತ್ವಂ ಪತ್ತಿದಲ್ಲಿ ಭೂತಕಾಲದ ದಕಾರಂ ಪತ್ತುವುದು, ಇತ್ವಂ ಪತ್ತಿದಲ್ಲಿ ದತ್ವಂ ಬಾರದು; ಅವಂ ಪ್ರಯೋಗಂಗಳಲ್ಲಿ ನೋಡಿ ತಿಳಿವುದು. ಬಂದಂ ಪೋದಂ ಎಂಬಲ್ಲಿ ಬಂದು ಪೋದಂ; ಪೋದಂ ಬಂದನೆಂಬಲ್ಲಿ ಪೋಗಿ ಬಂದಂ ಎಂಬಂತೆ.

## ವೃತ್ತಿ.

ಭೂತಕಾಲಕ್ರಿಯೆಯೊಳುಕಾರಮುಮಿಕಾರಮುಮಕ್ಕುಂ; ವರ್ತಮಾನ ಕ್ರಿಯೆಯೊಳುತುಂ ಉತ್ತುಂ ಉತ್ತೆ ಉತೆ ಎಂದು ನಾಲ್ಕು ರೂಪಮಕ್ಕುಂ.

ಭೂತಕಾಲದುಕಾರಕ್ಕೆ—ಕುಸಿದು ನಡೆದಂ; ಬಸೆದು ಕೊಟ್ಟಂ; ನೆನೆದು ಪೇೞ್ದಂ; ಮಿಂದುಂಡಂ.

ಇಕಾರಕ್ಕೆ—ನಚ್ಚಿ ಬಂದಂ; ಮಚ್ಚಿ ಪೊಗೞ್ದಂ; ಎತ್ತಿ ನಡೆದಂ; ಮುತ್ತಿ ಬಿಟ್ಟಂ.

ವರ್ತಮಾನದೊಳ್ ಉತುಗೆ—ನಗುತುಂ ಬಂದಂ; ಪುಗುತುಮಿರ್ದಂ; ಕರೆಯುತುಂ ಪೋದಂ; ಸೂಸುತುಂ ನಡೆದಂ.

ಉತ್ತುಗೆ—ಕಾದುತ್ತುಂ ಬಂದಂ (ಕಾಡುತ್ತುಂ ಬಂದಂ); ಜಡಿಯುತ್ತುಂ ಪೋದಂ; ನಿವರ್ತಿಸುತ್ತುಮಿರೆ.

ಉತ್ತೆಗೆ—ಕೆತ್ತುತ್ತೆ ನಡೆದಂ [ಕಡಿದಂ]; ಪರಸುತ್ತೆ ಬಂದಂ; ಪೋಗು ಪೋಗು ಕಾದುತ್ತೆ ಬಂದಪೆಂ ಸಲ್ಲವೆಂವ್ಮೊೞಿವು (ಸಲ್ಲವೆವೆಮ್ಮೊೞಿವು).

ಉತೆಗೆ—ಮಿಱುಗುತೆ ಪೋದಂ; ಎನುತೆ [ಎಸುತೆ] ನಿಂದಂ; ಈಸುತಿರ್ದಂ; (ತಾನಾಂಬೆಗೆ ಪೇೞ್ದುದಂ ತೆರುತಿರ್ಪರ್); ಎನುರುತಿರ್ಪಂ.

## ಸೂತ್ರಂ.

ದ ದಪಂಗಳ್ಪರದೊಳಾತ್ತ
ಮೊದವಿರೆ ಮಿಾಯೆಂಬುದರ್ಕೆ ತರ್ಬರ್ಗಳ್ಗೊಂ |
ದಿದ ಕೊಲ್ಸಲ್ಗಳ್ಗಮರ್ದು
ರ್ಪುದು ನತ್ವಂ ನಿಲ್ಗೆ ಬಲ್ಲರಿಂದೆ ವಿಕಲ್ಪಂ || 237 ||

When the roots ಮಿಾ (492), ತರ್ (579), ಬರ್ (580), ಕೊಲ್ (632) and ಸಲ್ (633) are followed by ದ and ದಪ, they become ಮಿನ್, ತನ್, ಬನ್, ಕೊನ್ and ಸನ್; ನಿಲ್ (634) may keep its form.—Remark: ಬರ್ (580) and ತರ್ (579) become ಬನ್ and ತನ್ also before the ಇಂ of the Imperative (S. 229).

## ಪದಚ್ಛೇದಂ.

ದ ದಪಂಗಳ್ ಪರದೊಳ್ ತಾಂ ಒದವಿ ಇರೆ, ಮಿಾ ಎಂಬುದರ್ಕೆ ತರ್ ಬರ್ಗಳ್ಗೆ ಒಂದಿದ ಕೊಲ್ ಸಲ್ಗಳ್ಗೆ ಅಮರ್ದು ಇರ್ಪುದು ನತ್ವಂ; ನಿಲ್ಗೆ ಬಲ್ಲರಿಂದೆ ವಿಕಲ್ಪಂ.

## ಅನ್ವಯಂ.

ಪರದೊಳ್ ದ ದಪಂಗಳ್ ತಾಂ ಒದವಿರೆ, ಮಿಾ ಎಂಬುದರ್ಕೆ ತರ್ ಬರ್ಗಳ್ಗೆ ಒಂದಿದ ಕೊಲ್ಸಲ್ಗಳ್ಗೆ ನತ್ವಂ ಅಮರ್ದು ಇರ್ಪುದು; ನಿಲ್ಗೆ ಬಲ್ಲರಿಂದೆ ವಿಕಲ್ಪಂ.

## ಟೀಕು.

ಪರದೊಳ್=ಧಾತುವಿನ ಪರದಲ್ಲಿ; ದ ದಪಂಗಳ್=ದಕಾರ ದಪಕಾರಂಗಳ್; ತಾಂ=ತಾಂ; ಒದವಿರೆ=ಪ್ರಾಪ್ತಿಸಿರೆ; ಮಿಾ ಎಂಬುದರ್ಕೆ=ಮಿಾ—ಸ್ನಾಪನೇ—ಎಂಬ ಧಾತುವಿಂಗೆ; ತರ್ಬರ್ಗಳ್ಗೆ=ತರ್ ಬರ್ ಎಂಬ ಧಾತುಗಳ್ಗೆ; ಒಂದಿದ ಕೊಲ್ಸಲ್ಗಳ್ಗೆ=ಕೂಡಿದ ಕೊಲ್ ಸಲ್ ಎಂಬ ಧಾತುಗಳ್ಗೆ;

ನತ್ವಂ=ನಕಾರಂ; ಅಮರ್ದಿರ್ಪುದು=ಪೊರ್ದುಗೆಯಾಗಿರ್ಪುದು; ನಿಲ್ಗೆ=ನಿಲ್ ಎಂಬುದರ್ಕ್ಕೆ; ಬಲ್ಲರಿಂದೆ=ಬಲ್ಲ ವಿದ್ವಾಂಸರಿಂದೆ; ವಿಕಲ್ಪಂ=ವಿಕಲ್ಪವಾಗಿ ಬರ್ಪುದು.

### ವಿಚಾರಂ.

ಶಬ್ದಾನುಶಾಸನದಲ್ಲಿ ಸೂತ್ರಂ— || ಕೊಲ್ಸಲೋರ್ ನಃ || 4, 50 || ಕೊಲ್ಸಲ್ ಇತ್ಯೇತಯೋರ್ಧಾತೋರ್ ನಕಾರಾದೇಶೋ ಭವತಿ ದಕಾರಾದೌ ಪ್ರತ್ಯಯೇ ಪರೇ || ಎಂದುದಾಗಿ ಕೊಲ್ ಸಲ್ ಎಂಬ ಧಾತುಗಳ್ಗೆ ನಕಾರಾದೇಶಮಕ್ಕುಂ, ದಕಾರಾದಿಪ್ರತ್ಯಯಂ ಪರಮಾಗೆ. || ತರ್ಬರೋರ್ ಇಮಿ ಚ || 4, 51 || ತರ್ಬರ್ ಇತ್ಯೇತಯೋರ್ಧಾತೋರ್ ನಕಾರಾದೇಶೋ ಭವತಿ ದಕಾರಾದೌ ಪ್ರತ್ಯಯೇ ಇಮಿ ಚ ಪರೇ || ಎಂದುದಾಗಿ ತರ್ ಬರ್ ಎಂಬ ಧಾತುಗಳ್ಗೆ ನಕಾರಾದೇಶಮಕ್ಕುಂ, ದಕಾರಾದಿಪ್ರತ್ಯಯಂ ಪರಮಾಗೆಯುಂ ಮಧ್ಯಮಪುರುಷದ ವಿಧ್ಯರ್ಥದ ಬಹುವಚನವಾದ ಇಮ್ ಎಂಬುದು ಪರಮಾಗೆಯುಂ; ಅದೆಂತೆಂದೊಡೆ—ತಂದಂ, ತಂದಪಂ, ತಂದು, ತನ್ನಿಂ; ಬಂದಂ, ಬಂದಪಂ, ಬಂದು, ಬನ್ನಿಂ ಎಂದಱಿವುದು.

### ವೃತ್ತಿ.

ದ ದಪಂಗಳ್ಪರಮಾಗೆ, ಮಿಾ ಎಂಬುದರ್ಕಂ ತರ್ ಬರ್ಗಳ ರೇಫೆಗಂ ಕೊಲ್ ಸಲ್ಗಳ ಲತ್ವಕ್ಕಂ ನಕಾರಾದೇಶಂ; ನಿಲ್ ಎಂಬುದರ್ಕೆ ವಿಕಲ್ಪಂ.

### ಪ್ರಯೋಗಂ.

ಕ್ರಮಪ್ರಯೋಗಕ್ಕೆ—ಅಲರ ಮಱೆಯೊಳ್ ಮಿಂದಂ ಭೂಪಾಳಂ, ತಂದಂ, ಬಂದಂ ಫಲ್ಗುಣನಿಲ್ಲಿ ಸಂದಯಮಣಂ ತಾನಿಲ್ಲ, ಕೊಂದಂ ಕೊಲ್ವಂತೆರಸಮನಂಜನಸಿದ್ಧಂ, ಬೇಡರ ವೋಲ್ ಮಸಗಿ ತುರುಗೋಳಲ್ ಬಱೆ ಸಂದಂ; ಮಿಂದಪಂ, ತಂದಪಂ, ಬಂದಪಂ, ಕೊಂದಪಂ, ಸಂದಪಂ.

ನಿಲ್ಗೆ—ನಿಂದಂ, ನಿಲ್ವಂ; ನಿಂದಪಂ, ನಿಲ್ವಪಂ. ಮಂಡಲವ್ಯೂಹನೊಡ್ಡಿ ನಿಂದಂ (ಮಂಡಲವ್ಯೂಹಮನೊಡ್ಡಿ ನಿಂದಂ); ಬೆನ್ನೊಳ್ ನಿಲ್ವಂ ಗಾಂಡೀವಿ (s. S. 241).

### ಸೂತ್ರಂ.

ಪ್ರಕೃತಿಯ ಪೂರ್ವದಿಕಾರದೊ
ಳುಕಾರದೊಳ್ ಹ್ರಸ್ವದೆತ್ವಮೊತ್ವಂ ಬಹುಳಂ |
ಪ್ರಕಟಂ ತರ್ಬರ್ಗಳ ಮೊದ
ಲಕಾರದೊಳ್ದೀರ್ಘವಿಧಿ ವಿಲೋಮಕ್ರಿಯೆಯೊಳ್ || 238 ||

Further, before the affixes ದ and ದಪ, the roots ಇಸು (697), ಬಿಸು (698), ಗಿಱು (885), ಕಿಱು (866), ತಿಱು (865), and ಕಿಡು (284), changing their ಇ into ಎ (cf. Ss. 179; 213), become ಎಚ್, ಬೆಚ್, ಗೆತ್, ಕೆತ್, ತೆತ್, ಕೆಟ್; and the roots ಉಗು (87), ಪುಗು (85), ಕುಡು (277), ತುಡು (276), changing their ಉ into ಒ (cf. S. 213), become ಒಕ್, ಪೊಕ್, ಕೊಟ್, ತೊಟ್ (cf. S. 209).—The ತ in ತರ್ and ಬರ್ (S. 237) is (always) lengthened in the Negative mood (ವಿಲೋಮಕ್ರಿಯೆ; S. 222).

## ಪದಚ್ಛೇದಂ.

ಪ್ರಕೃತಿಯ ಪೂರ್ವದ ಇಕಾರದೊಳ್ ಉಕಾರದೊಳ್ ಹ್ರಸ್ವದ ಎತ್ವಂ ಒತ್ವಂ ಬಹುಳಂ; ಪ್ರಕಟಂ ತರ್ ಬರ್ಗಳ ಮೊದಲ ಅಕಾರದೊಳ್ ದೀರ್ಘವಿಧಿ ವಿಲೋಮಕ್ರಿಯೆಯೊಳ್.

## ಅನ್ವಯಂ.

ವಿಲೋಮಕ್ರಿಯೆಯೊಳ್ ತರ್‌ಬರ್ಗಳ ಮೊದಲ ಅಕಾರದೊಳ್ ದೀರ್ಘವಿಧಿ ಪ್ರಕಟಂ ಎಂಬುದನ್ವಯಂ.

## ಟೀಕು.

ದ ದಪಂಗಳ್ಪರಮಾದ ಎಂಬುದನುವರ್ತನೆ—ಪ್ರಕೃತಿಯ=ದ ದಪಂಗಳ್ಪರಮಾದ ಧಾತುವಿನ; ಪೂರ್ವದ=ಮೊದಲ; ಇಕಾರದೊಳ್=ಇಕಾರದಲ್ಲಿ; ಉಕಾರದೊಳ್=ಉಕಾರದಲ್ಲಿ; ಹ್ರಸ್ವದ=ಹ್ರಸ್ವದ; ಎತ್ವಂ=ಎಕಾರಂ; ಒತ್ವಂ=ಒಕಾರಂ; ಬಹುಳಂ=ಬಹುಳವಾಗಿ ಬರ್ಪುದು; ವಿಲೋಮಕ್ರಿಯೆಯೊಳ್=ಪ್ರತಿಷೇಧದ ಕ್ರಿಯೆಯೊಳ್; ತರ್‌ಬರ್ಗಳ=ತರ್‌ಬರ್ ಎಂಬ ಧಾತುಗಳ; ಮೊದಲ=ಆದಿಯ; ಅಕಾರದೊಳ್=ಅತ್ವದಲ್ಲಿ; ದೀರ್ಘವಿಧಿ=ದೀರ್ಘದ ವಿಧಿ; ಪ್ರಕಟಂ=ಸಿದ್ಧವಾಗುವದು.

## ವಿಚಾರಂ.

ಇಸು, ಬಿಸು, ಗಿೞು, ಕಿೞು, ತಿೞು, ಕಿಡು, ಉಗು, ಪುಗು, ಕುಡು, ತುಡು ಎಂಬೀ ಹ್ರಸ್ವಾದಿದ್ವಿಸ್ವರಂಗಳಾದುಕಾರಾಂತಧಾತುಗಳ್ಗೆ ಕ್ರಮದಿಂದೆ ಆದಿಯ ಇಕಾರಕ್ಕೆಕಾರಂ ಉಕಾರಕ್ಕೊಕಾರಂ ಬರ್ಪುವೆಂದಱಿವುದು.

## ವೃತ್ತಿ.

ದ ದಪಂಗಳ್ಪರಮಾದ ಧಾತುವಿನ ಮೊದಲಿಕಾರದೊಳಮುಕಾರದೊಳಂ ಹ್ರಸ್ವಮಪ್ಪೆತ್ವಮುಮೊತ್ವಮುಮಕ್ಕುಂ; ತರ್ ಬರ್ ಎಂಬ ಧಾತುಗಳ ಮೊದಲಕಾರಕ್ಕೆ ಪ್ರತಿಷೇಧಕ್ರಿಯೆಯೊಳ್ ದೀರ್ಘಮಕ್ಕುಂ.

## ಪ್ರಯೋಗಂ.

ಇತ್ವದೆತ್ವಕ್ಕೆ—ಬಿಸು, ಬೆಚ್ಚಂ; ತಿೞು, ತೆತ್ತಂ; ಗಿೞು, ಗೆತ್ತಂ; ಕಿಡು, ಕೆಟ್ಟಂ. (ಮರುಗುವಿನಂ ಮಾಣದೆಚ್ಚನರಿವಾಹಿನಿಯಂ; ಮುಗಿಲಂಮಾರನೆ ಗೆತ್ತಂ s. S. 241).

ಉತ್ವದೊತ್ವಕ್ಕೆ—ಉಗು, ಒಕ್ಕಂ; ಪುಗು, ಪೊಕ್ಕಂ; ಕುಡು, ಕೊಟ್ಟಂ, ಎನಿತುಮನಿತುಂ ಧರ್ಮಜಂ ಸೂಱೆಗೊಟ್ಟಂ; ತುಡು, ತೊಟ್ಟಂ, ತೊಟ್ಟಂ ಸನ್ನೋಹನಾಸ್ತ್ರಮಂ.

ದಪದೊಳಂ—ಎಚ್ಚಪಂ, ಬೆಚ್ಚಪಂ, ತೊಟ್ಟಪಂ, ಕೊಟ್ಟಪಂ ಎಂಬಂತವರ್ಕಂ ಪತ್ತುಗುಂ.

ಬಹುಳದಿಂ ಕೆಲವಱೊಳೆತ್ವಮೊತ್ವಮಿಲ್ಲ—ಇತ್ತಂ; ಇರ್ದಂ; ಇಟ್ಟಂ;—ಉಟ್ಟಂ; ಸುಟ್ಟಂ;—ಉರ್ಕಿದಂ; ಸುರ್ಕಿದಂ. (ಆಗಳೆ ಗಂಡುಡಿಗೆಯುಟ್ಟು ಬಿಟ್ಟು ಹಿಣಿಲಂದಪಕ್ಕಮುಂತೆ).

ದೀರ್ಘಕ್ಕೆ—ಪತಿಗೆಂದು [ಪರಿತಿಗೆಂದು] ಯುದ್ಧದೊಳ್ ಬನ್ನಮಂ ತಾರಂ. ನೃಪಂ ಬೆಂಬಿಟ್ಟಿಂ ದೂದಟ್ಟಿಯುಂ ಬಾರಂ.

ಬಹುಳದಿಂ ಪ್ರತಿಷೇಧಮಲ್ಲಿದಲ್ಲಿಯುಂ (ವಿಧಿಯೊಳ್) ದೀರ್ಘಮುಂಟು—ಬಾರಮರಾಳಿಕಾಗಮನೇ!

ಸೂತ್ರಂ.

Further, as partly seen by S. 238, before the affixes ದ and ದಪ, the roots ಪುಗು (S. 238), ನಗು (86), ಉಗು (S. 238),

ಧಾತುವಿನಂತ್ಯದ ವರ್ಗೋ
ಪೇತತೃತೀಯಾಕ್ಷರಕ್ಕೆ ತಾಂ ಪ್ರಥಮತ್ವಂ |
ಮಾತೆಂ ವ್ಯಂಜನರೂಪದಿ
ನೇ ತೆಱದಿಂ ಸ್ವಂತಧಾತುಗಕ್ಕುಂ ಚತ್ವಂ || 239 ||

ಮಿಗು (88), ಅಡು (274), ಸುಡು (275), ಕುಡು (S. 238), ತುಡು (S. 238), ಬಿಡು (278), ಉಡು (279), ನಡು (280), ಪಡು (281), ಇಡು (283), ಕಿಡು (284), ಮಡು (285), compound-verbs formed with them, and ಮುದು (423 b) change their final soft consonant into the corresponding hard one; and ಇಸು (S. 238), ಬಿಸು (S. 238), ಪಸು (699) their ಸ್ into ಚ್.

ಪದಚ್ಛೇದಂ.

ಧಾತುವಿನ ಅಂತ್ಯದ ವರ್ಗೋಪೇತತೃತೀಯಾಕ್ಷರಕ್ಕೆ ತಾಂ ಪ್ರಥಮತ್ವಂ, ಮಾತೆಂ, ವ್ಯಂಜನರೂಪದಿಂ; ಏ ತೆಱದಿಂ ಸ್ವಂತಧಾತುಗೆ ಅಕ್ಕುಂ ಚತ್ವಂ.

ಅನ್ವಯಂ.

ಧಾತುವಿನ ಅಂತ್ಯದ ವರ್ಗೋಪೇತತೃತೀಯಾಕ್ಷರಕ್ಕೆ ಪ್ರಥಮತ್ವಂ ತಾಂ, ಮಾತೆಂ, ವ್ಯಂಜನರೂಪದಿಂ ಅಕ್ಕುಂ; ಏ ತೆಱದಿಂ ಸ್ವಂತ ಧಾತುಗೆ ಚತ್ವಂ.

ಟೀಕು.

ದ ದಪಂಗಳ್ಪರದೊಳೊದವಿರೆ ಎಂಬುದನುವರ್ತನೆ—ಧಾತುವಿನ=ದ ದಪಂಗಳ್ಪರಮಾದ ಪ್ರಸ್ವಾದಿದ್ವಿಸ್ವರಂಗಳಾದುಕಾರಾಂತಧಾತುವಿನ; ಅಂತ್ಯದ=ಕಡೆಯಣ; ವರ್ಗ=ವರ್ಗಂಗಳಲ್ಲಿ; ಉಪೇತ=ಕೂಡಲ್ಪಟ್ಟ; ತೃತೀಯಾಕ್ಷರಕ್ಕೆ=ಮೂಱನೆಯಕ್ಷರಂಗಳ್ಗೆ; ಪ್ರಥಮತ್ವಂ=ಮೊದಲಕ್ಷರದ ಭಾವಂ; ತಾಂ=ತಾಂ; ಮಾತೆಂ=ಹೇಳ್ವುದೆಂ; ವ್ಯಂಜನರೂಪದಿಂ=ವ್ಯಂಜನದ ರೂಪಿನಿಂದೆ; ಅಕ್ಕುಂ=ಆಗುವದು; ಏತೆಱದಿಂ=ಆವ ರೀತಿಯಿಂದೆಯುಂ; ಸ್ವಂತಧಾತುಗೆ=ಸುಕಾರಾಂತಧಾತುಗೆ; ಚತ್ವಂ=ಚಕಾರಂ ಆಗುವುದು.

ವಿಚಾರಂ.

ಪುಗು, ನಗು, ಉಗು, ಮಿಗು ಎಂಬ ಗಾಂತಕ್ಕಂ—ಅಡು, ಸುಡು, ಕುಡು, ತುಡು, ಬಿಡು, ಉಡು, ನಡು, ಪಡು, ಇಡು, ಕಿಡು, ಮಡು ಎಂಬ ಡಾಂತಕ್ಕಂ—ಆಸೆವಡು (318), ಪಡಲಿಡು (319), ಮುಂಬಿಡು (320), ಹೊಲಬುಗಿಡು (321), ಒಡಂಬಡು (322), ಮೂಗುವಡು (323), ಅಳ್ಕಜಂಬಡು (325) [ಅೞ್ಕಿಜಂ–], ಕರುವಿಡು (326), ತಿಟ್ಟವಿಡು (327), ಉಬ್ಬಸಂಬಡು (328)

ಎಂಬಂತೆ ಬಹುಸ್ವರಯುಕ್ತಂಗಳಾದೊಡಂ ಇಡು, ಪಡು, ಮಡು, ಬಿಡು, ಕುಡು ಎಂಬ ಹ್ರಸ್ವಾದಿ ದ್ವಿಸ್ವರಂಗಳಾದುಕಾರಾಂತಧಾತುಗಳಂತ್ಯವಾಗಿರ್ಪುದಱಿಂದೆ ಈ ಕ್ರಿಯಾಸಮಾಸರೂಪಧಾತುಗಳ್ಗಂ—ದಾಂತದಲ್ಲಿ ಮುದು || ವೃಧ್ಧಾ, to grow || ಎಂಬುದರ್ಕಂ ಪ್ರಥಮಾಕ್ಷರಂ ಬರ್ಕುಂ. ಇಸು ಬಿಸು ಪಸು ಎಂಬ ಸುಕಾರಾಂತಕ್ಕೆ ಚತ್ವಂ ಬರ್ಕುಂ.

## ವೃತ್ತಿ.

ದ ದಪಂಗಳ್ಪರಮಾದ ಧಾತುವಿನ ಕಡೆಯ ವರ್ಗತ್ತತೀಯಾಕ್ಷರಕ್ಕೆ ವ್ಯಂಜನರೂಪದಿಂ ಮೊದಲಕ್ಕರಮಕ್ಕುಂ; ಸುಕಾರಾಂತಧಾತುವಿನ ಕಡೆಯ ಸುಕಾರಕ್ಕೆ ವ್ಯಂಜನಚಕಾರಮಕ್ಕುಂ.

## ಪ್ರಯೋಗಂ.

ಗಕಾರಕ್ಕೆ—ಉಗು, ಒಕ್ಕಂ; ಪುಗು, ಪೊಕ್ಕಂ; ನಗು, ನಕ್ಕಂ; ಮಿಗು, ಮಿಕ್ಕಂ. (ತಕ್ಕೆಂದಱಿವೆಡೆಯೊಳ್ ಮಿಕ್ಕಂ. ಕರ್ಣಾರ್ಜುನರ್ಕಳಂ ಪೊಕ್ಕನಂದು ನಿಜಮಂದಿರಮಂ ಪುರಸ್ಸೈನ್ಯಬೆರಮಂ).

ಡಕಾರಕ್ಕೆ—ನಡು, ನಟ್ಟಂ; ಮಡು, ಮಟ್ಟಂ; ಕಿಡು, ಕೆಟ್ಟಂ; ಕುಡು, ಕೊಟ್ಟಂ; ಸುಡು, ಸುಟ್ಟಂ; ಬಿಡು, ಬಿಟ್ಟಂ. (ಗರಂ ನೆಱಲೊಳೆ ಪೋರ್ವಂತೆವೋಲ್ ದೆಸೆದೆಸೆಗೆಟ್ಟಂ).

ದಕಾರಕ್ಕೆ—ಮುದು, ಮುತ್ತಂ. ಮುತ್ತುದು ನೇಸಱ ತೇಜಂ ಸತ್ತುದು ದಾವಾಗ್ನಿ.

ಸುಕಾರದ ಚತ್ವಕ್ಕೆ—ಪಸು, ಪಚ್ಚಂ; ಬಿಸು, ಬೆಚ್ಚಂ; ಇಸು, ಎಚ್ಚಂ.

ದಪಕ್ಕಮಂತೆ.

## ಸೂತ್ರಂ.

ೞಾಂತದೊಳಂ ಮೃತಿದಾನಾ
ರ್ಥಾಂತದೊಳಂ ವ್ಯಂಜನದ ತಕಾರಂ ದೀರ್ಘಂ |
ಪಿಂತಿರೆ ಬರ್ಕುಂ ಹ್ರಸ್ವತೆ
ೞಾಂತಕ್ಕಂ ರೇಫಮೊರ್ಮೆ ತವುಗೆ ಪಕಾರಂ || 240 ||

Further, before the affixes ದ and ದಪ, the ೞ್ of ಪೞ (863), ತೆಪ್ಪೞ (864), ಕಿೞ (S. 238), ತಿೞ (S. 238), ಗೞ (S. 238), ಪೋೞ (867), ಎಟ್ಟೞ (874), ಆಸೞ (876), ಬೇಸೞ (875) becomes (as partly seen by S. 238) ತ್; the ೞ್ of ಆೞ (? 881) also ಱ್ (cf. S. 232).—ಸಾಯ್ (518 b) and ಈ (1), shortening their Vowel, also get final ತ್. This shortening of the Vowel before ದ and ದಪ appears, for instance, also in ಕಾಣ್ (368), ಏಱ್ (921), ಬೀೞ್ (920), ಆೞ್ (915. cf. S. 233).—The ವ್ of ತವು (641) becomes ಪ್.

## ಪದಚ್ಛೇದಂ.

ೞಾಂತದೊಳಂ ಮೃತಿದಾನಾರ್ಥಾಂತದೊಳಂ ವ್ಯಂಜನದ ತಕಾರಂ; ದೀರ್ಘಂ ಪಿಂತೆ ಇರೆ, ಬರ್ಕುಂ ಹ್ರಸ್ವತೆ; ೞಾಂತಕ್ಕಂ ರೇಫಂ ಒರ್ಮೆ; ತವುಗೆ ಪಕಾರಂ.

### ಅನ್ವಯಂ.

ಪಿಂತೆ ದೀರ್ಘಮಿರೆ, ಹ್ರಸ್ವತೆ ಬರ್ಕುಂ; ಱಾಂತಕ್ಕಂ ಒರ್ಮೆ ರೇಫಂ; ತವುಗೆ ಪಕಾರಂ ಎಂಬುದನ್ವಯಂ.

### ಟೀಕು.

ದ ದಪಂಗಳ್ಪರದೊಳಿರೆ ಎಂಬುದನುವರ್ತನೆ–ಱಾಂತದೊಳಂ=ರೇಫಾಂತಧಾತುಗಳಲ್ಲಿಯುಂ; ಮೃತಿದಾನಾರ್ಥಾಂತದೊಳಂ=ಸಾಯ್ ಈ ಎಂಬ ಮರಣಾರ್ಥದಾನಾರ್ಥದ ಧಾತುಗಳಂತ್ಯದಲ್ಲಿಯುಂ; ವ್ಯಂಜನದ=ವ್ಯಂಜನದ; ತಕಾರಂ=ತತ್ವಂ ಬರ್ಕ್ಕುಂ, ಱಾಂತಕ್ಕಂ ಸಾಯ್ ಎಂಬುದರ್ಕಂ ಆದೇಶವಾಗಿ, ಈ ಎಂಬುದರ್ಕಾಗಮವಾಗಿ ಬರ್ಪುದು; ಪಿಂತೆ=ಹಿಂತೆ; ದೀರ್ಘಂ=ದೀರ್ಘಾಕ್ಷರಂ; ಇರೆ=ಇರೆ; ಹ್ರಸ್ವತೆ=ಹ್ರಸ್ವತ್ವಂ; ಬರ್ಕುಂ=ಬರ್ಪುದು; ಱಾಂತಕ್ಕಂ=ರೇಫಾಂತಕ್ಕೆಯುಂ; ಒರ್ಮೆ=ಒಂದು ಬಾರಿ; ರೇಫಂ=ರೇಫೆ ಬರ್ಪುದು; ತವುಗೆ=ತವು || ಕ್ಷಯೇ || ಎಂಬ ಧಾತುಗೆ; ಪಕಾರಂ=ಪತ್ವಂ ಬರ್ಪುದು.

### ವಿಚಾರಂ.

ಪೆಱು, ತೆಪ್ಪಱು, ಕಿಱು, ತಿಱು, ಗಿಱು, ಪೊಱು, ಎಟ್ಚಱು, ಆಸಱು, ಬೇಸಱು ಎಂಬೀ ಱಾಂತಕ್ಕೆ ತಕಾರಂ ಬರ್ಪುದು; ಉಳಿದ ಱಾಂತಕ್ಕೆ ಒರ್ಮೆ ಎಂಬುದಱಿಂ ವಿಕಲ್ಪದಿಂ ರೇಫೆಯಕ್ಕುಂ.

### ವೃತ್ತಿ.

ದ ದಪಂಗಳ್ಪರಮಾದ ಧಾತುವಿನ ಕಡೆಯ ಱಕಾರಕ್ಕೆಯುಂ ಸಾಯಿೞಯೆಂಬ ಧಾತುಗಳ ಕಡೆಯೊಳಂ ವ್ಯಂಜನತಕಾರಮಕ್ಕುಂ; ಸಾಯಿೞಯೆಂಬವಱಾದಿದೀರ್ಘಕ್ಕೆ ಹ್ರಸ್ವಮಕ್ಕುಂ; ಱಕಾರಕ್ಕೊರ್ಮೆ ರೇಫಮಕ್ಕುಂ; ತವು ಎಂಬ ಧಾತುವಿನ ವಕಾರಕ್ಕೆ ಪಕಾರಮಕ್ಕುಂ.

### ಪ್ರಯೋಗಂ.

ಱಕಾರದ ತಕಾರಕ್ಕೆ–ಕಿಱು, ಕೆತ್ತಂ; ತಿಱು, ತೆತ್ತಂ; ಗಿಱು, ಗೆತ್ತಂ; ಪೆಱು, ಪೆತ್ತಂ. (ಜಾತವೇದಂ ಪಟ್ಟು ಕಪಟಮಯವ್ಯಾಜದಿಂ ಬೇಡಿಬೆತ್ತಂ; ಸಾರಭಂಜಿಕೆವೆತ್ತರಸನಂ ನೋಡಿದಂ).

ಸಾಯ್ ಈ ಎಂಬಿವರ್ಕೆ–ಸತ್ತಂ; ಇತ್ತಂ. (ಕಾದಿನಿಂನುಳ್ಳರುಂಬೆ ಸತ್ತರ್; ನಗೆಮೊಗದೊಳುಗಿದು ಕವಚಮನಿಂದ್ರಗಿತ್ತಂ).

ಸಾಯಿೞಯೆಂಬವಱಂತೆ ಸಮುಚ್ಚಯವಶದಿಂ ಮತ್ತೆ ಕೆಲವಱಾದಿದೀರ್ಘಕ್ಕೆ ಹ್ರಸ್ವಮುಂಟು–(ಕಾಣ್) ಕಂಡಂ; (ಏಟ್) ಎಟ್ಟಿಂ; (ಬೀಟ್) ಬಿಟ್ಟಿಂ; (ಆಟ್) ಅಟ್ಟಿಂ. ಇವು ಮೊದಲಾದುವು[1].

1) The Ṣabdânuṣâsana's Sûtra is (4, 37): ಕೀೞ್ಬೀೞೀೞ್ಗಣಃ, meaning, in this case, only these.

ಱಕಾರದ ರೇಫೆಗೆ—ಆಱು (881) ಎಂಬುದರ್ಕೆ ಅರ್ತಂ; ವಿಕಲ್ಪದಿಂ ಅಱುತನೆಂದುಮುಂಟು—ಅರ್ತ ಕದಂಪು ಬತ್ತಿದ ಕಾಲುಂ. ಆರ್ತಂ (s. Ss. 145; 245); ಮಾರ್ತಪ್ಪ ತೆರೆಗಳಿಂತರಲಾರ್ತುದು (ತೆರೆಗಳನ್ತ—) ತನ್ನದಿ (ಗೆ ಸುರನದಿವಿಭ್ರಮಮಂ).

ತವುಗೆ—ತಪ್ಪಂ, ತಪ್ಪಪಂ; (ತಪ್ಪಂತನ್ನೊಳ್ಪಳಂಬಿಕಿಡಿಗುಟ್ಟಿತಪ್ಪುವಂಬುಗಳನಂ; see s. S. 241).

ಸೂತ್ರಂ.

ನಿರುತಂ ಕ ಚ ಟ ತ ಪಂಗಳ
ಪರದ ದಕಾರಕ್ಕೆ ಪೂರ್ವರೂಪಮದಕ್ಕುಂ |
ಪರವರ್ಣಂ ಧಾತ್ವಂತ್ಯದೊ
ಳಿರೆ ಡತ್ವಂ ಮೇಣ್ತಕಾರಮೊರ್ಮೆಯಕಾರಂ || 241 ||

Further, when the finals of the said verbal themes (Ss. 238—240) have undergone the changes into ಕ್, ಚ್, ಟ್, ತ್ or ಪ್, the following ದ assumes the same respective shape; — after ಉಣ್ (367), ಕಾಣ್ (S. 240) and ಕೊಳ್ (947; S. 245) the ದ becomes ಡ; — after the roots ಕವಲ್ (622 b), ಮಡಲ್ (627), ಬಲ್ (636 b), ಕಲ್ (636 a), ಪೊಲ್ (610), ಸಾಲ್ (642), ನೂಲ್ (644), ಕೂರ್ (561), ಕನರ್ (570), ಕೊನರ್ (567), ತಳಿರ್ (597?), ಚಿಗುರ್ (568), ಚಿಮುರ್ (544), ಅಱಿರ್ (906), ಉಱಿರ್ (905), ಕೀಱಿರ್ (904), ಚಳಿ (935), ಮೊಳೆ (927), ಅಱಿ (871), ಅಱಿ (825), ಮಱಿ (823), ಕುಱಿ (825 b), ಬಾ (s. S. 236), ಕೀ (s. S. 236), ಪೂ (s. S. 236), ಬೀ (468), ಓ (s. S. 236), ಕೂನ್ (432), ಸೀನ್ (431), ಪೇನ್ (433), ಆನ್ (429), ನೋನ್ (430) the ದ generally appears as ತ;—in ಬೆರಂಟಂ (234) the ದ has disappeared (or only ಅಂ has been joined).

ಪದಚ್ಛೇದಂ.

ನಿರುತಂ ಕ ಚ ಟ ತ ಪಂಗಳ ಪರದ ದಕಾರಕ್ಕೆ ಪೂರ್ವರೂಪಂ ಅದು ಅಕ್ಕುಂ; ಪರವರ್ಣಂ ಧಾತ್ವಂತ್ಯದೊಳ್ ಇರೆ, ಡತ್ವಂ; ಮೇಣ್ ತಕಾರಂ; ಒರ್ಮೆ ಅಕಾರಂ.

ಯಥಾನ್ವಯಂ.

ಟೀಕು.

ನಿರುತಂ=ನಿಶ್ಚಯವಾಗಿ; ಕ ಚ ಟ ತ ಪಂಗಳ=ಕಕಾರ ಚಕಾರ ಟಕಾರ ತಕಾರ ಪಕಾರಂಗಳ; ಪರದ=ಮುಂದಣ; ದಕಾರಕ್ಕೆ=ದತ್ವಕ್ಕೆ; ಪೂರ್ವರೂಪಂ=ಮೊದಲಕ್ಷರದ ರೂಪು; ಅದು=ಅದು; ಅಕ್ಕುಂ=ಆಗುವದು; ಪರವರ್ಣಂ=ಕ ಚ ಟ ತ ಪಂಗಳಲ್ಲದ ಅನ್ಯವರ್ಣಂ; ಧಾತ್ವಂತ್ಯದೊಳ್=ಧಾತುಗಳ ಕಡೆಯಲ್ಲಿ; ಇರೆ=ಇರ್ದೊಡೆ; ಡತ್ವಂ=ಡಕಾರಂ; ಮೇಣ್=ಅದಲ್ಲದೆ; ತಕಾರಂ=ತತ್ವಂ; ಒರ್ಮೆ=ಒಂದು ಬಾರಿ; ಅಕಾರಂ=ಅತ್ವಂ ಆಗುವದು.

ವಿಚಾರಂ.

ಉಣ್ ಕಾಣ್ ಎಂಬ ಣಕಾರದ ಕೊಳ್ಧಾತುವಿನ ಣಕಾರದ ಮುಂದೆ ದತ್ವಂ ಡಕಾರವಾಗುವದು.

ಶಬ್ದಾನುಶಾಸನದಲ್ಲಿ ಸೂತ್ರಂ— || ಕವಲಾದಿಭ್ಯಸ್ ತಃ || 4, 66 || ಕವಲಾದಿಭ್ಯೋ ಧಾತುಭ್ಯಃ ಪರಸ್ಯ ದಕಾರಸ್ಯ ತಕಾರಾದೇಶೋ ಭವತಿ || ಎಂದುದಾಗಿ ಕವಲಾದಿಧಾತುಗಳತ್ತಣಿಂ ಪರದ ದಕಾರಕ್ಕೆ ತಕಾರಾದೇಶವಪ್ಪುದು; ಕವಲ್, ಮಡಲ್, ಬಲ್, ಕಲ್, ಪೊಲ್, ಸಾಲ್, ನೂಲ್, ಕೂರ್, ಕನರ್, ಕೊನರ್, ತಳಿರ್, ಚಿಗುರ್, ಬೆಮರ್, ಅಱಿ್, ಉಱಿ್, ಕೀಱಿ್, ಚಳಿ, ಪೊಳೆ, ಅಱಿ, ಅಱಿ, ಮಱಿ, ಕುಱಿ, ಬಾ, ಕೀ, ಪೂ, ಬೀ, ಓ, ಕೂನ್, ಸೀನ್, ಪೇನ್, ಆನ್, ಸೋನ್ ಎಂಬಿವು ಕವಲಾದ್ಯಾಕೃತಿಗಣಂ. ಇವಱಿಲ್ಲಿ ಅಱಿ, ಮಱಿ, ಬೆಮರ್, ಬೆಳರ್ (also in M. A. B; 600), ಕೀಱಿ್ ಎಂಬಿವಾದಿಯಾದುವರ್ಕೆ ವಿಕಲ್ಪದಿಂ ತಕಾರಮಪ್ಪುದಾಗಿ, ಇವು ಪ್ರಯೋಗಗಮ್ಯಂಗಳೆಂದಱಿವುದು.

## ವೃತ್ತಿ.

ಧಾತುವಿನ ಕಡೆಯ ಕ ಚ ಟ ತ ಪಂಗಳ ರೂಪಮಂ ಪರದ ದಕಾರಂ ಪಡೆಗುಂ; ಕ ಚ ಟ ತ ಪಂಗಳಲ್ಲದ ಪೆಱವಕ್ಕರಂಗಳ್ ಧಾತುವಿನ ಕಡೆಯೊಳಿರೆ, ಪರದ ದಕಾರಕ್ಕೆ ಡಕಾರಮುಂ ತಕಾರಮುಕಾರಮುಮುಕ್ಕುಂ.

## ಪ್ರಯೋಗಂ.

ಕಕಾರಕ್ಕೆ—ಮಿಕ್ಕಂ, ಮಿಕ್ಕರ್; ಪೊಕ್ಕಂ, ಪೊಕ್ಕರ್; ನಕ್ಕಂ, ನಕ್ಕರ್; ತಕ್ಕರುಂ.

ಮಿಕ್ಕರಂದೆಕಿ (ಮಿಕ್ಕರದಕೆ) ಮುನಿಸುವ
ರಕ್ಕರವೋದದಕಲ್ಲಪಾಪಿಗಳ್
ರಕ್ಕಸಿಯಮಾಡವದಱೊಳೆ
ಪೊಕ್ಕವರುೞಿದವರೆಸರಸ್ತ್ರತಿಮಣಿಹಾರ (—ರಾ) || metre doubtful ||

ಚಕಾರಕ್ಕೆ—ಎಚ್ಚಂ, ಎಚ್ಚರ್; ಬೆಚ್ಚಂ, ಬೆಚ್ಚರ್; ಪಚ್ಚಂ, ಪಚ್ಚರ್. (ಮಣಿಯ ದೆಮಣಿದಿದಿರನದಿರೆ ಕೂಡಿಱಿದೆಚ್ಚರ್; ನೀರಿಗೆ ಮಾರಿಗೆ ಪಚ್ಚರ್ ದುಟ್ಟೋಡಿ ಘಾಯದಿಂ ಹಯಬಲಮುಂ).

ಟಕಾರಕ್ಕೆ—ತೊಟ್ಟಂ, ತೊಟ್ಟರ್; ಕೊಟ್ಟಂ, ಕೊಟ್ಟರ್; ಬಿಟ್ಟಂ, ಬಿಟ್ಟರ್; ನಟ್ಟಂ, ನಟ್ಟರ್. (ಬಕ್ಕಸಂಬಟ್ಟು ಬಾಯುಂಬಿಟ್ಟರ್ ಭೀಷ್ಮರ್; ಕೊಟ್ಟಂ ಸಂಮೋಹನಮನಭಯಮುಂ ಪಾಂಡವಂ).

ತಕಾರಕ್ಕೆ— ಪೆತ್ತಂ, ಪೆತ್ತರ್; ಕೆತ್ತಂ, ಕೆತ್ತರ್; ಗೆತ್ತಂ, ಗೆತ್ತರ್; ಪೊತ್ತಂ, ಪೊತ್ತರ್. (ಮುಗಿಲಂಮಾರಾನೆಗೆತ್ತರ್).

ಪಕಾರಕ್ಕೆ—ತಪ್ಪಂ, ತಪ್ಪರ್. (ತಪ್ಪಂತಂನೊಳ್ಬಳಂಜಕೆಡಿಗುಟ್ಟಿತಪ್ಪುವಂಬುಗಳನಂ).

ಡಕಾರಕ್ಕೆ—ಉಣ್ಡಂ; ಕಣ್ಡಂ; ಕೊಣ್ಡಂ. (ಮರದಹರಿಯದೊಳುಣುಂಮತಿದೋ

ಳಮದುಂಕವರ್ಣಿಯನೆ ಅದುಂ ಕುರುಪ್ರಭು ಕಂಡಂ ಶರಜಾಲಜರ್ಝರಿತಗಾತ್ರತ್ರಾಣಂ ದ್ರೋಣನಂ; ಭುವನತ್ರಿಣೇತ್ರರುಚಿಯುಂ ಕೈಕೊಂಡನಾ ಪಾಂಡವಂ. s. S. 245).

ದಕಾರಕ್ಕಾದ ತಕಾರಕ್ಕೆ—ಸೊಲ್ತಂ; ಪೊಲ್ತಂ; ನಿಲ್ತಂ; ಕಿಱ್ತಂ; ಉಱ್ತಂ.

(ಮಾಲವದೇಶಮುಂ ಕಿಡಿಸಿ ಧಾರಾಪುರಸ್ತ್ರೀಯರಂ ತೊೞ್ತಿರ್ವಾಡಿದುಂ ಕಾದದಿರ್ದಂದು ಸೊಲ್ತಂ ಕೌಂತೆಯಂ ಕೌರವಂಗೆಂದುಲಿಗುಂ; ಮರಪುಂದಿದಮುಲಿಯನಾಗಳಿನಿಸುಂ ಪೊಲ್ತಂ; ನೊಳ್ಗಿ ಕೊಂಡು ಬೆಂನೊಳ್ ನಿಲ್ತಂ ಗಾಂಡೀವಿ, see s. S. 237).

ಅಕಾರಕ್ಕೆ (ಒಂದು ಸೂೞ್ ದಕಾರಕ್ಕೆ ಟಕಾರಂ ಎಂದು ಪಾಠಾಂತರಂ)—ಬೆರಂಟುಂ. ಬೆರಂಟುವು ಪೊಕ್ಕುೞನುಗುರಿಸಿದುವು (ಕುರುಂಬ).

ಮೇಣೆಂಬುದಱಿಂ ಕೆಲವೞೊಳಿರ್ದಂತೆ ದಕಾರಮೆ—ಪೂಣ್ದಂ; ಮಾಣ್ದಂ; ಎೞ್ದಂ; ನೆೞ್ದಂ (ನೆಲ್ದಂ); ಅೞ್ದಂ (ಆೞ್ದಂ); ಬಿೞ್ದಂ; ಆರ್ದಂ; ನೇರ್ದಂ (ನೆರ್ದಂ). (ಬಾದುಂಟೆಂದು ಹತ್ತನೆಯ ತಲೆಯುಮಂ ನೆರ್ದಾಗಳ್).

ಸೂತ್ರಂ.

Further, the roots ಪೋಗು (91) and ಆಗು (92) lose their ಗ before ದ and ದಪ; and also before ಉತ್ತು, their common substitute in the Imperfect for ಉದು (or ಇತು, S. 226). (cf. S. 232).

ನೆಗೞ್ಗಿಂ ಲೋಪಂ ಪೋಗಾ
ಗುಗಳ ಗಕಾರಕ್ಕೆ ದದಪಮಿರೆಯುಂ ದತ್ವ |
ಕ್ಕೊಗೆದಸ್ವರಯತ್ವಂ ಪ
ತ್ತುಗೆಗೊಂಡುದುಗಾದ ತುತ್ವದೊಳ್ ನೆಲಸಿರೆಯುಂ || 242 ||

ಪದಚ್ಛೇದಂ.

ನೆಗೞ್ಗಿಂ ಲೋಪಂ ಪೋಗು ಆಗುಗಳ ಗಕಾರಕ್ಕೆ, ದದಪಂ ಇರೆಯುಂ, ದತ್ವಕ್ಕೆ ಒಗೆದು ಅಸ್ವರಯತ್ವಂ ಪತ್ತುಗೆಗೊಂಡು ಉದುಗೆ ಆದ ತುತ್ವದೊಳ್ ನೆಲಸಿ ಇರೆಯುಂ.

ಅನ್ವಯಂ.

ದದಪಂ ಇರೆಯುಂ—ದತ್ವಕ್ಕೆ ಅಸ್ವರಯತ್ವಂ ಒಗೆದು, ಉದುಗೆ ಆದ ತುತ್ವದೊಳ್ ಪತ್ತುಗೆಗೊಂಡು, ನೆಲಸಿರೆಯುಂ—ಪೋಗಾಗುಗಳ ಗಕಾರಕ್ಕೆ ಲೋಪಂ ನೆಗೞ್ಗಿಂ.

ಟೀಕು.

ದದಪಂ=ದಕಾರ ದಪಕಾರಂ; ಇರೆಯುಂ=ಪರದಲ್ಲಿ ಇರ್ದೊಡೆಯುಂ; ದತ್ವಕ್ಕೆ=ಭೂತಕಾಲದ ದಕಾರಕ್ಕೆ; ಅಸ್ವರಯತ್ವಂ=ವ್ಯಂಜನದ ಯಕಾರಂ; ಒಗೆದು=ಹುಟ್ಟಿ; ಉದುಗೆ=ನಪುಂಸಕಲಿಂಗದ ಉದು ಎಂಬುದರ್ಕ್ಕೆ; ಆದ ತುತ್ವದೊಳ್=ಆದೇಶವಾದ ತುಕಾರದಲ್ಲಿ; ಪತ್ತುಗೆಗೊಂಡು=

ಪೊರ್ದುಗೆಯಾಗಿ; ನೆಲಸಿರೆಯುಂ=ನೆಲೆಗೊಂಡಿರ್ದೊಡೆಯುಂ; ಪೋಗಾಗುಗಳ=ಪೋಗು ಆಗು ಎಂಬ ಧಾತುಗಳ; ಗಕಾರಕ್ಕೆ=ಗತ್ವಕ್ಕೆ; ಲೋಪಂ=ಅದರ್ಶನಂ; ನೆಗೞ್ಗುಂ=ಬರ್ಪುದು.

ವೃತ್ತಿ.

ದ ದಪಂಗಳ್ಪರಮಾಗೆಯುಂ, ಪೋಗು ಆಗು ಎಂಬಿವಱ ಗಕಾರಕ್ಕೆ ಲೋಪಂ; ಭೂತವತಿಯ ದಕಾರಕ್ಕೆ ವ್ಯಂಜನಯಕಾರಂ ಬಂದು, ಉದುಗಾದ ತುಕಾರದೊಳ್ಪೊರ್ದೆಯುಂ, ಗಕಾರಕ್ಕೆ ಲೋಪಮಕ್ಕುಂ.

ಪ್ರಯೋಗಂ.

ಪೋದಂ, ಪೋದಪಂ; ಆದಂ, ಆದಪಂ; ಪೋದುದು, ಆದುದು; ಪೋಯ್ತು, ಆಯ್ತು. (ಪೊಂಮರಿವೋಲ್ ಪೊಳೆದು ಪಾಱಿ ಪೋದಂ ಶ್ವೇತಂ; ಕೊಂಬಿಱಿಪಿದ ಮರದಿಂದಗ್ಗಳಂ ತಿಂಣಮಾದಂ; ಕೆಂದಳಿರ್ಮಸೆಪ ಕೆಂಗರಿಯಾದುದು; ಪೋದೊಡಂ ಬೆಪಿಳ್ಕಾದುದು; ಅಜ್ಜನಿಪೋದುದು; ಸಣ್ದಿನಿನವಿ (ದಿ) ನೆಶರದದಪುಗಿಲೋಳ್; ಭೀಪ್ಮಣಮಾಯ್ತು ಸೈನ್ಯಮುಹಾರ್ಣದಂತಾಯ್ತುಬ್ಧಿಯೆ ಘೂರ್ಮಿಸುವಂತಾಯ್ತು ಮನೆಯೊಳಗೆ; ಗಜಪೋಯ್ತುಗಳಲೆಯಿದಲ್ತೆ ಕುಹಿಕಕ್ಕೋಣೇಂದ್ರಪುಂಸ್ಕೋಕಿಲಧ್ವನಿ ತಾನಿರೆಲೆವೋಯ್ತು.) [ಪೊಗಲಿಯ್ಯದಡಸಿ ತಾಮೆಂದುಂ (ತಾಪಮೆಂದುಂ) ಬೋದರೆಲ್ಲಿಂ (–ರೆಲ್ಲಂ); ಪೋಪಂಗೆ ಬರ್ಪಂಗನಾಕುಳಂ].

ಸೂತ್ರಂ.

Besides, before the affix ಕೆ of the Imperative (S. 229) and before ಕುಂ (S. 227) they receive the forms: ಪೋ, ಅಕ್.

ಪರದೊಳ್ವಿಧಿಯ ಕೆಕಾರಂ
ಬರೆ ಕುಂ ಬರೆ ಪೋಗೆನಿಪ್ಪ ಧಾತುವಿನಂತ್ಯಾ |
ಕ್ಷರಲೋಪಂ ಚರಮುಂ ವಿ
ಸ್ವರಮಾದ್ಯಂ ಹ್ರಸ್ವಮಕ್ಕುಮಾಗೆಂಬುದಱೊಳ್ || 243 ||

ಪದಚ್ಛೇದಂ.

ಪರದೊಳ್ ವಿಧಿಯ ಕೆಕಾರಂ ಬರೆ, ಕುಂ ಬರೆ, ಪೋಗು ಎನಿಪ್ಪ ಧಾತುವಿನ ಅಂತ್ಯಾಕ್ಷರ ಲೋಪಂ; ಚರಮುಂ ವಿಸ್ವರಂ, ಆದ್ಯಂ ಹ್ರಸ್ವಂ ಅಕ್ಕುಂ ಆಗು ಎಂಬುದಱೊಳ್.

ಅನ್ವಯಂ.

ಆಗು ಎಂಬುದಱೊಳ್=ಚರಮುಂ ವಿಸ್ವರಂ, ಆದ್ಯಂ ಹ್ರಸ್ವಂ ಅಕ್ಕುಂ ಎಂಬುದನ್ವಯಂ.

### ಟೀಕು.

ಪರದೊಳ್=ಪರದಲ್ಲಿ; ವಿಧಿಯ=ವಿಧ್ಯರ್ಥದ; ಕೆಕಾರಂ=ಕೆಕಾರಂ; ಬರೆ=ಬರೆ; ಕುಂ=ಕುಂಕಾರಂ; ಬರೆ=ಬರೆ; ಪೋಗೆನಿಪ್ಪ ಧಾತುವಿನ=ಪೋಗು ಎಂಬ ಧಾತುವಿನ; ಅಂತ್ಯಾಕ್ಷರಲೋಪಂ=ಕಡೆಯಕ್ಷರದ ಲೋಪಂ ಆಗುವದು; ಆಗೆಂಬುದಱೊಳ್=ಆಗು ಎಂಬ ಧಾತುವಿನಲ್ಲಿ; ಚರಮಂ=ಅಂತ್ಯಂ; ವಿಸ್ವರಂ=ವ್ಯಂಜನದ ಕಕಾರಂ; ಆದ್ಯಂ=ಮೊದಲಕ್ಷರಂ; ಹ್ರಸ್ವಂ=ಹ್ರಸ್ವಂ; ಅಕ್ಕುಂ=ಆಗುವದು.

### ವೃತ್ತಿ.

ವಿಧಿಯ ಕೆಕಾರಮುಂ ಕುಂ ಎಂಬುದುಂ ಪರಮಾಗೆ, ಪೋಗೆಂಬ ಗಕಾರಕ್ಕೆ ಲೋಪಂ; ಆಗೆಂಬುದಱ ಕಡೆಯ ಸ್ವರಕ್ಕೆ ಲೋಪಮುಂ ಮೊದಲ್ಗೆ ಹ್ರಸ್ವಮುಮಕ್ಕುಂ.

### ಪ್ರಯೋಗಂ.

ಪೋಕೆ, ಪೋಕುಂ; ಅಕ್ಕೆ, ಅಕ್ಕುಂ. ಪೋರ್ಕೆ ಬರ್ಕೆ ಮುಳಿಸಲ್ತೆಮಗಾತನೊಳ್ (ಆವಪಾಂಗಿನಿ) ಪೊಱಮಾಡಿದೆ ಸಯ್ತೆ ಪೋಕುಮಾ ಪರಸೈನ್ಯಂ. (ವೇದದೊಳೊಂದಿದಾಯು ನಿನಗಕ್ಕೆ ಬೇಗಂ ಕಲಿ ಕಾಲಸೂದನಾ. ಪ್ರಾಯಂ ಕೂಸಾದೊಡಭಿಪ್ರಾಯಂ ಕೂಸಕ್ಕುಮೆ).

### ಸೂತ್ರಂ.

The root ಉಳ್ (937 b) and the affix ಉದು (S. 225) become ಉಂಟು.—For the Negative mood (S. 222) the Neuter affixes ಉದು and ಉವು (S. 225) become ಅದು and ಅವು.

ಅವತರಿಸಿರ್ಕುಮದುಳ್ಧಾ
ತುವಿನ ಳಕಾರಕ್ಕೆ ಣತ್ವಮುದುಗೆ ಟುಕಾರಂ |
ಪ್ರವಿಲೋಮಕ್ರಿಯೆಗದುವೆಂ
ದವೆಂದು ಬಂದಿರ್ಕುಮುದುಗಮುವುಗಂ ಪ್ರಚುರಂ || 244 ||

### ಪದಚ್ಛೇದಂ.

ಅವತರಿಸಿ ಇರ್ಕುಂ ಅದು ಉಳ್ಧಾತುವಿನ ಳಕಾರಕ್ಕೆ ಣತ್ವಂ, ಉದುಗೆ ಟುಕಾರಂ.—ಪ್ರವಿಲೋಮಕ್ರಿಯೆಗೆ ಅದು ಎಂದು ಅವು ಎಂದು ಬಂದು ಇರ್ಕುಂ ಉದುಗಂ ಉವುಗಂ ಪ್ರಚುರಂ.

### ಅನ್ವಯಂ.

ಉಳ್ಧಾತುವಿನ ಳಕಾರಕ್ಕೆ ಣತ್ವಂ ಅದು, ಉದುಗೆ ಟುಕಾರಂ ಅವತರಿಸಿ ಇರ್ಕುಂ.—ಪ್ರವಿಲೋಮಕ್ರಿಯೆಗೆ ಉದುಗಂ ಉವುಗಂ ಅದು ಎಂದು ಅವು ಎಂದು ಪ್ರಚುರಂ ಬಂದು ಇರ್ಕುಂ.

### ಟೀಕು.

ಉಳ್ಧಾತುವಿನ=ಉಳ್ || ಸತ್ತಾಯಾಂ, to be || ಎಂಬ ಸತ್ತಾರ್ಥದ ಧಾತುವಿನ; ಳಕಾರಕ್ಕೆ=

ಳತ್ವಕ್ಕೆ; ಣತ್ವಂ=ಣಕಾರಂ; ಅದು=ಅದು; ಉದುಗೆ=ನಪುಂಸಕಲಿಂಗದ ಉದು ಎಂಬುದರ್ಕೆ; ಟು ಕಾರಂ=ಟುತ್ವಂ; ಅವತರಿಸಿರ್ಕುಂ=ಹುಟ್ಟಿಪ್ಪುದು; ಪ್ರವಿಲೋಮಕ್ರಿಯೆಗೆ=ಪ್ರತಿಷೇಧಕ್ರಿಯೆಗೆ; ಉದುಗಂ=ನಪುಂಸಕಲಿಂಗದ ಉದುವೆಂಬುದರ್ಕಂ; ಉವುಗಂ=ಉವು ಎಂಬುದರ್ಕಂ; ಅದುವೆಂ ದು=ಅದು ಎಂದು; ಅವೆಂದು=ಅವು ಎಂದು; ಪ್ರಚುರಂ=ಪ್ರಸಿದ್ಧವಾಗಿ; ಬಂದಿರ್ಕುಂ=ಬಂದಿಪ್ಪುವು.

## ವೃತ್ತಿ.

ಉಳ್ ಎಂಬ ಧಾತುವಿನ ಳಕಾರಕ್ಕೆ ಣತ್ವಮುಂ ಅಲ್ಲಿ ಪರದುದುವಿಂಗೆ ಟುಕಾ ರಾದೇಶಮುಮಕ್ಕುಂ.—ನಪುಂಸಕಲಿಂಗದ ಉದುಗಮುವುಗಂ ಪ್ರತಿಷೇಧಕ್ರಿಯೆಯೊ ಳದುವೆಂದುಮವುವೆಂದುಮ್ ಆದೇಶಮಕ್ಕುಂ.

## ಪ್ರಯೋಗಂ.

ಉಳ್ಳುದೆಂಬುದರ್ಕೆ—ಉಣ್ಟು. (ಉಂಟು ಭುಜಬಲಂ ಪಿರಿದು ಚಾಗದಮೆ ಈ ಸಿರಿಯುಂಟು ಮಾಡಿದಂ ಕುರುಬಲದೊಳ್).

ಪ್ರತಿಷೇಧಕ್ರಿಯೆಗೆ—ಉೞಿಯದು ವಿಭವಂ; ಜವ್ವನವಿೞಿಯದು; [ನವವಿಧರ ತೋಪಚಾರದಿನೆಂದುಂ ಪಳಸದು ಬೇಟಂ; ವಿಪುಳಕಳಾಪಕೋಪಶಿಖಿ ಪುಟ್ಟುದು];— ಸಲ್ಲವು; ನಿಲ್ಲವು; ನೆೞಿಯವು [also in M. A.] (ಗಿರಿಯುಂ ಕರಿಯುಂ ನಿಲ್ಲವು ಪವಿಮುಖದಕೊಳವಾತನ ಬಾಳ್ಗಂ. ತುರುಗಳ ಮೆಯ್ಗಳ ರೋಮಂ ನೆೞಿಯ ವು ದಲ್).

## ಸೂತ್ರಂ.

ಣತ್ವಂ ಕೊಳ್ಧಾತ್ವಂತ್ಯ
ಕ್ಕುತ್ವಕ್ಕುಳ್ಧಾತುಪೂರ್ವದೊಳ್ ನೆಗಳ್ಗುಂ ಹ್ರ |
ಸ್ವೋತ್ವಂ ಪುರುಷತ್ರಯದೊಳ್
ದತ್ವನಿಷೇಧಂ ಬಹುತ್ವದುವುಗವುಮಕ್ಕುಂ || 245 ||

Before ದ and ದಪ the root ಕೊಳ್ (s. S. 232; S. 241) becomes ಕೊಣ್.—Excepting ಉಂಟು (S. 244), the root ಉಳ್ becomes ಒಳ್ (cf. S. 238), and takes the personal affixes (S. 217) without inserting ದ or ದಪ. Its affix for the Neuter Plural, though ಅವು (S. 244), is affirmative.

## ಪದಚ್ಛೇದಂ.

ಣತ್ವಂ ಕೊಳ್ಧಾತ್ವಂತ್ಯಕ್ಕೆ. ಉತ್ವಕ್ಕೆ ಉಳ್ಧಾತುಪೂರ್ವದೊಳ್ ನೆಗಳ್ಗುಂ ಹ್ರಸ್ವೋತ್ವಂ; ಪುರು ಷತ್ರಯದೊಳ್ ದತ್ವನಿಷೇಧಂ; ಬಹುತ್ವದ ಉವುಗೆ ಅವುಂ ಅಕ್ಕುಂ.

## ಅನ್ವಯಂ.

ಕೊಳ್ಧಾತ್ವಂತ್ಯಕ್ಕೆ ಣತ್ವಂ ನೆಗಳ್ಗುಂ. ಉಳ್ಧಾತುಪೂರ್ವದೊಳ್ ಉತ್ವಕ್ಕೆ ಹ್ರಸ್ವೋತ್ವಂ; ಪುರು ಷತ್ರಯದೊಳ್ ದತ್ವನಿಷೇಧಂ; ಬಹುತ್ವದ ಉವುಗೆ ಅವುಂ ಅಕ್ಕುಂ.

### ಟೀಕು.

ದ ದಪಂಗಳ್ಪರಮಾದ ಎಂಬುದನುವರ್ತನೆ—ಕೊಳ್ಧಾತ್ವಂತ್ಯಕ್ಕೆ=ದ ದಪಂಗಳ್ಪರಮಾದ ಕೊಳ್ಳೆಂಬ ಧಾತುವಿನಂತ್ಯಕ್ಕೆ; ಣತ್ವಂ=ಣಕಾರಾದೇಶಂ; ನೆಗಲ್ಗುಂ=ಪ್ರಸಿದ್ಧಿವಡೆವುದು; ಉಳ್ಧಾತುಪೂರ್ವದೊಳ್=ಸತ್ತಾರ್ಥದಲ್ಲಿ ಉಳ್ ಎಂಬ ಧಾತುವಿನ ಮೊದಲಲ್ಲಿ; ಉತ್ವಕ್ಕೆ=ಉಕಾರಕ್ಕೆ; ಪ್ರಸ್ವೋತ್ವಂ=ಹ್ರಸ್ವದ ಒಕಾರಂ ಪ್ರಸಿದ್ಧಿವಡೆವುದು; ಪುರುಷತ್ರಯದೊಳ್=ಪುರುಷತ್ರಯದಲ್ಲಿ; ದತ್ವನಿಷೇಧಂ=ಭೂತಕಾಲದ ದಕಾರಂ ಬಾರದು; ಬಹುತ್ವದ=ನಪುಂಸಕಲಿಂಗದ ಬಹುವಚನದ; ಉವುಗೆ=ಉವು ಎಂಬುದರ್ಕೆ; ಅವುಂ=ಅವು ಎಂಬುದುಂ; ಅಕ್ಕುಂ=ಆಗುವದು.

### ವಿಚಾರಂ.

ದತ್ವನಿಷೇಧವೆಂದು, ಉಪಲಕ್ಷಣವಾಗಿ ಉಳ್ಧಾತುಗೆ ದ ದಪ ವಕಾರಂಗಳ್ ಮೂಱುಂ ನಿಷೇಧವೆಂಬುದರ್ಥಂ; ಭೂತಕಾಲವಾಗಿಯೆ ಸಲ್ವುದು.

### ವೃತ್ತಿ.

ದಕಾರಂ ಪರಮಾದ ಕೊಳ್ಧಾತುವಿನ ಳಕಾರಕ್ಕೆ ಣತ್ವಮಕ್ಕುಂ; ಪುರುಷತ್ರಯದೊಳ್ ಉಳ್ಧಾತುವಿನ ಮೊದಲುಕಾರಕ್ಕೆ ಹ್ರಸ್ವೋತ್ವಮಕ್ಕುಂ; ನಪುಂಸಕಲಿಂಗದ ಬಹುವಚನದುವುವಿಂಗೆ ಅವು ಎಂದಕ್ಕುಂ.

### ಪ್ರಯೋಗಂ.

ಕೊಳ್ಧಾತುಗೆ—ಕೊಣ್ಡಂ, ಕೊಣ್ಡರ್. (ಭುವನತ್ರಿಣೇತ್ರರುಚಿ ಕೈಕೊಂಡನಾ ಪಾಂಡವಂ (s. S. 241). ತಮತಮಗೆ ಭಯಂಗೊಂಡರಾಶಂಕೆಗೊಂಡರ್).

ಉಳ್ಧಾತುಗೆ—ಒಳಂ, ಒಳರ್; ಒಳಯ್, ಒಳಿರ್; ಒಳೆನ್, ಒಳೆವು. ಅನಿತರ್ಕಮೊಳಂ ಮುರಾಂತಕಂ; ಒಳರನ್ನೆವರಂ ಮಾರ್ಬಲದೊಳತಿಭಟರ್ (—ದೊಳಗಿರಿಯಲ್ ಮರುಗುವರೆ ಭಟರ್).

ನಪುಂಸಕಕ್ಕೆ—ಒಳವು.

> [ನೀನುಳ್ಳೊಡುಂಟು ರಾಜ್ಯಂ
> ನೀನುಳ್ಳೊಡೆ ಪಟ್ಟಮುಂಟು ಪೇೞ್ಗೆಯುಂಟು |
> ನೀನುಳ್ಳೊಡುಂಟು ಬೆಳ್ಗೊಡೆ]
> ನೀನಿಲ್ಲದಿವೆಲ್ಲಮೊಳವೆ ಭಾನುತನುಜಾ || ಕಂದಂ? || (p. 155)

ನುಂಗುವುವುಮೊಳವು ದಧಿಯೊಳೆ ಮಹಾಮತ್ಸ್ಯಂಗಳ್.

ಉಂಟೆಂಬುದರ್ಕೆ ಎಲ್ಲವೞಿಂತೆ ಪ್ರತಿಷೇಧಮಾಗಿಲ್ಲೆಂದಾಯಿತು (S. 244). (ನೀಲಗ್ರೀವರುಮಾರ್ತರಿಲ್ಲ ಗೆಲಮಿಂಗಾರಾರ್ಪರೆಂದಂ ಕೃಪಂ). [ನೀಲಗ್ರೀವಮಾರ್ತರಿಲ್ಲ ಗೆಲಲಿಂನಾರಾರ್ಪರೆ—].

ಸೂತ್ರಂ.

ಇನೆಗಮುದುಮಂನಮಂನೆಗ
ಮಿನಮಲೊಡಂ ಸೊಂನೆವೆರಸು ಸತ್ಯರ್ಥದೆಕಾ |
ರನಿಜಸ್ಥಾನದೊಳಪ್ಪುವಿ
ವನುಕೂಲಂ ಮತ್ತೆಕಾರದಾದಿಯೊಳಲೊಡಂ || 246 ||

A form of the verb expressing the sense of the Locative (ಸತಿ ಸಪ್ತಮಿ; see S. 133) is formed by the affix ಎ (cf. Ss. 119; 120), instead of which also the affixes ಇನೆಗಂ, ಉದುಂ, ಅನ್ನಂ, ಅನ್ನೆಗಂ, ಇನಂ (cf. S. 160), ಅಲೊಡಂ and ಅಲೊಡಂ+ಎ (ಅಲೊಡನೆ cf. S. 309) are used.

ಪದಚ್ಛೇದಂ.

ಇನೆಗಂ ಉದುಂ ಅನ್ನಂ ಅನ್ನೆಗಂ ಇನಂ ಅಲೊಡಂ ಸೊಂನೆವೆರಸು; ಸತ್ಯರ್ಥದ ಎಕಾರನಿಜಸ್ಥಾನದೊಳ್ ಅಪ್ಪುವು ಇವು; ಅನುಕೂಲಂ ಮತ್ತೆ ಎಕಾರದ ಆದಿಯೊಳ್ ಅಲೊಡಂ.

ಅನ್ವಯಂ.

ಸತ್ಯರ್ಥದ ಎಕಾರನಿಜಸ್ಥಾನದೊಳ್ ಇನೆಗಂ ಉದುಂ ಅನ್ನಂ ಅಂನೆಗಂ ಇನಂ ಅಲೊಡಂ ಇವು ಸೊಂನೆವೆರಸು ಅಪ್ಪುವು; ಮತ್ತೆ ಎಕಾರದ ಆದಿಯೊಳ್ ಅಲೊಡಂ ಅನುಕೂಲಂ.

ಟೀಕು.

ಸತ್ಯರ್ಥದ=ಸತಿಸಪ್ತಮಿಯರ್ಥದ; ಎಕಾರನಿಜಸ್ಥಾನದೊಳ್=ಎಕಾರದ ನಿಜಸ್ಥಾನದಲ್ಲಿ; ಇನೆಗಂ=ಇನೆಗಂ ಎಂದು; ಉದುಂ=ಉದುಂ ಎಂದು; ಅಂನಂ=ಅಂನಂ ಎಂದು; ಅಂನೆಗಂ=ಅನ್ನೆಗಂ ಎಂದು; ಇನಂ=ಇನಂ ಎಂದು; ಅಲೊಡಂ=ಅಲೊಡಂ ಎಂದು; ಇವು=ಈ ರೂಪಂಗಳ್; ಸೊಂನೆವೆರಸು=ಸೊಂನೆಗೂಡಿ; ಅಪ್ಪುವು=ಆದೇಶವಾಗುವವು; ಮತ್ತೆ=ಬಳಿಕ; ಎಕಾರದ=ಸತ್ಯರ್ಥದೆಕಾರದ; ಆದಿಯೊಳ್=ಮೊದಲಲ್ಲಿ; ಅಲೊಡಂ=ಅಲೊಡಂ ಎಂದು; ಅನುಕೂಲಂ=ಹಿತವಪ್ಪುದು.

ವೃತ್ತಿ.

ಇನೆಗಂ ಉದುಂ ಅಂನಂ ಅಂನೆಗಂ ಇನಂ ಅಲೊಡಂ ಎಂಬಿವು ಸೊಂನೆವೆರಸಲ್ಲದಿರವು; ಇವು ಸತಿಸಪ್ತಮಿಯ ಎಕಾರಕ್ಕಾದೇಶಮಾಗಿ ಬಂದುವು; ಎಕಾರದ ಪೆಱಗೆ ಒರ್ಮೆ ಅಲೊಡಮೆಂಬುದೊಂದಾಗಮಮಾಗಿಯುಂ ಬರ್ಕುಂ.

ಪ್ರಯೋಗಂ.

ಸತಿಸಪ್ತಮಿಯ ಎಕಾರಕ್ಕೆ—ನುಡಿಯೆ; ಪೊರ್ದೆ; ನೆಲನದಿರೆ; ವನಂಗೊರಗೆ.

ಎಕಾರದ ಆದೇಶಂಗಳೊಳ್ ಇನೆಗಮೆಂಬುದರ್ಕೆ—ಕಾಮುಕರಂ ಕರಮುಡಂಬ ನುರ್ಗಮಪ್ಪಿನೆಗಂ [ನುರ್ಗಪ್ಪಿನೆಗಂ] ಕಾಮುದನಂಡಗೆಯೊಯ್ದಂ.

ಉದುಮೆಂಬುದರ್ಕೆ—ಬರವೇೞೆಂಬುದುಮ್ ಅಂಜನಾಚಲದವೊಲ್ ಕಣ್ಗೊಪ್ಪಿ ಬರ್ಪಂಬುಜೋದರನಂ.

ಅನ್ನಮೆಂಬುದರ್ಕೆ—ಉದ್ದವಿದ್ದನ್ನೆಗೆವಂನಂ ಪೊಯ್ಯಲೆಂದವ್ವಳಿಪುದು.

ಅನ್ನೆಗಮೆಂಬುದರ್ಕೆ—[ಬಲೆ (ಬಲೆ) ಯೊಡನಮುತ್ತುಂಗಾಲೊಳ್] ನೇರಂ ಬರ್ಪನೆಗಮಿರು. ಗಂಗೆಯಮಡುಗಳನಳವಡಿಸಿ ಪುಗುವಿನಂ ಭಯರವದಿಂ.

ಒಡಮೆಂಬುದರ್ಕೆ—ಕುರುಕುಲಾಧಿಪಂ ನುಡಿಯಲೊಡಂ.

ಎಕಾರದ ಪೆಱಗೆ ಅಲೊಡಮಾಗಮಕ್ಕೆ—ಬರಲೊಡನೆ ಕೊಟ್ಟಂ.

ಸೂತ್ರಂ.

Of the above affixes ಅನ್ನೆಗಂ, ಅನ್ನಂ, ಇನೆಗಂ, ಇನಂ are used for the Present and Future tenses; ಉದುಂ, ಅಲೊಡಂ for the Past.

ನೆಗಱ್ಗುಂ ಸಂಪ್ರತಿಗಂ ಭಾ
ವಿಗಮಂನೆಗಮಂನಮಿನೆಗಮಿನಮೆಂಬಿವು ಸೂ |
ರಿಗಳಿಂದುದುಮಲೊಡಂಗಳ್
ನೆಗಱ್ಗುಂ ಭೂತಾರ್ಥದಲ್ಲಿ ಸತಿಸಪ್ತಮಿಯೊಳ್ || 247 ||

ಪದಚ್ಛೇದಂ.

ನೆಗಱ್ಗುಂ ಸಂಪ್ರತಿಗಂ ಭಾವಿಗಂ ಅಂನೆಗಂ ಅಂನಂ ಇನೆಗಂ ಇನಂ ಎಂಬ ಇವು ಸೂರಿಗಳಿಂದೆ, ಉದುಂ ಅಲೊಡಂಗಳ್ ನೆಗಱ್ಗುಂ ಭೂತಾರ್ಥದಲ್ಲಿ ಸತಿಸಪ್ತಮಿಯೊಳ್.

ಅನ್ವಯಂ.

ಸೂರಿಗಳಿಂದೆ ಸತಿಸಪ್ತಮಿಯೊಳ್ ಸಂಪ್ರತಿಗಂ ಭಾವಿಗಂ ಅಂನೆಗಂ ಅಂನಂ ಇನೆಗಂ ಇನಂ ಎಂಬಿವು ನೆಗಱ್ಗುಂ, ಭೂತಾರ್ಥದಲ್ಲಿ ಉದುಂ ಅಲೊಡಂಗಳ್ ನೆಗಱ್ಗುಂ.

ಟೀಕು.

ಸೂರಿಗಳಿಂದೆ=ವಿದ್ವಾಂಸರಿಂದೆ; ಸತಿಸಪ್ತಮಿಯೊಳ್=ಸತಿಸಪ್ತಮಿಯಲ್ಲಿ; ಸಂಪ್ರತಿಗಂ=ವರ್ತಮಾನಕಾಲಕ್ಕಂ; ಭಾವಿಗಂ=ಭವಿಷ್ಯತ್ಕಾಲಕ್ಕಂ; ಅಂನೆಗಂ=ಅಂನೆಗಂ ಎಂದು; ಅಂನಂ=ಅಂನಂ ಎಂದು; ಇನೆಗಂ=ಇನೆಗಂ ಎಂದು; ಇನಂ=ಇನಂ ಎಂದು; ಎಂಬಿವು=ಎಂಬೀ ರೂಪಂಗಳ್; ನೆಗಱ್ಗುಂ=ಬರ್ಪುವು; ಭೂತಾರ್ಥದಲ್ಲಿ=ಭೂತಕಾಲದರ್ಥದಲ್ಲಿ; ಉದುಮಲೊಡಂಗಳ್=ಉದುಂ ಅಲೊಡಂ ಎಂಬಿವು; ನೆಗಱ್ಗುಂ=ಬರ್ಪುವು.

ವೃತ್ತಿ.

ಅಂನೆಗಂ, ಅಂನಂ, ಇನೆಗಂ, ಇನಂ ಎಂಬಿವು ವರ್ತಮಾನದೊಳಂ ಭವಿಷ್ಯಂತಿಯೊಳಂ ವರ್ತಿಪುವು; ಉದುಂ, ಅಲೊಡಂ ಎಂಬಿವು ಭೂತವತಿಯೊಳ್ ಸಲ್ಗುಂ.

ಪ್ರಯೋಗಂ.

ಸಂಪ್ರತಿಗೆ—ನೆನೆವಂನೆಗಂ ಬಂದಂ; ಕೊಲ್ವಂನಮ್ ಇಕ್ಕಿ ಕೊಂದಂ; ಬಿನ್ನೈಸುವಿನೆಗಮ್ ಎರ್ದೆಗೊಂಡಂ; ಇದಿರ್ವಪ್ಪಿನಮ್ ಅಪ್ಪಿ ಕೊಂಡಂ.

ಭವಿಷ್ಯಂತಿಗೆ—ಈವಂನೆಗವಿರ್ದಂ; ಬರಂಬಡೆವನ್ನವಾರಾಧಿಸಿದಂ; ಅವಧಿ ಬರ್ಪಿನೆಗಂ ಸೈರಿಸಿದಂ; ಬೆಳಗಪ್ಪಿನಂ ಕೇಳಿಸಿದಂ.

ಭೂತವತಿಗೆ—ಓಲಗಂ [ವಾಲಗಂ] ಪರೆಯುದುವಾಲೋಚನೆಗೆ ಪೊಕ್ಕಂ (—ಪಱಿಯು—); ಹಾವಸೆ [ಪಾವಸೆ] ಕಿಡಲೊಡಂ ನೀರ್ತಿಳಿದುದು.—ಇವು ಸತಿ ಸಪ್ತಮಿಯ ಪ್ರಯೋಗಂಗಳ್.

ಸೂತ್ರಂ.

When ಅನ್ನೆಗಂ, ಇನ್ನೆಗಂ and ಎನ್ನೆಗಂ are followed by ವರಂ, or ವರೆಗಂ (cf. ಈ ವರೆ, s. S. 324) which denote boundary (ಸೀಮಾ, ಸೀಮೆ), their last syllable is dropped. Also ಮುಟ್ಟೆ (ಮುಟ್ಟು+ಎ, S. 246) denotes "as far as."

ಅಂನೆಗಮಿಂನೆಗಮೆಂನೆಗ
ಮೆಂನದೆ ಕಡೆಗುಂಟು ಲೋಪಮಿದಿರೊಳ್ಸೀಮೋ |
ತ್ಪಂನಂ ವರಂ ವರೆಗಮಿರೆ
ಕೆಂನಂ ಪೆಱವರ್ಕೆ ಲೋಪವಿಧಿ ಮುಟ್ಟೆನೆಯುಂ || 248 ||

ಪದಚ್ಛೇದಂ.

ಅಂನೆಗಂ ಇಂನೆಗಂ ಎಂನೆಗಂ ಎಂನದೆ ಕಡೆಗೆ ಉಂಟು ಲೋಪಂ, ಇದಿರೊಳ್ ಸೀಮೋತ್ಪಂನಂ ವರಂ ವರೆಗಂ ಇರೆ; ಕೆಂನಂ ಪೆಱವರ್ಕೆ ಲೋಪವಿಧಿ; ಮುಟ್ಟೆ ಎನೆಯುಂ.

ಅನ್ವಯಂ.

ಇದಿರೊಳ್ ಸೀಮೋತ್ಪಂನಂ ವರಂ ವರೆಗಂ ಇರೆ, ಅಂನೆಗಂ ಇಂನೆಗಂ ಎಂನೆಗಂ ಎಂನದೆ ಕಡೆಗೆ ಲೋಪಂ ಉಂಟು; ಮುಟ್ಟೆನೆಯುಂ; ಕೆಂನಂ ಪೆಱವರ್ಕೆ ಲೋಪವಿಧಿ.

ಟೀಕು.

ಇದಿರೊಳ್=ಪರದಲ್ಲಿ; ಸೀಮಾ=ಸೀಮೆಯಲ್ಲಿ; ಉತ್ಪಂನಂ=ಹುಟ್ಟಿದುವಾದ; ವರಂ=ವರಂ ಎಂದು; ವರೆಗಂ=ವರೆಗಂ ಎಂದು; ಇರೆ=ಇರ್ದೊಡೆ; ಅಂನೆಗಂ=ಅಂನೆಗಂ ಎಂದು; ಇಂನೆಗಂ=ಇಂನೆಗಂ ಎಂದು; ಎಂನೆಗಂ=ಎಂನೆಗಂ ಎಂದು; ಎಂನದೆ=ಎಂನದೆ; ಕಡೆಗೆ=ಅಂತ್ಯಕ್ಕೆ; ಲೋಪಂ=ಲೋಪಂ; ಉಂಟು=ಉಂಟಾಗುವದು; ಮುಟ್ಟೆನೆಯುಂ=ಮುಟ್ಟೆ ಎನೆಯುಂ; ಕೆಂನಂ=ವೆಗ್ಗಳವಾಗಿ; ಪೆಱವರ್ಕೆ=ಅನ್ಯವಾದುವರ್ಕೆ; ಲೋಪವಿಧಿ=ಲೋಪದ ವಿಧಿ ಬರ್ಪುದು.

ವೃತ್ತಿ.

ವರಂ ವರೆಗಮೆಂಬ ಸೀಮಾರ್ಥಶಬ್ದಂ ಪರದೊಳಿರೆ, ಅಂನೆಗಂ ಇಂನೆಗಂ ಎಂನೆಗಂ ಎಂಬೀ ಗಕಾರಕ್ಕೆ ಲೋಪಂ; ವರಂ ವರೆಗಮೆಂಬಿವು ಪರದೊಳಿರ್ದೊಡಂ ಮಿಕ್ಕಲ್ಲಿ ಲೋಪಂ (ಲೋಪವಿಧಿಯೆಂತ ಪಾಠಾಂತರಂ) [M. B. ಮಿಕ್ಕ ಶಬ್ದಕ್ಕೆ ವರಂ ವರೆಗಮೆಂಬಿವು ಪರವಾದೊಡಂ ಪಿಂದಣಂತೆ ಲೋಪಮಿಲ್ಲ]; ಮುಟ್ಟೆ ಎಂದುಂ ಸೀಮಾರ್ಥಮಂ ಪೇೞ್ಗುಂ.

ಪ್ರಯೋಗಂ.

ವರಮೆಂಬುದಾಗಮಕ್ಕೆ—ಎಂನೆವರಂ ಸಿರಿ ತಮಗುಂಟುಂನೆವರಂ ಸೇವ್ಯರಲ್ತೆ ಖಳರುಂ. ಇಂನೆವರಂ ಗುಱಿಯಾದುದಿಲ್ಲ ಕಾಮುಕರಮುಕ್ತಬಾಣಹತಿಗೆ.

ಮುಟ್ಟೆಂಬುದರ್ಕೆ—ದೆಸೆಮುಟ್ಟೆ; ವಾರ್ಧಿಮುಟ್ಟೆ; ಅಂತಮುಟ್ಟೆ; ಆನರಿಯನಾತಂಮುಟ್ಟೆ ಸಂಗ್ರಾ(ಮ)ಮುಂ. [M. B. ಆನರಿಯೆ—]

ಸೂತ್ರಂ.

ವಿದಿತೋಭಯಕರ್ತೃಕಮೆನಿ
ಸಿದ ಸತಿಸಪ್ತಮಿಗೆಕಾರಮಪ್ಪುದದರ್ಕಂ |
ಜಡೆ ಕೆಲರಲ್ವಂ ಪೇೞ್ವರ್
ಚದುರರದಂ ಮೆಚ್ಚರಲೊಡಮೆಂದೊಡೆ ಶುದ್ಧಂ || 249 ||

It is not advisable to use the affix ಅಲ್ (Ss. 234; 235) instead of the ಎ of the Locative-Infinitive (S. 246). This last Infinitive form is used when another agent is expected (ಉಭಯಕರ್ತೃಕಂ).

ಪದಚ್ಛೇದಂ.

ವಿದಿತೋಭಯಕರ್ತೃಕಂ ಎನಿಸಿದ ಸತಿಸಪ್ತಮಿಗೆ ಎಕಾರಂ ಅಪ್ಪುದು. ಅದರ್ಕೆ ಅಂಜದೆ ಕೆಲರ್ ಅಲ್ವಂ ಪೇೞ್ವರ್; ಚದುರರ್ ಅದಂ ಮೆಚ್ಚರ್; ಅಲೊಡಂ ಎಂದೊಡೆ ಶುದ್ಧಂ.

ಯಥಾನ್ವಯಂ.

ಟೀಕು.

ವಿದಿತ=ಪ್ರಸಿದ್ಧವಾದ; ಉಭಯಕರ್ತೃಕಂ=ಇರ್ವರ್‌ಕರ್ತೃಗಳನುಳ್ಳುದು; ಎನಿಸಿದ ಸತಿಸಪ್ತಮಿಗೆ=ಎನಿಸಿದ ಸತಿಸಪ್ತಮಿಯ ಪ್ರಯೋಗಕ್ಕೆ; ಎಕಾರಂ=ಎತ್ವಂ; ಅಪ್ಪುದು=ಆಗುವದು; ಅದರ್ಕೆ=ಆ ಎಕಾರಕ್ಕೆ; ಅಂಜದೆ=ಹೆದರದೆ; ಕೆಲರ್=ಕೆಲಂಬರ್; ಅಲ್ವಂ=ಅಲ್ ಎಂಬುದಂ; ಪೇೞ್ವರ್=ಹೇಳ್ವರ್; ಚದುರರ್=ಬಲ್ಲವರ್; ಅದಂ=ಆ ಪ್ರಯೋಗಮಂ; ಮೆಚ್ಚರ್=ಒಡಂಬಡರ್; ಅಲೊಡಂ=ಅಲೊಡಂ ಎಂದು; ಎಂದೊಡೆ=ಪೇಳ್ದೊಡೆ; ಶುದ್ಧಂ=ಶುದ್ಧವಪ್ಪುದು.

ವೃತ್ತಿ.

ಇರ್ಬರ್ಕರ್ತೃಗಳ್ಗೆ ನಿಮಿತ್ತಮಪ್ಪ ಸತಿಸಪ್ತಮಿಗೆ ಎಕಾರಮಕ್ಕುಂ; ಆ ಎಕಾರಕ್ಕೆ ಅಲುಮಂ ಕೆಲರ್ ಅಂಜದೆ ಪೇೞ್ವರ್; ಅದುಮಾಗದು; ಅಲೊಡಮೆಂದೊಡೆ ಶುದ್ಧಂ.

ಪ್ರಯೋಗಂ.

ಇರ್ಬರ್ ಕರ್ತೃಗಳ್ಗಪ್ಪ ಸತಿಸಪ್ತಮಿಗೆ—ಗಾಯಕಂ ಪಾಡೆ ದೇವಂ ಮೆಚ್ಚಿದಂ; ಪಾತ್ರವಾಡೆ ವಾದಕಂ ಬಾಜಿಸಿದಂ; ವಂದಿ ಪೊಗೞೆ ಚಾಗಿ ಕೊಟ್ಟಂ.

ಅಲ್ಗೆ—ಪಾದಪದ್ಮಂಗಳನೊತ್ತುತ್ತಿರಲ್ ಶೂದ್ರಿಕನೃಪತಿ ಸುಖಾಸೀನನಾಗಿರ್ದನಾಗಳ್; ಬಯ್ಗಿನ ಕೆಂಬಿಸಿಲೆಳಸಲೆಸೆದುವಾಶ್ರಮತರುಗಳ್ ಎಂಬಿವಬದ್ಧಂಗಳ್.

ಅಲೊಡವೆಂಬುದಱ ಶುದ್ಧಕ್ಕೆ—ವಸಂತಂ ಬರಲೊಡಂ ಕೋಗಿಲೆಯುಲಿಗುಂ; ಗಾಳಿ ಬೀಸಲೊಡನೆಲೆ ಕಱಲ್ದುವು.

### ಸೂತ್ರಂ.

The Affix ಒಡೆ which introduces the Subjunctive mood (ಪಕ್ಷಾರ್ಥಂ), is used for all genders, all numbers, all persons and all tenses.

ಪಿರಿದುಂ ಪಕ್ಷಾಂತರಮುಂ
ನಿರವಿಪೆಕಾರಂ ನಿಜಾಂತಮಾದೊಡೆಶಬ್ದಂ ।
ಪರಿಕಿಸೆ ಧಾತ್ವಂತ್ಯದೊಳಾ
ವರಿಸಿರ್ಕುಂ ಲಿಂಗವಚನಪುರುಷಾಯತ್ತಂ ॥ 250 ॥

### ಪದಚ್ಛೇದಂ.

ಪಿರಿದುಂ ಪಕ್ಷಾಂತರಮುಂ ನಿರವಿಪ ಎಕಾರಂ ನಿಜಾಂತಂ ಆದ ಒಡೆಶಬ್ದಂ ಪರಿಕಿಸೆ, ಧಾತ್ವಂತ್ಯದೊಳ್ ಆವರಿಸಿ ಇರ್ಕುಂ, ಲಿಂಗವಚನಪುರುಷಾಯತ್ತಂ.

### ಅನ್ವಯಂ.

ಲಿಂಗವಚನಪುರುಷಾಯತ್ತಂ ಆವರಿಸಿ ಇರ್ಕುಂ ಎಂಬುದನ್ವಯಂ.

### ಟೀಕು.

ಪಿರಿದುಂ=ವಿಶೇಷವಾಗಿ; ಪಕ್ಷಾಂತರಮುಂ=ಒಂದು ಪಕ್ಷಾಂತರವಂ; ನಿರವಿಪೆಕಾರಂ=ಪೇಳ್ವ ಎಕಾರಂ; ನಿಜಾಂತಂ=ತಂನಂತಂ; ಆದ=ಆದ; ಒಡೆಶಬ್ದಂ=ಒಡೆ ಎಂಬ ಶಬ್ದಂ; ಪರಿಕಿಸೆ=ವಿಚಾರಿಸೆ; ಧಾತ್ವಂತ್ಯದೊಳ್=ಧಾತುಗಳಂತ್ಯದಲ್ಲಿ; ಲಿಂಗ=ಲಿಂಗತ್ರಯದಲ್ಲಿ; ವಚನ=ವಚನತ್ರಯದಲ್ಲಿ; ಪುರುಷ=ಪುರುಷತ್ರಯದಲ್ಲಿ; ಆಯತ್ತಂ=ಕೂಡಿದುದಾಗಿ; ಆವರಿಸಿರ್ಕುಂ=ಪೊರ್ದುಗೆಯಾಗಿರ್ಪುದು.

### ವೃತ್ತಿ.

ಪಕ್ಷಾರ್ಥಮುಂ ಪೇೞ್ವೆಕಾರಂ ಕಡೆಯಾಗುಳ್ಳೊಡೆಶಬ್ದಂ ಲಿಂಗತ್ರಯವಚನತ್ರಯಪುರುಷತ್ರಯಾನ್ವಿತಮಾಗಿ, ಧಾತುವಿನ ಕಡೆಯೊಳ್ಪತ್ತುಗುಂ.

### ಪ್ರಯೋಗಂ.

ಲಿಂಗತ್ರಯಕ್ಕೆ—ನೋಱ್ಪೊಡವಳ್ಕೆಱಿಯಳ್; ಸಮಂ ನುಡಿವೊಡವಂ ಪಿರಿಯಂ; ತೀಡುವೊಡಲ್ಲಿ ಕಂಮೆಲರ್ತೀಡುಗುಂ. (ಕಱಿಯಳ್)

ವಚನತ್ರಯಕ್ಕೆ—ಕಾದುವೊಡೊರ್ವನೆ ಬಲ್ಲಿದಂ; ಪೋಲಿಸುವೊಡಿರ್ವರುಂ ತಕ್ಕರ್; ನುಡಿವೊಡೆಲ್ಲರುಂ ಮಾತಱಿಯರ್.

ಪುರುಷತ್ರಯಕ್ಕೆ—ಪೊರ್ದುವೊಡವನೊಳ್ಳಿದಂ; ತಿರ್ದುವೊಡವರೊಳ್ಳಿದರ್; ಬೇಟಿಪ್ಪೊಡೆ ನೀನೊಳ್ಳಿದಯ್; ಈವೊಡೆ ನೀವೊಳ್ಳಿದಿರ್; ಭಾವಿಪೊಡಾನೊಳ್ಳಿದೆಂ; ಸೇವಿಪೊಡಾವೊಳ್ಳಿದೆವು.

ಪಿರಿದೆಂಬುದಱಿಂ ಕಾಲತ್ರಯಕ್ಕೆ—ಪುಸಿದೊಡೆ ಬಿಟ್ಟಂ; ಪಳಂಚಿದಪೊಡೆ ಕೊಂದಪಂ; ಚಿತ್ರಿಪೊಡೆ ತೂಳಿಕೆಯಂ ತರಿಸುವಂ.

## ಸೂತ್ರಂ.

Roots, also those adduced in the instances of this part of the book, have various meanings.

ಧಾತುಗಳವು ನಾನಾರ್ಥೋ
ಪೇತಂಗಳ್ ಲಕ್ಷ್ಯಸಿದ್ಧಿವಿಡಿದುವನಱಿದ |
ನ್ವಿತರೆ ಕ್ರಿಯಾನುಕೂಲಂ
ಮಾತೆಂ ಪೂರಿಸುಗೆ ಮತ್ತಮುೞಿದುವನಿದಱೊಳ್ || 251a ||

## ಪದಚ್ಛೇದಂ.

ಧಾತುಗಳ್ ಅವು ನಾನಾರ್ಥೋಪೇತಂಗಳ್; ಲಕ್ಷ್ಯಸಿದ್ಧಿವಿಡಿದುವಂ ಅಱಿದು, ಅನ್ವಿತರೆ ಕ್ರಿಯಾನುಕೂಲಂ, ಮಾತೆಂ, ಪೂರಿಸುಗೆ ಮತ್ತಂ ಉೞಿದುವಂ ಇದಱೊಳ್.

## ಅನ್ವಯಂ.

ಮತ್ತಂ ಉೞಿದುವಂ ಇದಱೊಳ್ ಪೂರಿಸುಗೆ ಎಂಬುದನ್ವಯಂ.

## ಟೀಕು.

ಧಾತುಗಳ್=ಧಾತುಗಳ್; ಅವು=ಅವು; ನಾನಾರ್ಥೋಪೇತಂಗಳ್=ನಾನಾರ್ಥದೊಡನೆ ಕೂಡಲ್ಪಟ್ಟುವು; ಲಕ್ಷ್ಯಸಿದ್ಧಿವಿಡಿದುವಂ=ಉದಾಹರಣೆಗಳಲ್ಲಿ ಸಿದ್ಧಿವಡೆದುವಂ; ಅಱಿದು=ತಿಳಿದು; ಅನ್ವಿತರೆ=ಬಲ್ಲವರೆ; ಕ್ರಿಯಾನುಕೂಲಂ=ಕ್ರಿಯೆಗೆ ಅನುಕೂಲವಾಗಿ; ಮಾತೆಂ=ಹೇಳ್ವೆಂ; ಮತ್ತಂ=ಇನ್ನು; ಉೞಿದುವಂ=ಉಳಿದ ಧಾತುಗಳಂ; ಇದಱೊಳ್=ಈ ಆಖ್ಯಾತಪ್ರಯೋಗದಲ್ಲಿ; ಪೂರಿಸುಗೆ=ಪೂರ್ಣವಂ ಮಾಡುಗೆ.

## ವೃತ್ತಿ.

ಧಾತುಗಳ್ಪಲವರ್ಥಂಗಳಂ ನುಡಿಯಲ್ಸಮರ್ಥಂಗಳಾಗಿರ್ಪುವು; ಪ್ರಮಾಣಪುರುಷರ ಮಾರ್ಗೋದಾಹರಣಂಗಳ ಬೞಿವಿಡಿದು, ಕಾವ್ಯಾನ್ವಯಸಿದ್ಧಿಯುಳ್ಳರ್ ಕ್ರಿಯಾನುಕೂಲಮಾಗಿ ಮತ್ತಮ್ ಈ ಆಖ್ಯಾತಪ್ರಕರಣದೊಳ್ತಿಳಿದು ಪೂರಿಸುಗೆ.

ಅನುಕ್ತಸೂತ್ರಂ.[1)]

ಕ್ರಿಯೆಯ ಪದಂ ತಾಂ ಕರ್ತೃ
ಪ್ರಯುಕ್ತಮಾಗೆಲ್ಲಿಯೇನದೆಂಬಿಚ್ಛೆಯನಾ |
ಶ್ರಯಿಪುದು ಸಕರ್ಮಕಮದಲ್
ಪ್ರಯುಕ್ತ ಪಡುಧಾತು ಸರ್ವ ಧಾತುಗೆಯಕ್ಕುಂ || 251b ||

To ಈ (to give) or to ಬೇಡು (to beg, the contrary of to give), in fact to all verbal roots, whether transitive or intransitive, the affix ಅಲ್ (or ಎ, S. 249) together with the root ಪಡು (S. 239) may be joined (our Author uses also ಪಡೆ, 354; for forms with both see S. 128), in which case ಪಡು is regularly conjugated. This construction is also used to express the so-called Passive-voice.

ಪದಚ್ಛೇದಂ.

ಕ್ರಿಯೆಯ ಪದಂ ತಾಂ ಕರ್ತೃಪ್ರಯುಕ್ತಂ ಆಗಿ ಎಲ್ಲಿ ಏನ್ ಅದು ಎಂಬ ಇಚ್ಛೆಯಂ ಆಶ್ರಯಿಪುದು, ಸಕರ್ಮಕಂ ಅದು. ಅಲ್ಪ್ರಯುಕ್ತ ಪಡುಧಾತು ಸರ್ವ ಧಾತುಗೆ ಅಕ್ಕುಂ.

ಯಥಾನ್ವಯಂ.

ಟೀಕು.

ಕ್ರಿಯೆಯ ಪದಂ=ಕ್ರಿಯಾಪದಂ; ತಾಂ=ತಾಂ; ಕರ್ತೃಪ್ರಯುಕ್ತಂ=ಕರ್ತೃಪದದೊಡನೆ ಕೂಡಿದುದು; ಆಗಿ=ಆಗಿ; ಎಲ್ಲಿ=ಆವೆಡೆಯಲ್ಲಿ; ಅದು=ಅದು; ಏನ್=ಏನೆಂದು; ಎಂಬಿಚ್ಛೆಯಂ=ಎಂಬಾಪೇಕ್ಷೆಯಂ; ಆಶ್ರಯಿಪುದು=ಬಯಸುವುದು; ಅದು=ಆ ಪದಂ; ಸಕರ್ಮಕಂ=ಸಕರ್ಮಕಪ್ರಯೋಗಂ ಅಪ್ಪುದು; ಸರ್ವ ಧಾತುಗೆ=ಈ || ಪ್ರದಾನೇ || ಎಂಬುದಾದಿಯಾದ ಸಮಸ್ತ ಧಾತುಗಳಿ (vide 6th Chapter); ಅಲ್ಪ್ರಯುಕ್ತ ಪಡುಧಾತು=ಅಲ್ ಎಂಬುದರೊಡನೆ ಕೂಡಿದ ಪಡು ಎಂಬ ಧಾತು; ಅಕ್ಕುಂ=ಆಗುವದು.

ವೃತ್ತಿ.

ಕ್ರಿಯಾಪದಂ ಕರ್ತೃಪದದೊಡನೆ ಕೂಡಿದುದಾಗಿ ಎಲ್ಲಿ ಏನೆಂಬಾಪೇಕ್ಷೆಯಂ ಬಯಸುವದು, ಅದು ಸಕರ್ಮಕಮಕ್ಕುಂ. ಅಲ್ಲಿ ಈ || ಪ್ರದಾನೇ || ಎಂಬುದಾದಿಯಾದ ಸಕಲಧಾತುಗಳ್ಗೆ ಅಲ್ ಎಂಬುದರೊಡನೆ ಕೂಡಿದ ಪಡುಧಾತುವಕ್ಕುಂ; ಅಲ್ಲಿ ಮೊದಲ್ಪೇಳ್ದ ತಾಂ ನೀನ್ ಆನೆಂಬ ಪುರುಷತ್ರಯಕ್ಕೆ ಏಕಾನೇಕವಚನದೊಳ್ ಅಮ್ ಅರ್ ಅಯ್ ಇರ್ ಎನ್ ಎವುಗಳಕ್ಕುಂ ಎಂಬುದನುವರ್ತಿಸೆ, ಪದಮಕ್ಕುಂ.

ಪ್ರಯೋಗಂ.

ತಾನಿರಲ್ಪಟ್ಟಂ, ತಾಮಿರಲ್ಪಟ್ಟರ್; ನೀನಿರಲ್ಪಟ್ಟಯ್, ನೀವಿರಲ್ಪಟ್ಟಿರ್; ಆನಿರಲ್ಪಟ್ಟೆಂ, ಆಮಿರಲ್ಪಟ್ಟೆವು ಎಂಬಂತೆ ಎಲ್ಲಕ್ಕಂ ತಿಳಿವುದು.

1) cf. S. 122b. This (251b) is not found in our best two manuscripts. It is in M. A. and B. Our author referred, as it appears, this so-called Passive-voice simply to Ss. 234; 235. See s. Ss. 126; 128.

ಶಬ್ದಾನುಶಾಸನದಲ್ಲಿ ಸೂತ್ರಂ (4, 2)[1] ‖ ಕರ್ಮಣಿ ‖ ಅನ್ಯದ್-ಯುಷ್ಮದ್-ಅಸ್ಮದ್-ಅರ್ಥೇಷು ಪ್ರತ್ಯೇಕಮ್ ಏಕತ್ವಾನೇಕತ್ವಯೋರ್ ವಿವಕ್ಷಿತಯೋರ್ ಯಥಾಕ್ರಮಂ ಧಾತೋಃ ಅಮ್ ಅರ್ ಅಯ್ ಇರ್ ಎನ್ ಎವು ಏತೇ ಪ್ರತ್ಯಯಾ ಭವಂತಿ ಕರ್ಮಣಿ ಚಾಭಿಧೇಯೇ ‖ ಇಲ್ಲಿ ಕರ್ಮಣಿ ಎಂದು ಕರ್ಮದಲ್ಲಿ ಎಂಬೀ ಸೂತ್ರಕ್ಕೆ ಅನುವರ್ತನೆ ಬಂದು, ತಾನ್ನೀನಾನೆಂಬರ್ಥಂಗಳಲ್ಲಿ ಬೇಱೆ ಬೇಱೆ ಏಕವಚನ ಬಹುವಚನಂಗಳ್ ವಿವಕ್ಷೆಯಾಗೆ ಯಥಾಕ್ರಮವಾಗಿ ಧಾತುಗೆ ಅಮ್ ಅರ್ ಅಯ್ ಇರ್ ಎನ್ ಎವು ಎಂಬೀ ಪ್ರತ್ಯಯಂಗಳ್ ಕರ್ಮದೊಳಮ್[2] ಅಕ್ಕುಂ—ತಾನಿರಲ್ಪಟ್ಟಂ, ತಾಮಿರಲ್ಪಟ್ಟರ್, ನೀನಿರಲ್ಪಟ್ಟಯ್ ಎಂಬಂತೆಲ್ಲಕ್ಕಂ ಪತ್ತಿಸುಗುಂ. ಯೋಗವಿಭಾಗಮುತ್ತರಾರ್ಥಂ.

ಸೂತ್ರಂ (4, 3) ‖ ಬೇಡ್ಯಾದೇರ್ ಅಪ್ರದಾನೇ ‖ ಅನ್ಯದರ್ಥವಿವಕ್ಷಾಯಾಂ ಬೇಡ್ವ ಇತ್ಯೇವಮ್ ಆದಿಭ್ಯೋ ಧಾತುಭ್ಯಃ ಅಪ್ರದಾನೇ ಕರ್ಮಣ್ಯ ಅಮ್-ಆದಯೋ ಭವಂತಿ ‖ ಎಂದುದಾಗಿ (ಈ ಎಂಬ ಧಾತುವಿಗಲ್ಲದೆ) ಬೇಡ್ಯಾದಿಗಪ್ರದಾನದಲ್ಲಿ (ಸಹ) ಎಂಬಾ ಸೂತ್ರಕ್ಕೆ ಅನ್ಯಾರ್ಥವಿವಕ್ಷೆಯಲ್ಲಿ ಬೇಡು ಎಂಬುದಾದಿಯಾದ ಧಾತುಗಳ್ಗೆ ಅಪ್ರದಾನವಾದಲ್ಲಿ ಕರ್ಮದಲ್ಲಿ ಅಮಾದಿಗಳಕ್ಕುಂ.

ಪ್ರಯೋಗಂ.

ಪಾರ್ವನಿನರಸಂ ಗ್ರಾಮಮಂ ಬೇಡಲ್ಪಟ್ಟಂ[3]; ನೀಂ ಬೇಡಲ್ಪಟ್ಟಯ್; ಆಂ ಬೇಡಲ್ಪಟ್ಟೆಂ. (ಶಬ್ದಾನುಶಾಸನದೊಳಿಪ್ಪೇ ಉದಾಹರಣೆಗಳ್). ಇಂತು—ಗೋವಳನಿಂದೆ ಎರ್ಮೆ ಕಱೆಯಲ್ಪಟ್ಟುದು (ಕಱೆ—); ಗುರುವಿನಿಂ ತತ್ತ್ವಮಂ ಬೆಸಗೊಳಲ್ಪಟ್ಟಂ; ಬೇಹುಕಾಱನಿನರಸಂ ಸುದ್ದಿಯಂ ಕೇಳಲ್ಪಟ್ಟಂ; ಪಟ್ಟಳ್, ಪಟ್ಟುದು ಎಂಬಂತೆ.

ಸೂತ್ರಂ (4, 89)[4] ‖ ಕರ್ಮಣ್ಯ ಅನುಪಡುಃ ‖ ಧಾತೋಃ ಪಡುಧಾತುರ್ ಅನುಪ್ರಯುಜ್ಯತೇ ಕರ್ಮಣಿ ವಿಹಿತೇಮಾದೌಪರೇ ‖ ಎಂದುದಾಗಿ ಧಾತುಗೆ ಪಡುಧಾತುವನುಪ್ರಯುಜ್ಯಮಾದಪುದು ಕರ್ಮದಲ್ಲಿ[5] ವಿಹಿತಮಾಗೆ, ಅಮಾದಿಗಳ್ಪರಮಾಗೆ.

---

1) The first S. is: ಧಾತೋರ್ ಏಕಾನೇಕತ್ವೇ (viz. are the Personal Affixes used). The instances given are: ತಾನಿರ್ದಂ, ತಾಮಿರ್ದರ್, ನೀನಿರ್ದಯ್, ನೀಮಿರ್ದರ್; etc. 2) ಕರ್ಮಂ (see s. S. 126) here seems to mean "all formations with ಪಡು, whether it be joined to transitive or intransitive verbs." 3) If translated "the king was asked by the Brahmin for a village", it is an instance of the Passive-voice; but it may be translated also "the king asked a village from the Brahmin". The next sentence "the cow was milked by the herdsman" is clear. The remaining two sentences convey an Active-meaning. 4) Sûtra 88 see s. S. 234. 5) Here ಕರ್ಮಂ must mean the so-called Passive-voice (ಕರ್ಮಣಿಪ್ರಯೋಗಂ) for the examples given.

ದಿರೆ=ಕೂಡಿರೆ; ಒರ್ಮೆ=ಒಂದು ಬಾರಿ; ಡತ್ವಂ=ಡಕಾರಂ ಪ್ರವೇಶವಾಗಿರ್ಪುದು; ಒರ್ಮೆ=ಒಂದು ಬಾರಿ; ಹಕಾರಂ=ಹತ್ವಂ; ಪುದಿದಿರ್ಕುಂ=ಪ್ರವೇಶವಾಗಿರ್ಪುದು.

ವೃತ್ತಿ.

ಪದಮಧ್ಯತಕಾರಕ್ಕೊರ್ಮೆ ರೇಫಮುಂ ಟಕಾರಮುಂ ಗಕಾರಮುಮಕ್ಕುಂ; ಪದಾಂತ್ಯತಕಾರಕ್ಕೆ ಡಕಾರಮುಂ ಹಕಾರಮುಮಕ್ಕುಂ.

ಪ್ರಯೋಗಂ.

ಪದಮಧ್ಯತಕಾರದ ರೇಫೆಗೆ—ಖಾತಿಗೆ=ಕಾರಿಗೆ (ಗಾರಿಗೆ).
ತಕಾರಕ್ಕೆ ಟಕಾರಂ—ಪತ್ತ್ರನಂ=ಪಟ್ಟಣಂ.
ತಕಾರಕ್ಕೆ ಗಕಾರಂ—ಉತ್ಕಟಂ=ಉಗ್ಗಟಂ; ಅತಸಿ=ಅಗಸೆ.
ಪದಾಂತತಕಾರದ ಡತ್ವಕ್ಕೆ—ಸಂಘಾತಂ=ಸಂಗಡಂ.
ತಕಾರಕ್ಕೆ ಹಕಾರಂ—ತ್ವರಿತಂ=ತುರಿಹಂ.

### 4. Changes of Vowels and Consonants in the End.

ಸೂತ್ರಂ.

Final ನ, ಜ್ಞ, ಕ become ಣ; ನ becomes ಣ also in the Middle; Final ಅ becomes ಎ (S. 183), ಇ or ಉ.

ತಿಳಿ ಬಹುಳದೆ ಶಬ್ದಾಂತಂ
ಗಳ ನತ್ವಜ್ಞತ್ವಕತ್ವದೆಡೆಗೆ ಣಕಾರಂ |
ತಳೆಗುಮದಂತಪದಾಂತಂ
ಗಳೆತ್ವಮುಮನಿತ್ವವೃತ್ತಿಯುಮನುತ್ವಮುಮಂ || 278 ||

ಪದಚ್ಛೇದಂ.

ತಿಳಿ! ಬಹುಳದೆ ಶಬ್ದಾಂತಂಗಳ ನತ್ವಜ್ಞತ್ವಕತ್ವದ ಎಡೆಗೆ ಣಕಾರಂ; ತಳೆಗುಂ ಅದಂತಪದಾಂತಂಗಳ್ ಎತ್ವಮುಮಂ ಇತ್ವವೃತ್ತಿಯುಮಂ ಉತ್ವಮುಮಂ.

ಅನ್ವಯಂ.

ಬಹುಳದೆ ಶಬ್ದಾಂತಂಗಳ ನತ್ವಜ್ಞತ್ವಕತ್ವದ ಎಡೆಗೆ ಣಕಾರಂ; ಅದಂತಪದಾಂತಂಗಳ್ ಎತ್ವಮುಮಂ ಇತ್ವವೃತ್ತಿಯುಮಂ ಉತ್ವಮುಮಂ ತಳೆಗುಂ; ತಿಳಿ!

ಟೀಕು.

ಬಹುಳದೆ=ಬಹುಳದಿಂದೆ; ಶಬ್ದಾಂತಂಗಳ=ಶಬ್ದಂಗಳಂತ್ಯದ; ನತ್ವಜ್ಞತ್ವಕತ್ವದ=ನಕಾರದ ಜ್ಞಕಾರದ ಕಕಾರದ; ಎಡೆಗೆ=ಸ್ಥಾನಕ್ಕೆ; ಣಕಾರಂ=ಣತ್ವಂ ಬರ್ಪುದು, ಅರಿ; ಅದಂತಪದಾಂತಂಗಳ್=ಅಕಾರಾಂತವಾದ ಪದಾಂತಂಗಳ್; ಎತ್ವಮುಮಂ=ಎಕಾರಮುಮಂ; ಇತ್ವವೃತ್ತಿಯುಮಂ=ಇಕಾರದ ವರ್ತನೆಯುಮಂ; ಉತ್ವಮುಮಂ=ಉಕಾರಮುಮಂ; ತಳೆಗುಂ=ತಳೆವುವು; ತಿಳಿ=ಅರಿ.

ವೃತ್ತಿ.

ಬಹುಳದಿಂ ಶಬ್ದಂಗಳ ಕಡೆಯ ನಕಾರ ಜ್ಞಕಾರ ಕಕಾರಂಗಳ್ಗೆ ಣ್ಣತ್ವಮಕ್ಕುಂ; ಪದಾಂತ್ಯದಕಾರಂಗಳ್ಗೆತ್ವಮುಮಿತ್ವಮುಮುತ್ವಮುಮಕ್ಕುಂ.

ಪ್ರಯೋಗಂ.

ನತ್ವಕ್ಕೆ ಣ್ಣತ್ವಂ—ಖನಿ=ಖಣಿ; ಮಂಥನಿ=ಮಂತಣಿ (s. S. 285); ಲಂಬನಂ=ಲಂಬಣಂ; ಸ್ಥಾನಂ=ತಾಣಂ; ಪಿಶುನಂ=ಹಿಸುಣಂ; ವಿಜ್ಞಾನಂ=ಬಿನ್ನಣಂ; ಪತ್ತನಂ=ಪಟ್ಟಣಂ; ಸುವಾಸಿನಿ=ಸೋವಾಸಿಣಿ (s. S. 270); ಫಲ್ಗುನಂ=ಪಲುಗುಣಂ; ಅಂಕನಂ=ಅಂಗಣಂ, ಅಂಗಣವಾವಿಯೆಂದಚ್ಚಗನ್ನಡದ ಸಮಾಸಮುಂಟು, ಮತ್ತಂ ಸಂಸ್ಕೃತದೊಳಮಂಗಣಮುಂಟು, ರಾಜಾಂಗಣಂ ಗೃಹಾಂಗಣಮೆಂದು.

ಜ್ಞತ್ವಕ್ಕೆ ಣ್ಣತ್ವಂ—ಆಜ್ಞೆ=ಆಣೆ.

ಕಕಾರಕ್ಕೆ ಣ್ಣತ್ವಂ—ನರ್ತಕಿ=ನಚ್ಚಣಿ.

ಬಹುಳದಿಂ ಪದಮಧ್ಯನಕಾರಕ್ಕಂ ಣ್ಣತ್ವಂ—ಶುನಕಂ=ಸೊಣಗಂ.

ಅತ್ವಕ್ಕೆತ್ವಂ—ಶಾಣಂ=ಸಾಣೆ; ಪ್ರಹರಣಂ=ಪ್ರಹರಣೆ; ಕುಸುಂಭಂ=ಕುಸುಂಬೆ; ಜೀರಕಂ=ಜೀರಿಗೆ; ಚೀರಂ=ಸೀರೆ; ಧೂಮಂ=ದೂವೆ; ಅಂದುಕಂ=ಅಂದುಗೆ; ಕುರುಂಟಂ=ಗೋರಟೆ (s. S. 270); ಕಳಮಂ=ಕಳವೆ; ಘಟ್ಟಣಂ=ಘಟ್ಟಣೆ; ಸ್ಥಾಪನಂ=ತಾಪಣೆ; ಕೋಕಿಲಂ=ಕೋಗಿಲೆ; ಮಂಡಕಂ=ಮಂಡಗೆ; ಪಾದುಕಂ=ಪಾವುಗೆ (s. S. 268); ಹಂಸಂ=ಅಂಚೆ; ಅರ್ಕ್ಕಂ=ಎರ್ಕ್ಕೆ.

ಅತ್ವಕ್ಕಿತ್ವಂ—ಕಂಬಳಂ=ಕಂಬಳಿ; ಮಾಘಂ=ಮಾಗಿ; ಬರ್ಬುಲಂ=ಬೊಬ್ಬುಲಿ (s. S. 274); ಭೃಂಗಾರಂ=ಬಿಂಗಾರಿ; ಪಾಟಳಂ=ಪಾದರಿ; ಕುಕ್ಕುಟಂ=ಕೋೞಿ; ಅರ್ಗಳಂ=ಅಗುೞಿ; ಕುದ್ದಾಲಂ=ಗುದ್ದಲಿ; ಆಷಾಢಂ=ಅಸಡಿ; ಸಸ್ಯಂ=ಸಸಿ.

ಅತ್ವಕುತ್ವಂ—ದಂಡಂ=ದಂಡು; ವಾಡಂ=ಬಾಡು; ಸ್ಫಟಿಕಂ=ಪಳಿಕು; ರೂಪಂ=ರೂಪು, ರೂವೆಂದುಮುಂಟು; ಕೂಟಂ=ಕೋಡು; ಸುಲ್ಲಂ=ಸುಲು, ಸುಲೆಂದು ಕಿಸುವೊನ್; ಕಾಚಂ=ಗಾಜು; ಅಕ್ಷಂ=ಅಚ್ಚು; ಅಮೃತಂ=ಅಮರ್ದು; ಧಾಮಂ=ದಾವು; ಮರೀಚಂ=ಮೆಳಸು; ದ್ಯೂತಂ=ಜೂದು; ತರಂಗಂ=ತರಂಗು; ಪೆಟ್ಟಂ=ಪೆಟ್ಟು.

ಸೂತ್ರಂ.

Final ಉ becomes ಇ; ಇ be-

ನೆಲೆಗೊಂಡುತ್ವಕ್ಕಿತ್ವಂ
ಕೆಲವೆಡೆಯಿತ್ವಕ್ಕಮುತ್ವಮುಂ ಪ್ರಸ್ತುತೆಯ |

comes ಉ or ಎ; a Final vowel is also elided.

ಗ್ಗಲಿಸಿರ್ದೆತ್ತ್ವಮುಮಂತ್ಯ
ಸ್ಥಲಸ್ವರಕ್ಕೊರ್ಮೆ ಲೋಪಮುಂ ಸಂಭವಿಕುಂ || 279 ||

ಪದಚ್ಛೇದಂ.

ನೆಲೆಗೊಂಡ ಉತ್ವಕ್ಕೆ ಇತ್ವಂ, ಕೆಲ ಎಡೆಯ ಇತ್ವಕ್ಕಂ ಉತ್ವಮುಂ ಪ್ರಸ್ವತೆ ಅಗ್ಗಲಿಸಿ ಇರ್ದ ಎತ್ವಮುಂ, ಅಂತ್ಯಸ್ಥಲಸ್ವರಕ್ಕೆ ಒರ್ಮೆ ಲೋಪಮುಂ ಸಂಭವಿಕುಂ.

ಯಥಾನ್ವಯಂ.

ಟೀಕು.

ನೆಲೆಗೊಂಡ=ಪದಾಂತಂಗಳಲ್ಲಿ ನೆಲೆಗೊಂಡ; ಉತ್ವಕ್ಕೆ=ಉಕಾರಕ್ಕೆ; ಇತ್ವಂ=ಇಕಾರಂ ಬರ್ಪುದು; ಕೆಲವೆಡೆಯ=ಕೆಲವು ತಾವಿನ; ಇತ್ವಕ್ಕಂ=ಇಕಾರಕ್ಕೆಯುಂ; ಉತ್ವಮುಂ=ಉಕಾರವುಂ; ಪ್ರಸ್ವತೆ=ಪ್ರಸ್ವತ್ವಂ; ಅಗ್ಗಲಿಸಿರ್ದೆತ್ವಮುಂ=ವೆಗ್ಗಳಿಸಿರ್ದ ಎಕಾರವುಂ ಬರ್ಪುದು; ಅಂತ್ಯಸ್ಥಲಸ್ವರಕ್ಕೆ=ಕಡೆಯಣ ಸ್ವರಕ್ಕೆ; ಒರ್ಮೆ=ಒಂದು ಬಾರಿ; ಲೋಪಮುಂ=ಅದರ್ಶನಮುಂ; ಸಂಭವಿಕುಂ=ಸಂಭವಿಸುವದು (ಬರ್ಪುದು).

ವೃತ್ತಿ.

ಪದಾಂತ್ಯದುಕಾರಕ್ಕಿಕಾರಮಕ್ಕುಂ; ಕೆಲವೆಡೆಯಿಕಾರಕ್ಕುಕಾರಮುಂ ಹ್ರಸ್ವಮಪ್ಪೆತ್ವಮುಮಕ್ಕುಂ; ಪದಾಂತ್ಯಸ್ವರಕ್ಕೊರ್ಮೆ ಲೋಪಮಕ್ಕುಂ.

ಪ್ರಯೋಗಂ.

ಉತ್ವಕ್ಕಿತ್ವಂ—ಖರ್ಜು=ಕಜ್ಜಿ; ಕುಸ್ತುಂಬುರು=ಕೊತ್ತುಂಬರಿ (s. Ss. 264; 287).

ಇತ್ವಕ್ಕುತ್ವಂ—ಗ್ರಂಥಿ=ಗಂಟು; ಸಂಧಿ=ಸಂದು; ಮುಷ್ಟಿ=ಮುಚ್ಚು; ಮಂತ್ರಿ=ಮಂತು.

ಇತ್ವಕ್ಕೆತ್ವಂ—ಪಂಚಮಿ=ಪಂಚವೆ; ಸಪ್ತಮಿ=ಸತ್ತವೆ; ಅಷ್ಟಮಿ=ಅಟ್ಟವೆ; ಪುಷ್ಕರಣಿ=ಹೊಕ್ಕರಣೆ; ಕುಕ್ಷಿ=ಕುಕ್ಕೆ; ತುಂಡಿ=ತೊಂಡೆ; ಅತಸಿ=ಅಗಸೆ; ತುಲಸಿ=ತೊಳಚೆ.

ಅಂತ್ಯಸ್ವರಲೋಪಕ್ಕೆ—ಕೀಲ=ಕೀಲ್; ಶೀಲಂ=ಶೀಲ್; ಕೋಣಂ=ಕೋಣ್; ಪ್ರಮಾಣಂ=ಪವಣ್; ಮಿಾನಂ=ಮಿಾನ್; ನೀರಂ=ನೀರ್; ಮುಕುಳಂ=ಮುಗುಳ್.

ಸೂತ್ರಂ.

ಆಶ್ಚರ್ಯಂ, ಪ್ರಗ್ರಹಂ, ವಿಜ್ಞಾಪನಂ, ಕಪಿಂಜಳಂ, ಆಂಗಿರಸಂ, ಗ್ರಹಣಂ become ಅಚ್ಚರಿ, ಹಗ್ಗಂ, ಬಿಣಪಂ, ಕವಿಂಜು, ಆಂಗಿರಂ, ಗರಣಂ.

ಮಹಿ ಪೊಗಟ್ಬ್ದಾಶ್ಚರ್ಯಪ್ರ[1]
ಗ್ರಹವಿಜ್ಞಾಪನಕಪಿಂಜಳಾಂಗಿರಸಾಂತ್ಯ |
ಕ್ಕೆ ಹಿತಂ ಲೋಪವಿಧಾನಂ
ಗ್ರಹಣಕ್ಕಂ ಗರಣಮಾಯ್ತು ಶಬ್ದಾದೇಶಂ || 280a ||

1) In ಪೊಗಟ್ಬ್ದ appears ಶಿಥಿಲತ್ವಂ.

ಪದಚ್ಛೇದಂ.

ಮಹಿ ಪೊಗೞ್ವ ಆಶ್ಚರ್ಯಪ್ರಗ್ರಹವಿಜ್ಞಾಪನಕಪಿಂಜಳಾಂಗಿರಸಾಂತ್ಯಕ್ಕೆ ಹಿತಂ ಲೋಪವಿಧಾನಂ; ಗ್ರಹಣಕ್ಕಂ ಗರಣಂ ಆಯ್ತು ಶಬ್ದಾದೇಶಂ.

ಯಥಾನ್ವಯಂ.

ಟೀಕು.

ಮಹಿ=ಭೂಮಿ; ಪೊಗೞ್ವ=ಕೊಂಡಾಡುವ; ಆಶ್ಚರ್ಯ=ಆಶ್ಚರ್ಯವೆಂಬ ಶಬ್ದದ; ಪ್ರಗ್ರಹ=ಪ್ರಗ್ರಹವೆಂಬ ಶಬ್ದದ; ವಿಜ್ಞಾಪನ=ವಿಜ್ಞಾಪನವೆಂಬ ಶಬ್ದದ; ಕಪಿಂಜಳ=ಕಪಿಂಜಳವೆಂಬ ಶಬ್ದದ; ಅಂಗಿರಸ=ಅಂಗಿರಸವೆಂಬ ಶಬ್ದದ; ಅಂತ್ಯಕ್ಕೆ=ಕಡೆಗೆ; ಲೋಪವಿಧಾನಂ=ಅದರ್ಶನಂ; ಹಿತಂ=ಹಿತವಾಗುವದು; ಗ್ರಹಣಕ್ಕಂ=ಗ್ರಹಣವೆಂಬ ಶಬ್ದಕ್ಕೆಯುಂ; ಗರಣಂ=ಗರಣವೆಂದು; ಶಬ್ದಾದೇಶಂ=ಶಬ್ದಕ್ಕಾದೇಶಂ; ಆಯ್ತು=ಆಯ್ತು.

ವೃತ್ತಿ.

ಈ ಶಬ್ದಂಗಳ ಕಡೆಯಕ್ಕರಕ್ಕೆ ಲೋಪಂ; ಗ್ರಹಣಶಬ್ದಕ್ಕೆ ಗರಣಮೆಂದಾದೇಶಂ.

ಪ್ರಯೋಗಂ.

ಆಶ್ಚರ್ಯಂ=ಅಚ್ಚರಿ; ಪ್ರಗ್ರಹಂ=ಹಗ್ಗಂ; ವಿಜ್ಞಾಪನಂ=ಬಿಂನಪಂ; ಕಪಿಂಜಳಂ=ಕವಿಂಜು; ಅಂಗಿರಸಂ=ಅಂಗಿರಂ; ಗ್ರಹಣಂ=ಗರಣಂ.

ಸೂತ್ರಂ.

ಕ್ರೂರಂ, ಪ್ರಾಕಾರಂ, ಗ್ರಾಮಿಣಿಂ become ಕೂಱಿರ್ (S. 21), ಪಾಗಲ್, ಗಾವಿಲಂ.

ಕ್ರೂರಪ್ರಾಕಾರಂಗಳ
ಮೇರೆಯ ರೇಫಕ್ಕೆ ತರದೆ ೞೞಲತ್ವಂಗಳ್ |
ಪೂರಿಪುವಸ್ವರವಿಧಿಯಿಂ
ಸಾರಂ ಗ್ರಾಮಿಣಣತ್ವದೆಡೆಗೆ ಲಕಾರಂ || 280b ||

ಪದಚ್ಛೇದಂ.

ಕ್ರೂರ ಪ್ರಾಕಾರಂಗಳ ಮೇರೆಯ ರೇಫಕ್ಕೆ ತರದೆ ೞೞ ಲತ್ವಂಗಳ್ ಪೂರಿಪುವು ಅಸ್ವರವಿಧಿಯಿಂ; ಸಾರಂ ಗ್ರಾಮಿಣಣತ್ವದ ಎಡೆಗೆ ಲಕಾರಂ.

ಯಥಾನ್ವಯಂ.

ಟೀಕು.

ಕ್ರೂರಪ್ರಾಕಾರಂಗಳ=ಕ್ರೂರವೆಂಬ ಪ್ರಾಕಾರವೆಂಬ ಶಬ್ದಂಗಳ; ಮೇರೆಯ=ಅಂತ್ಯದ; ರೇಫಕ್ಕೆ=ರೇಫೆಗೆ; ತರದೆ=ತರುವಾಯಿಂದೆ; ೞೞಲತ್ವಂಗಳ್=ೞೞ ಲಕಾರಂಗಳ್; ಅಸ್ವರವಿಧಿಯಿಂ=

ವ್ಯಂಜನದ ವಿಧಿಯಿಂದೆ; ಪೂರಿಪುವು=ಪೂರೈಸುವವು; ಗ್ರಾಮಿಣೀಣತ್ವದ=ಗ್ರಾಮಿಣೀವೆಂಬ ಶಬ್ದದ ಣಕಾರದ; ಎಡೆಗೆ=ತಾವಿಂಗೆ; ಲಕಾರಂ=ಲತ್ವಂ; ಸಾರಂ=ಶ್ರೇಷ್ಠವಾಗುವದು.

ವೃತ್ತಿ.

ಕ್ರೂರ ಪ್ರಾಕಾರಂಗಳ ರೇಫೆಗೆ ಪರಿವಿಡಿಯಿಂ ಱಱನುಂ ಲಕಾರಮುಂ ವ್ಯಂಜನರೂಪದಿನಕ್ಕುಂ; ಗ್ರಾಮಿಣೀಶಬ್ದದ ಣೀಕಾರಕ್ಕೆ ಲಕಾರಮಕ್ಕುಂ.

ಪ್ರಯೋಗಂ.

ಕ್ರೂರಂ=ಕೂಱ್; ಪ್ರಾಕಾರಂ=ಪಾಗಲ್; ಗ್ರಾಮಿಣೀಂ=ಗಾವಿಲಂ.

**5. Further changes.**

ಸೂತ್ರಂ.

ಶಸದಧಲಜಳತದಿಂ ಕೆಳ
ಗೆ ಸಲ್ವ ವತ್ವಂ ಶ್ನಕಾರನತ್ವಂ ಮತ್ತಂ |
ಜಸಕನವಶಷದ ಯತ್ವಂ
ಪ್ರಸಂನಭಾವದೊಳೆ ತಳ್ತು ಲೋಪಮನಾಳ್ಗುಂ || 281 ||

ಶ್ವ, ಸ್ವ, ದ್ವ, ಧ್ವ, ಲ್ವ, ಜ್ವ, ಳ್ವ, ತ್ವ loose their ವ (cf. S. 266); ಶ್ನ looses its ನ; ಜ್ಯ, ಸ್ಯ, ಕ್ಯ, ನ್ಯ, ವ್ಯ, ಶ್ಯ, ಷ್ಯ loose their ಯ (cf. S. 266); — and then some other changes also happen.

ಪದಚ್ಛೇದಂ.

ಶಸದಧಲಜಳತದಿಂ ಕೆಳಗೆ ಸಲ್ವ ವತ್ವಂ, ಶ್ನಕಾರನತ್ವಂ, ಮತ್ತಂ ಜಸಕನವಶಷದ ಯತ್ವಂ ಪ್ರಸಂನಭಾವದೊಳೆ ತಳ್ತು ಲೋಪಮಂ ಆಳ್ಗುಂ.

ಯಥಾನ್ವಯಂ.

ಟೀಕು.

ಶಸದಧಲಜಳತದಿಂ=ಶಕಾರ ಸಕಾರ ದಕಾರ ಧಕಾರ ಲಕಾರ ಜಕಾರ ಳಕಾರ ತಕಾರಂಗಳಿಂದೆ; ಕೆಳಗೆ ಸಲ್ವ ವತ್ವಂ=ಕೆಳಗೆ ಸಲ್ವ ವಕಾರಂ; ಶ್ನಕಾರನತ್ವಂ=ಶ್ನಕಾರದ ನಕಾರಂ; ಮತ್ತಂ=ಬಳಿಕಂ; ಜಸಕನವಶಷದ=ಜಕಾರ ಸಕಾರ ಕಕಾರ ನಕಾರ ವಕಾರ ಶಕಾರ ಷಕಾರಂಗಳ; ಯತ್ವಂ=ಅಡಿಯಣ ಯಕಾರಂ; ಪ್ರಸನ್ನಭಾವದೊಳೆ=ಪ್ರತ್ಯಕ್ಷದ ಭಾವದಲ್ಲಿಯೆ; ತಳ್ತು=ಕೂಡಿ; ಲೋಪಮಂ=ಅದರ್ಶನಮಂ; ಆಳ್ಗುಂ=ತಾಳ್ವವು.

ವೃತ್ತಿ.

ಶಕಾರ-ಸಕಾರ-ದಕಾರ-ಧಕಾರ-ಲಕಾರ-ಜಕಾರ-ಳಕಾರ-ತಕಾರದ ಕೆಳಗಣ ವತ್ವಕ್ಕೆ ಲೋಪಂ; ಶ್ನಕಾರದ ನಕಾರಕ್ಕಂ ಲೋಪಂ; ಜಕಾರ-ಸಕಾರ-ಕಕಾರ-ನಕಾರ-ವಕಾರ-ಶಕಾರ-ಷಕಾರದ ಕೆಳಗಿರ್ದ ಯತ್ವಕ್ಕಂ ಲೋಪಂ.

## ಪ್ರಯೋಗಂ.

ವತ್ವಲೋಪಕ್ಕೆ—ಈಶ್ವರಂ=ಈಸರಂ; ಶಾಶ್ವತಂ=ಸಾಸತಂ; ಶ್ವಾನಂ=ಸಾನಂ; ಶ್ವೇತಂ=ಸೇತಂ;—ಸ್ವರ್ಗಂ=ಸಗ್ಗಂ; ಸ್ವಾಮಿ=ಸಾಮಿ; ಸ್ವಯಂಭು=ಸಯಂಭು; ಸ್ವರಂ=ಸರಂ; ತಪಸ್ವಿ=ತಪಸಿ, ತವಸಿಯೆಂದುಮುಂಟು; ಸ್ವರೂಪಂ=ಸರೂಪಂ; ಸ್ವಾತಿ=ಸಾತಿ; ಸರಸ್ವತಿ=ಸರಸತಿ;—ದ್ವೀಪಂ=ದೀಪಂ, ದೀವಿಯೆಂದುಮುಂಟು; ದ್ವಾರಪಟ್ಟಂ=ದಾರವಟ್ಟಂ; ದ್ವಿಗುಣಂ=ದುಗುಣಂ;—ಧ್ವನಿ=ದನಿ;—ಸುಲ್ವಂ=ಸುಲು, ಸುಲ್ ಎಂದುಮುಂಟು;—ಜ್ವಾಲೆ=ಜಾಳೆ; ಜ್ವರಂ=ಜರಂ;—ಖಿಳ್ವಂ=ಕಿಳ್;—ತ್ವರಿತಂ=ತುರಿಹಂ.

ಶ್ನಕಾರನತ್ವಲೋಪಕ್ಕೆ—ಶ್ನುಷೆ=ಸೊಸೆ.

ಯತ್ವಲೋಪಕ್ಕೆ—ಜ್ಯೋತಿ=ಜೋತಿ; ಜ್ಯೋತಿಷಂ=ಜೋಯಿಸಂ;—ಸಸ್ಯಂ=ಸಸಿ; ಕಾಂಸ್ಯಂ=ಕಂಚು; ಆಲಸ್ಯಕಂ=ಅಲಸುಗೆ; ಅಮಾವಾಸ್ಯೆ=ಅಮಾಸೆ, ಅವಸೆಯೆಂದುಮುಂಟು (s. S. 286);—ಮಾಣಿಕ್ಯಂ=ಮಾಣಿಕಂ;—ನ್ಯೂನಂ=ನೂನಂ; ನ್ಯಾಯಂ=ನೇಯಂ;—ವ್ಯಥೆ=ಬೆತೆ; ವ್ಯಂಜನಂ=ಬೆಂಜನಂ; ವ್ಯವಹಾರಂ=ಬೇಹಾರಂ;—ವಾಂಶ್ಯಂ=ವಾಸಂ; ಶ್ಯಾಮವರ್ಣಂ=ಸಾವರ್ಣಂ;—ಆಯುಷ್ಯಂ=ಆಯಿಸಂ.

## ಸೂತ್ರಂ.

ಜ becomes ಯ (cf. S. 259), ಸ, ಚ, ದ; ಭ becomes ಹ, ಪ, ವ (cf. Ss. 255; 258); ರ becomes ಲ or ಳ (cf. S. 29).

ಯತ್ವದ ಸತ್ವದ ಚತ್ವದ
ದತ್ವದ ವಿಧಿ ಜತ್ವದಲ್ಲಿ ಸಂಭವಿಸಿರ್ಕುಂ |
ಭತ್ವಕ್ಕೆ ಹಪವವಕ್ಕುಂ
ರತ್ವಕ್ಕಂ ಲಳಮುಮಕ್ಕುಮೋರೊಂದೆಡೆಯೊಳ್ || 282 ||

## ಪದಚ್ಛೇದಂ.

ಯತ್ವದ ಸತ್ವದ ಚತ್ವದ ದತ್ವದ ವಿಧಿ ಜತ್ವದಲ್ಲಿ ಸಂಭವಿಸಿ ಇರ್ಕುಂ; ಭತ್ವಕ್ಕೆ ಹಪವಂ ಅಕ್ಕುಂ; ರತ್ವಕ್ಕಂ ಲಳಮುಂ ಅಕ್ಕುಂ ಓರ್ ಒಂದು ಎಡೆಯೊಳ್.

## ಯಥಾನ್ವಯಂ.

## ಟೀಕು.

ಜತ್ವದಲ್ಲಿ=ಜಕಾರದಲ್ಲಿ; ಯತ್ವದ=ಯಕಾರದ; ಸತ್ವದ=ಸಕಾರದ; ಚತ್ವದ=ಚಕಾರದ; ದತ್ವದ=ದಕಾರದ; ವಿಧಿ=ವಿಧಿ; ಸಂಭವಿಸಿರ್ಕುಂ=ಹುಟ್ಟಿರ್ಪುದು; ಭತ್ವಕ್ಕೆ=ಭಕಾರಕ್ಕೆ; ಹಪವಂ=ಹಕಾರಪಕಾರವಕಾರಂ; ಅಕ್ಕುಂ=ಆಗುವದು; ಓರೊಂದೆಡೆಯೊಳ್=ಒಂದೊಂದು ತಾವಿನಲ್ಲಿ; ರತ್ವಕ್ಕಂ=ರೇಫೆಗಂ; ಲಳಮುಂ=ಲಕಾರಳಕಾರಮುಂ; ಅಕ್ಕುಂ=ಆಗುವದು.

## ವೃತ್ತಿ.

ಯತ್ವಮುಂ ಸತ್ವಮುಂ ದತ್ವಮುಂ ಚತ್ವಮುಂ ಜತ್ವಕ್ಕಾದೇಶಮಕ್ಕುಂ; ಭತ್ವಕ್ಕೆ ಹತ್ವಮುಂ ಪತ್ವಮುಂ ವತ್ವಮುಮಕ್ಕುಂ; ರೇಫೆಗೆ ಲತ್ವಮುಂ ಳತ್ವಮುಂ ಕೆಲವೆಡೆ ಯೊಳಕ್ಕುಂ.

## ಪ್ರಯೋಗಂ.

ಜತ್ವಕ್ಕೆ ಯತ್ವಂ—ರಾಜಂ=ರಾಯಂ.
ಜತ್ವಕ್ಕೆ ಸತ್ವಂ—ಕುಟಜಕಂ=ಕೊಡಸಿಗೆ.
ಜತ್ವಕ್ಕೆ ದತ್ವಂ—ಮುಂಜಂ=ಮೊದೆ [also M. A. and B.]
ಜತ್ವಕ್ಕೆ ಚತ್ವಂ—ಲಾಮಜ್ಜಂ=ಲಾಮಚ್ಚಂ.
ಭತ್ವಕ್ಕೆ ಹತ್ವಂ—ವಲ್ಲಭಂ=ಬಲ್ಲಹಂ.
ಭತ್ವಕ್ಕೆ ಪತ್ವಂ—ಭಿಂಡಿವಾಳಂ=ಪಿಂಡಿವಾಳಂ.
ಭತ್ವಕ್ಕೆ ವತ್ವಂ—ವೃಷಭಂ=ಬಸವಂ.
ರೇಫೆಗೆ ಲತ್ವಂ—ಕುಠಾರಂ=ಕೊಡಲಿ.
ರೇಫೆಗೆ ಳತ್ವಂ—ಮರೀಚಂ=ಮೆಳಸು.

## ಸೂತ್ರಂ.

ಢ becomes ಡ್ಡ, ಡ, or ಜ್ಜ; ಧ (cf. S. 255) becomes ಜ, ಷ್ಟ becomes ಡ್ಡ, ಟ್ಟ, or ಟ; ಷ್ಠ becomes ಟ್ಟ, or ಟ.

ಡತ್ವಂ ಜತ್ವಂ ದ್ವಿತ್ವಾ
ದ್ವಿತ್ವಧಕಾರಕ್ಕೆ ಯೋಗವಾಹಮನಾಳ್ದಾ |
ಷತ್ವಕ್ಕೆ ಡತ್ವಟತ್ವಂ
ದ್ವಿತ್ವದಿನಕ್ಕುಂ ಟಕಾರವೊರ್ಮೆದ್ವಿತ್ವಂ || 283 ||

## ಪದಚ್ಛೇದಂ.

ಡತ್ವಂ ಜತ್ವಂ ದ್ವಿತ್ವಾದ್ವಿತ್ವಧಕಾರಕ್ಕೆ; ಯೋಗವಾಹಮಂ ಆಳ್ದ ಆ ಷತ್ವಕ್ಕೆ ಡತ್ವಟತ್ವಂ ದ್ವಿತ್ವ ದಿಂ ಅಕ್ಕುಂ; ಟಕಾರಂ ಒರ್ಮೆ ಅದ್ವಿತ್ವಂ.

## ಅನ್ವಯಂ.

ದ್ವಿತ್ವಾದ್ವಿತ್ವಧಕಾರಕ್ಕೆ ಡತ್ವಂ ಜತ್ವಂ ಎಂಬುದನ್ವಯಂ.

## ಟೀಕು.

ದ್ವಿತ್ವಾದ್ವಿತ್ವಧಕಾರಕ್ಕೆ=ದ್ವಿತ್ವದ (ಮತ್ತು) ಅದ್ವಿತ್ವದ ಧಕಾರಕ್ಕೆ; ಡತ್ವಂ=ಡಕಾರಂ; ಜತ್ವಂ=ಜ ಕಾರಂ; ಅಕ್ಕುಂ=ಅದ್ವಿತ್ವವಾಗಿ ದ್ವಿತ್ವವಾಗಿ ಆಗುವದು; ಯೋಗವಾಹಮಂ=ಯೋಗವಾಹಮಂ;

ಅಳ್ದಾ ಷತ್ವಕ್ಕೆ=ತಾಳ್ದ ಆ ಷಕಾರಕ್ಕೆ; ಡತ್ವಟತ್ವಂ=ಡಕಾರ ಟಕಾರಂಗಳ್; ದ್ವಿತ್ವದಿಂ=ಒತ್ತಿನೊಡನೆ ಆಗುವದು; ಟತ್ವಂ=ಟಕಾರಂ; ಒರ್ಮೆ=ಒಂದು ಬಾರಿ; ಅದ್ವಿತ್ವಂ=ದ್ವಿತ್ವವಿಲ್ಲದದು ಆಗುವದು.

## ವೃತ್ತಿ.

ದ್ವಿತ್ವಮುಮದ್ವಿತ್ವಮುಮಪ್ಪ ಧಕಾರಕ್ಕೆ ತದನುರೂಪಮಾಗಿ ಡಕಾರಮುಂ ಜಕಾರಮುಮಕ್ಕುಂ; ಆ ಯೋಗವಾಹದ ಷತ್ವಕ್ಕೆ (Ss. 12. 17) ದ್ವಿತ್ವದ ಡಕಾರಮುಂ ಟಕಾರಮುಮಕ್ಕುಂ; ದ್ವಿತ್ವರಹಿತಮಪ್ಪ ಟತ್ವಮೊರ್ಮೆಯಕ್ಕುಂ.

## ಪ್ರಯೋಗಂ.

ದ್ವಿತ್ವಧಕಾರಕ್ಕೆ ಡಕಾರಂ—ವರ್ಧಕಿ=ಬಡ್ಡಗಿ, ಬಡಗಿಯುಮಕ್ಕುಂ.

ದ್ವಿತ್ವಧಕಾರಕ್ಕೆ ಜಕಾರಂ—ಪದ್ಧತಿ=ಪಜ್ಜೆ (ಹೆಜ್ಜೆ), ಪದ್ಧತಿಯೆಂಬ ಶಬ್ದದ ತಕಾರಕ್ಕೆ ಲೋಪಮುಂಟು.

ಅದ್ವಿತ್ವಧಕಾರಕ್ಕೆ ಜಕಾರಂ—ಧಾತು=ಜಾದು (ಜಾತು).

ಯೋಗವಾಹಷಕಾರಕ್ಕೆ ಡತ್ವಂ—ಕಾಷ್ಠಂ=ಕಡ್ಡಿ.

ಆ ಷಕಾರಕ್ಕೆ ಟತ್ವಂ—ನಿಷ್ಠೆ=ನಿಟ್ಟೆ; ನಿಷ್ಠುರಂ=ನಿಟ್ಟುರಂ; ಗೋಷ್ಠಿ=ಗೋಟ್ಟಿ; ಷಷ್ಟಿ=ಚಟ್ಟಿ; ಮಂಜಿಷ್ಠಕಂ=ಮಂಜಿಟ್ಟಿಗೆ; ಅಂಗುಷ್ಠಂ=ಉಂಗುಟ್ಟಂ; ಈ ಎರಡು ಶಬ್ದಂಗಳ್ಗೆ ವಿಕಲ್ಪಂ=ಮಂಜಿಟಿಗೆ, ಉಂಗುಟಂ; ದುಷ್ಟಂ=ದುಟ್ಟಂ; ನಷ್ಟಿ=ನಟ್ಟಿ; ಸೃಷ್ಟಿ=ಸಿಟ್ಟಿ; ಕಷ್ಟಂ=ಕಟ್ಟಂ; ಪಿಷ್ಟಂ=ಪಿಟ್ಟು (ಹಿಟ್ಟು); ಮುಷ್ಟಿಕೆ=ಮುಟ್ಟಿಗೆ; ಇಷ್ಟಕಂ=ಇಟ್ಟಿಗೆ.

ಆ ಷಕಾರಕ್ಕೆ ಅದ್ವಿತ್ವಟಕಾರಂ—ಪ್ರತಿಷ್ಠೆ=ಹದಿಟೆ; ಜ್ಯೇಷ್ಠೆ=ಜೇಟೆ; ಸೌರಾಷ್ಟ್ರಂ=ಸೊರಟಂ.

## ಸೂತ್ರಂ.

ದಾಡಿಮಂ, ಕೂಷ್ಮಾಂಡಂ become ದಾಳಿಂಬಂ, ಕುಂಬಳಂ. (see S. 20).

ವಿದಿತಂ ದಾಡಿಮಕೂಷ್ಮಾಂ
ಡದ ಮತ್ವಸ್ಥಾನದಲ್ಲಿ ಬತ್ವಂ ಕೂಷ್ಮಾಂ |
ಡದ ಷತ್ವಕ್ಕಂ ಬಿಂದುಗ
ಮುದಯಿಸುಗುಂ ಲೋಪವೃತ್ತಿ ಲಕ್ಷಣವಿಧಿಯಿಂ || 284 ||

## ಪದಚ್ಛೇದಂ.

ವಿದಿತಂ ದಾಡಿಮಕೂಷ್ಮಾಂಡದ ಮತ್ವಸ್ಥಾನದಲ್ಲಿ ಬತ್ವಂ; ಕೂಷ್ಮಾಂಡದ ಷತ್ವಕ್ಕಂ ಬಿಂದುಗಂ ಉದಯಿಸುಗುಂ ಲೋಪವೃತ್ತಿ ಲಕ್ಷಣವಿಧಿಯಿಂ.

ಅನ್ವಯಂ.

ದಾಡಿಮಕೂಷ್ಮಾಂಡದ ಮತ್ವಸ್ಥಾನದಲ್ಲಿ ಬತ್ವಂ ವಿದಿತಂ; ಕೂಷ್ಮಾಂಡದ ಷತ್ವಕ್ಕಂ ಬಿಂದುಗಂ ಲಕ್ಷಣವಿಧಿಯಿಂ ಲೋಪವೃತ್ತಿ ಉದಯಿಸುಗುಂ.

ಟೀಕು.

ದಾಡಿಮಕೂಷ್ಮಾಂಡದ=ದಾಡಿಮವೆಂಬ ಕೂಷ್ಮಾಂಡವೆಂಬ ಶಬ್ದಂಗಳ; ಮತ್ವಸ್ಥಾನದಲ್ಲಿ=ಮಕಾರದ ತಾವಿನಲ್ಲಿ; ಬತ್ವಂ=ಬಕಾರಂ; ವಿದಿತಂ=ಪ್ರಸಿದ್ಧವಾಗುವದು; ಕೂಷ್ಮಾಂಡದ=ಕೂಷ್ಮಾಂಡಶಬ್ದದ; ಷತ್ವಕ್ಕಂ=ಷಕಾರಕ್ಕೆಯುಂ; ಬಿಂದುಗಂ=ಬಿಂದುವಿಂಗೆಯುಂ; ಲಕ್ಷಣವಿಧಿಯಿಂ=ಲಕ್ಷಣವಿಧಿಯಿಂದೆ; ಲೋಪವೃತ್ತಿ=ಲೋಪದ ವರ್ತನೆ; ಉದಯಿಸುಗುಂ=ಹುಟ್ಟುವದು.

ವೃತ್ತಿ.

ದಾಡಿಮಕೂಷ್ಮಾಂಡಂಗಳ ಮತ್ವಕ್ಕೆ ಬತ್ವಂ; ಕೂಷ್ಮಾಂಡದ ಷಕಾರಕ್ಕಂ ಬಿಂದುಗಂ ಲೋಪಮಕ್ಕುಂ.

ಪ್ರಯೋಗಂ.

ದಾಡಿಮಂ=ದಾಳಿಂಬಂ; ಕೂಷ್ಮಾಂಡಂ=ಕುಂಬಳಂ.

ಸೂತ್ರಂ.

First and second syllables receive the Bindu; a Bindu is sometimes dropped.

ಸಮನಿಸುಗುಮಾದಿವರ್ಣಾಂ
ತಿಮದೊಳಮೆರಡನೆಯ ವರ್ಣದಂತಿಮದೊಳಮಾ |
ಸಮುಚಿತಬಿಂದುಸ್ಥಿತಿ ಬಿಂ
ದುಮಂತಶಬ್ದಕ್ಕೆ ಬಿಂದುಲೋಪಂ ಬಹುಳಂ || 285 ||

ಪದಚ್ಛೇದಂ.

ಸಮನಿಸುಗುಂ ಆದಿವರ್ಣಾಂತಿಮದೊಳಂ ಎರಡನೆಯ ವರ್ಣದ ಅಂತಿಮದೊಳಂ ಆ ಸಮುಚಿತಬಿಂದುಸ್ಥಿತಿ; ಬಿಂದುಮಂತಶಬ್ದಕ್ಕೆ ಬಿಂದುಲೋಪಂ ಬಹುಳಂ.

ಯಥಾನ್ವಯಂ.

ಟೀಕು.

ಆದಿವರ್ಣಾಂತಿಮದೊಳಂ=ಆದ್ಯಕ್ಷರದ ಅಂತ್ಯದಲ್ಲಿಯುಂ; ಎರಡನೆಯ ವರ್ಣದ=ಎರಡನೆಯಕ್ಷರದ; ಅಂತಿಮದೊಳಂ=ಕಡೆಯಲ್ಲಿಯುಂ; ಆ ಸಮುಚಿತಬಿಂದುಸ್ಥಿತಿ=ಆಯುಚಿತವಾದ ಬಿಂದುವಿನ ಸ್ಥಿತಿ; ಸಮನಿಸುಗುಂ=ಪ್ರಾಪ್ತಿಸುವದು; ಬಿಂದುಮಂತಶಬ್ದಕ್ಕೆ=ಬಿಂದುವುಳ್ಳ ಶಬ್ದಕ್ಕೆ; ಬಹುಳಂ=ಬಹುಳವಾಗಿ; ಬಿಂದುಲೋಪಂ=ಬಿಂದುವಿನ ಲೋಪಂ ಪ್ರಾಪ್ತಿಸುವದು.

### ವೃತ್ತಿ.

ಮೊದಲಕ್ಕರದ ಕಡೆಯೊಳಮೆರಡನೆಯಕ್ಕರದ ಕಡೆಯೊಳಮುಚಿತಮಾಗಿ ಬಿಂದುವಕ್ಕುಂ; ಬಿಂದುಯುಕ್ತಶಬ್ದಂಗಳ್ಗೆ ಬಹುಳದಿಂ ಲೋಪಮಕ್ಕುಂ.

### ಪ್ರಯೋಗಂ.

ಆದ್ಯಕ್ಷರದ ಬಿಂದುವಿಂಗೆ—ಮೇಧಿ (ಮೇದಿ)=ಮೆಂಟಿ; ತಾತಂ=ತಂದೆ; ಕೂಷ್ಮಾಂಡಂ=ಕುಂಬಳಂ; ಮರ್ಕಟಂ=ಮುಂಕಡಂ, ಮಕ್ಕಡಮೆಂದುಂಮುಂಟು.

ದ್ವಿತೀಯಾಕ್ಷರದ ಬಿಂದುವಿಂಗೆ—ಕ್ರಮುಕಂ=ಕವುಂಗು; ದಾಡಿಮಂ=ದಾಳಿಂಬಂ.

ಬಿಂದುಲೋಪಕ್ಕೆ—ವಾಂಶ್ಯಂ=ವಾಸಂ; ಮುಂಜಂ=ಮೊದೆ (s. S. 282); ಸಂಸ್ಕೃತಂ=ಸಕ್ಕದಂ; ಲಾಂಛನಂ=ಲಚ್ಚಣಂ.

ಬಹುಳಮಾಗಿ ಲೋಪಮಿಲ್ಲ—ಮಂಥನಿ=ಮಂತಣಿ (s. S. 278); ಸಂಘಾತಂ=ಸಂಗಡಂ; ಅಂಕುಶಂ=ಅಂಕುಸಂ.

### ಸೂತ್ರಂ.

ಪದದೆರಡನೆಯಕ್ಕರದ
ತ್ವದೊಳೆತ್ವಂ ಹ್ರಸ್ವದೆತ್ವಮಾತ್ವಕ್ಕೂತ್ವ |
ಕ್ಕುದಯಿಕುಮತ್ವಸ್ಥಿತಿ ಬಹು
ಳದೆ ದೀರ್ಘಂ ಹ್ರಸ್ವಮಾ ತೃತೀಯಾಕ್ಷರಕಂ || 286 ||

In the Second syllable ಅ (in contraction, S. 275) becomes ಎ; also ಆ becomes ಎ; ಊ becomes ಅ; and a long vowel is shortened. The last occurs also in the Third syllable.

### ಪದಚ್ಛೇದಂ.

ಪದದ ಎರಡನೆಯ ಅಕ್ಕರದ ಅತ್ವದೊಳ್ ಎತ್ವಂ; ಹ್ರಸ್ವದ ಎತ್ವಂ ಆತ್ವಕ್ಕೆ; ಊತ್ವಕ್ಕೆ ಉದಯಿಕುಂ ಅತ್ವಸ್ಥಿತಿ; ಬಹುಳದೆ ದೀರ್ಘಂ ಹ್ರಸ್ವಂ, ಆ ತೃತೀಯಾಕ್ಷರಕಂ.

### ಅನ್ವಯಂ.

ಪದದ ಎರಡನೆಯಕ್ಕರದ ಅತ್ವದೊಳ್ ಎತ್ವಂ; ಆತ್ವಕ್ಕೆ ಹ್ರಸ್ವದೆತ್ವಂ; ಊತ್ವಕ್ಕೆ ಅತ್ವಸ್ಥಿತಿ ಉದಯಿಕುಂ; ಬಹುಳದೆ, ಆ ತೃತೀಯಾಕ್ಷರಕಂ, ದೀರ್ಘಂ ಹ್ರಸ್ವಂ.

### ಟೀಕು.

ಪದದ=ಪದಂಗಳ; ಎರಡನೆಯಕ್ಕರದ=ಎರಡನೆಯಕ್ಷರದ; ಅತ್ವದೊಳ್=ಅಕಾರದಲ್ಲಿ; ಎತ್ವಂ=ಎಕಾರಂ ಆಗುವದು; ಆತ್ವಕ್ಕೆ=ಆಕಾರಕ್ಕೆ; ಹ್ರಸ್ವದೆತ್ವಂ=ಹ್ರಸ್ವದ ಎಕಾರಂ ಬರ್ಪುದು; ಊತ್ವಕ್ಕೆ=ಊಕಾರಕ್ಕೆ; ಅತ್ವಸ್ಥಿತಿ=ಅಕಾರದ ಸ್ಥಿತಿ; ಉದಯಿಕುಂ=ಹುಟ್ಟುವದು; ಬಹುಳದೆ=ಬಹುಳ

ದಿಂದೆ; ಆ ತೃತೀಯಾಕ್ಷರಕಂ=ಆ ಮೂಱನೆಯಕ್ಷರಕ್ಕಂ; ದೀರ್ಘಂ=ದೀರ್ಘಂ; ಹ್ರಸ್ವಂ=ಹ್ರಸ್ವವಾಗುವದು. ಬಹುಳಸಮುಚ್ಚಯಂಗಳಿಂ ದ್ವಿತೀಯಾಕ್ಷರಕ್ಕಂ ಹ್ರಸ್ವಂ ಬರ್ಪುದು.

ವೃತ್ತಿ.

ಪದದೆರಡನೆಯಕ್ಕರದತ್ವಕ್ಕೆತ್ವಮುಮಾಕಾರಕ್ಕೆ ಹ್ರಸ್ವೈತ್ವಮುಮೂಕಾರಕ್ಕತ್ವಮುಮಕ್ಕುಂ; ಆ ದ್ವಿತೀಯಾಕ್ಷರದೀರ್ಘಕ್ಕೆ ಹ್ರಸ್ವಮಕ್ಕುಂ; ಆ ತೃತೀಯಾಕ್ಷರಕ್ಕಮಂತೆ.

ಪ್ರಯೋಗಂ.

ಅತ್ವಕ್ಕೆತ್ವಂ—ಉಜ್ಜಯನಿ=ಉಜ್ಜೆಣಿ.

ಆತ್ವಕ್ಕೆತ್ವಂ—ರಸಾಯನಂ=ರಸೆಯನಂ (cf. S. 274).

ಊಕಾರಕ್ಕತ್ವಂ—ನಿರೂಪಿಸಿದಂ=ನಿರವಿಸಿದಂ.

ದ್ವಿತೀಯಾಕ್ಷರದೀರ್ಘಕ್ಕೆ ಹ್ರಸ್ವಂ—ಹಿಂಗೂಲಕಂ=ಇಂಗುಲಿಕಂ; ಪ್ರಸಾದನಂ=ಪಸದನಂ; ದ್ವಿತೀಯೆ=ಬಿದಿಗೆ; ತೃತೀಯೆ=ತದಿಗೆ; ಅಮಾವಾಸ್ಯೆ=ಅವಸೆ; ಉದ್ಯಾಪನೆ (ಉದ್ವಾಸನಂ, ಉದ್ಯಾಪನಂ)=ಉಜ್ಜವಣಿ; ವಿನಾಯಕಂ=ಬೆನಕಂ.

ತೃತೀಯಾಕ್ಷರದೀರ್ಘಕ್ಕೆ ಹ್ರಸ್ವಂ—ಉತ್ತರೀಯಕಂ=ಉತ್ತರಿಗೆ; ವರ್ಧಮಾನಂ=ಬದ್ದವಣಂ, ಬದ್ದವಣಮೆಂದು ಓದಲಂ.

ಸೂತ್ರಂ.

In the Third syllable ಅ becomes ಇ, ಒ, or ಉ; and ಉ becomes ಅ.

ವ್ಯವಹರಿಸುಗುಮತ್ವಕ್ಕಿ
ತ್ವವಿಧಾನಂ ಹ್ರಸ್ವದೊತ್ವಮುತ್ವಂ ಶಬ್ದ |
ಪ್ರವಿದಿತಮಾದುತ್ವಕ್ಕ
ತ್ವವೃತ್ತಿ ಮೂಱನೆಯ ವರ್ಣದೊಳ್ನೆಲೆಗೊಳ್ಗುಂ || 287 ||

ಪದಚ್ಛೇದಂ.

ವ್ಯವಹರಿಸುಗುಂ ಅತ್ವಕ್ಕೆ ಇತ್ವವಿಧಾನಂ, ಹ್ರಸ್ವದ ಒತ್ವಂ, ಉತ್ವಂ; ಶಬ್ದಪ್ರವಿದಿತಂ ಆದ ಉತ್ವಕ್ಕೆ ಅತ್ವವೃತ್ತಿ—ಮೂಱನೆಯ ವರ್ಣದೊಳ್—ನೆಲೆಗೊಳ್ಗುಂ.

ಯಥಾನ್ವಯಂ.

ಟೀಕು.

ಮೂಱನೆಯ ವರ್ಣದೊಳ್=ಮೂಱನೆಯಕ್ಷರದಲ್ಲಿ; ಅತ್ವಕ್ಕೆ=ಅಕಾರಕ್ಕೆ; ಇತ್ವವಿಧಾನಂ=ಇಕಾರದ ವಿಧಾನಂ; ಹ್ರಸ್ವದೊತ್ವಂ=ಹ್ರಸ್ವದ ಒಕಾರಂ; ಉತ್ವಂ=ಉಕಾರಂ; ವ್ಯವಹರಿಸುಗುಂ=

ವ್ಯವಹರಿಸುವದು; ಶಬ್ದಪ್ರವಿದಿತಂ=ಶಬ್ದಂಗಳಲ್ಲಿ ಪ್ರಸಿದ್ಧಂ; ಆದುತ್ವಕ್ಕೆ=ಆದ ಉಕಾರಕ್ಕೆ; ಅತ್ವ ವೃತ್ತಿ=ಅಕಾರದ ವರ್ತನೆ; ನೆಲೆಗೊಳ್ಗುಂ=ನೆಲೆಗೊಂಬುದು.

ವೃತ್ತಿ.

ಶಬ್ದಂಗಳ ತೃತೀಯಾಕ್ಷರದತ್ತಕ್ಕಿತ್ತಮುಂ ಹ್ರಸ್ವೋತ್ತಮುಂ ಉತ್ತಮುಮಕ್ಕುಂ; ಉತ್ತಕ್ಕತ್ತಮಕ್ಕುಂ.

ಪ್ರಯೋಗಂ.

ಅತ್ತದ ಇತ್ತಕ್ಕೆ—ಹಿಂಗೂಲಕಂ=ಇಂಗುಲಿಕಂ.
ಒತ್ತಕ್ಕೆ—ಸುರಪರ್ಣಿ=ಸುರಹೊನ್ನೆ.
ಉತ್ತಕ್ಕೆ—ಆಲಸ್ಯಕಂ=ಅಲಸುಗೆ.
ಉತ್ತದತ್ತಕ್ಕೆ—ಕುಸ್ತುಂಬುರು=ಕೊತ್ತುಂಬರಿ.

ಸೂತ್ರಂ.

In the Fourth syllable ಅ becomes ಒ. A syllable of the Second, Third and Fourth place suffers Elision.

ದೊರೆಕೊಳ್ಗುಂ ನಾಲ್ಕನೆಯ
ಕ್ಕರದತ್ತಕ್ಕೊತ್ತವೃತ್ತಿ ಶಬ್ದಂಗಳೊಳಿ |
ರ್ದೆರಡನೆಯ ಮೂಱನೆಯ ಸಂ
ಚರಿಸುವ ನಾಲ್ಕನೆಯ ವರ್ಣಮಕ್ಕುಮಭಾವಂ || 288 ||

ಪದಚ್ಛೇದಂ.

ದೊರೆಕೊಳ್ಗುಂ ನಾಲ್ಕನೆಯ ಅಕ್ಕರದ ಅತ್ವಕ್ಕೆ ಒತ್ವವೃತ್ತಿ; ಶಬ್ದಂಗಳೊಳ್ ಇರ್ದ ಎರಡನೆಯ ಮೂಱನೆಯ ಸಂಚರಿಸುವ ನಾಲ್ಕನೆಯ ವರ್ಣಂ ಅಕ್ಕುಂ ಅಭಾವಂ.

ಯಥಾನ್ವಯಂ.

ಟೀಕು.

ನಾಲ್ಕನೆಯಕ್ಕರದ=ನಾಲ್ಕನೆಯಕ್ಷರದ; ಅತ್ವಕ್ಕೆ=ಅಕಾರಕ್ಕೆ; ಒತ್ವವೃತ್ತಿ=ಒಕಾರದ ವರ್ತನೆ; ದೊರೆಕೊಳ್ಗುಂ=ದೊರೆಕೊಂಬುದು; ಶಬ್ದಂಗಳೊಳ್=ಶಬ್ದಂಗಳಲ್ಲಿ; ಇರ್ದ ಎರಡನೆಯ ಮೂಱನೆಯ ಸಂಚರಿಸುವ ನಾಲ್ಕನೆಯ ವರ್ಣಂ=ಇರ್ದ ಎರಡನೆಯದಾದ ಮೂಱನೆಯದಾದ ನಾಲ್ಕನೆಯದಾದ ಅಕ್ಷರಂ; ಅಭಾವಂ=ಲೋಪಂ; ಅಕ್ಕುಂ=ಆಗುವದು.

ವೃತ್ತಿ.

ನಾಲ್ಕನೆಯಕ್ಕರದತ್ತಕ್ಕೊತ್ತಮಕ್ಕುಂ; ಶಬ್ದಂಗಳೊಳಿರ್ದೆರಡನೆಯ ಮೂಱನೆಯ ನಾಲ್ಕನೆಯಕ್ಕರಕ್ಕೆ ಲೋಪಂ.

ಪ್ರಯೋಗಂ.

ಅಕಾರದೊತ್ತಕ್ಕೆ—ಆಟರೂಪಕಂ=ಆಡಸೊಗೆ.

ದ್ವಿತೀಯಾಕ್ಷರಕ್ಕೆ ಲೋಪಂ—ವ್ಯವಹಾರಂ=ಬೇಹಾರಂ.

ತೃತೀಯಾಕ್ಷರಕ್ಕೆ ಲೋಪಂ—ಪಲ್ಯಯನಂ=ಹಲ್ಲಣಂ; ಅಮಾವಾಸ್ಯೆ=ಅವಸಿ (ಅವಸೆ, s. S. 286); ವಿನಾಯಕಂ=ಬೆನಕಂ; ಮರುವಕಂ=ಮರುಗಂ (ಮರಗಂ); ಉಜ್ಜಯನಿ=ಉಜ್ಜೆಣಿ; ಆಟರೂಪಕಂ=ಆಡಸೊಗೆ.

ಚತುರ್ಥಾಕ್ಷರಕ್ಕೆ ಲೋಪಂ—ಉತ್ತರೀಯಕಂ=ಉತ್ತರಿಗೆ.

**6. Compounds of Tadbhavas with Tadbhavas, (of Tadbhavas with pure Canarese words, cf. S. 299) and of Tadbhavas with unaltered Sanskṛt themes (ತತ್ಸಮಂ cf. S. 80).**

ಸಂಸ್ಕೃತಪದಕ್ಕಾದಪಭ್ರಂಶದಚ್ಚಗಂನಡದ ಸಮಾಸಮಂ ಪೇೞ್ದಪಂ—

ಸೂತ್ರಂ.

ಪದನೆರಡುಂ ತದ್ಭವದೊಳ್
ಪುದಿದಿರೆ ಮಾೞ್ಪುದು ಸಮಾಸಮಂ ಪದಯುಗದೊಳ್ |
ಪದಮೊಂದೇಗೆಯ್ದುಂ ವಿಧಿ
ಗೊದವದೆ ನಿಲೆಯುಂ ಸಮಾಸಮುಂಟರೆಯೆಡೆಯೊಳ್ ||289||

In forming compounds (ಸಮಾಸಂ) both words may be Tadbhavas. In some cases it is also allowed to form compounds wherein either the first or second word is an unaltered Sanskṛt theme (cf. Ss. 80; 174; 297; 298; 299).

ಪದಚ್ಛೇದಂ.

ಪದಂ ಎರಡುಂ ತದ್ಭವದೊಳ್ ಪುದಿದು ಇರೆ, ಮಾೞ್ಪುದು ಸಮಾಸಮಂ; ಪದಯುಗದೊಳ್ ಪದಂ ಒಂದು, ಏ ಗೆಯ್ದುಂ, ವಿಧಿಗೆ ಒದವದೆ ನಿಲೆಯುಂ ಸಮಾಸಂ ಉಂಟು ಅರೆ ಎಡೆಯೊಳ್.

ಅನ್ವಯಂ.

ಪದಂ ಎರಡುಂ ತದ್ಭವದೊಳ್ ಪುದಿದು ಇರೆ, ಸಮಾಸಮಂ ಮಾೞ್ಪುದು; ಪದಯುಗದೊಳ್ ಒಂದು ಪದಂ, ಏ ಗೆಯ್ದುಂ, ವಿಧಿಗೆ ಒದವದೆ ನಿಲೆಯುಂ ಅರೆಯೆಡೆಯೊಳ್ ಸಮಾಸಂ ಉಂಟು.

ಟೀಕು.

ಪದನೆರಡುಂ=ಎರಡು ಪದಂಗಳುಂ; ತದ್ಭವದೊಳ್=ತದ್ಭವದಲ್ಲಿ; ಪುದಿದಿರೆ=ಪೊರ್ದುಗೆಯಾಗಿರೆ; ಸಮಾಸಮಂ=ಸಮಾಸವಂ; ಮಾೞ್ಪುದು=ಮಾಡುವದು; ಪದಯುಗದೊಳ್=ಪದವೆರಡ

ಬಿಲ್ಲಿ; ಪದಮೊಂದು=ಒಂದು ಪದಂ; ಏ ಗೆಯ್ದುಂ=ಏನ ಮಾಡಿಯುಂ; ವಿಧಿಗೆ=ತದ್ಭವದ ವಿಧಿಗೆ; ಒದವದೆ=ಪ್ರಾಪ್ತಿಸದೆ; ನಿಲೆಯುಂ=ನಿಂದೊಡೆಯುಂ; ಅರೆಯೆಡೆಯೊಳ್=ಕಿಱಿದೆಡೆಯಲ್ಲಿ; ಸಮಾಸಂ=ಸಮಾಸಂ; ಉಂಟು=ಪೂರ್ವಕವಿಗಳ ಪ್ರಯೋಗದಲ್ಲಿ ಉಂಟು.

## ವೃತ್ತಿ.

ಎರಡು ಪದಂಗಳಪಭ್ರಂಶದೊಳ್ ನಿಲೆ, ಸಮಾಸಮಂ ಮಾಱ್ಪುದು; ಎರಡು ಪದಂಗಳೊಳೊಂದು ಪದನಪಭ್ರಂಶಲಕ್ಷಣಕ್ಕೆ ಬಾರದೆ ನಿಜದಿನಿರೆಯುಂ ನಿರ್ದೋಷಮಾಗಿ ಕಿಱಿದೆಡೆಯೊಳ್ ಸಮಾಸಮುಂಟು.

## ಪ್ರಯೋಗಂ.

1) ಎರಡು ಪದಂಗಳಪಭ್ರಂಶಕ್ಕೆ—ಸರ್ವಲಕ್ಷಣಂ=ಸಬ್ಬಲಕ್ಕಣಂ; ಸರ್ವಸಂನಾಹಂ=ಸಬ್ಬಸಂನಣಂ; ಸಮೋಘಸಂನಾಹಂ=ಸವಗಸಂನಣಂ; ಕರ್ಕಶಯೌವನಂ=ಕಕ್ಕಸಜವ್ವನಂ; ಅಂಕುಶಚಾರಣಂ=ಅಂಕಸಸಾರಣಿ; ದಶಶಿರಂ=ದಸಸಿರಂ; ವರ್ಣಶರಂ=ಬಣ್ಣಸರಂ; ದೃಷ್ಟಿವಿಷಂ=ದಿಟ್ಟಿಬಿಸಂ (-ವಿಸಂ); ಶಿಲ್ಪಿಕವಿದ್ಯೆ=ಚಿಪ್ಪಿಗಬಿಜ್ಜೆ; ರಕ್ಷಾಶೃಂಖಲಂ=ರಕ್ಕಸಂಕಲೆ; ಯಮಪುರಂ=ಜವಹುರಂ; ಷಷ್ಟಿಗ್ರಹಣಂ=ಚಟ್ಟಿಗರಣಂ; ಸ್ಥಾನದೀಪಿಕೆ=ತಾಣದೀವಿಗೆ; ಸ್ಥಾನಭ್ರಷ್ಟಂ=ತಾಣಬಟ್ಟಂ; ಕ್ರೂರಕರ್ಮಿ=ಕೂಱ್ಕಮ್ಮಿ; ಶ್ರೀಖಂಡಂ=ಸಿರಿಕಂಡಂ; ವೀರಶ್ರೀ=ಬಿರಸಿರಿ; ಅವನಜೇಮನಂ=ಅವಣಜವಣಂ; ಅಚ್ಛಸ್ಫಟಿಕಂ=ಅಚ್ಚವಳಿಕು; ಸಂಭಾರಕಬಳಂ=ಸಂಬರಗವಳಂ; ಖರಶಾಣಂ=ಕರಸಾಣಿ; ಪ್ರತಿಚ್ಛಂದಂ=ಪಡಿಚಂದಂ; ಆಂದೋಳಛತ್ರಿಕೆ=ಅಂದಳಸತ್ತಿಗೆ.

2) ಮೊದಲ ಪದನಪಭ್ರಂಶಕ್ಕೆ ಬಾರದೆ, ಪರಪದಂ ತದ್ಭವಮಾದ ಸಮಾಸಕ್ಕೆ—ಮಂಗಳಪ್ರಸಾದನಂ=ಮಂಗಳವಸದನಂ; ವಿಜಯಶ್ರೇಷಿ=ವಿಜಯಸೇಸಿ; ಪರಮಶ್ರೀ=ಪರಮಸಿರಿ; ಜಗವರ್ತಿ=ಜಗವತ್ತಿ; ಪಂಚಶರಂ=ಪಂಚಸರಂ; ಪಾದರಕ್ಷೆ=ಪಾದರಕ್ಕೆ; ಪರಬ್ರಹ್ಮಂ=ಪರಬೊಮ್ಮಂ; ಕರಣಶಾಲೆ=ಕರಣಸಾಲೆ; ಪಟ್ಟಶಾಲೆ=ಪಟ್ಟಸಾಲೆ; ದಾನಶಾಲೆ=ದಾನಸಾಲೆ; ಉತ್ತರದೇಶಂ=ಉತ್ತರದೇಸಂ; ಬಾಹುವಳಯಂ=ಬಾಹುಬಳೆ; ಪಾದಶೃಂಖಲೆ=ಪಾದಸಂಕಲೆ.

3) ಪೂರ್ವಪದಂ ತದ್ಭವಮಾದುದರ್ಕೆ—ತ್ರಿಪುರಾಂತಕಂ=ತಿಪುರಾಂತಕಂ; ತ್ರಿಗುಣಂ=ತಿಗುಣಂ; ತ್ರಿವಳಿ=ತಿವಳಿ; ದ್ವಿಗುಣಂ=ದುಗುಣಂ; ಚತುರ್ದಂತಂ=ಚೌದಂತಂ; ಸ್ವರಕರಣಂ=ಸರಕರಣಂ; ಸ್ವರವಾದಿ=ಸರವಾದಿ; ಪದಗತಿ=ಪಯಗತಿ; ಯಮದಂಡಂ=ಜವದಂಡಂ; ಸಂಧಿವಾತಂ=ಸಂದುವಾತಂ; ಶನಿವಾರಂ=ಸಣಿವಾರಂ; ಗ್ರಾಮರಸಂ=ಗಾವರಸಂ; ಪಶುಪತಿ=ಪಸುಪತಿ; ದಿಶಾಬಲಿ=ದೆಸೆಬಲಿ; ಶೂಲಪಾಣಿ=ಸೂಳಪಾಣಿ.

4) ಎರಡು ಪದಮುಂ ತದ್ಭವನೆಯ್ದುವಲ್ಲಿಯೊಂದು ಪದಮನುೞಿಸಿ ತಪ್ಪಾದುದರ್ಕೆ ಹಂಸರಾಜನ ಪ್ರಯೋಗಂ— || ತರವೇೞ್ಮಾಣಿಕ್ಯಭಂಡಾರದ ಪುಟಿಕೆಗಳಂ || ಇಲ್ಲಿ ಮಾಣಿಕ್ಯಶಬ್ದಮನುೞಿದು ಮಾಣಿಕಭಂಡಾರಮೆನೆ ಶುದ್ಧಂ.[1]

ಸೂತ್ರಂ.

In the beginning of compounds ಏಕ, ದ್ವಿ, ತ್ರಿ, ಚತುಃ become ಎಕ್ಕ, ದು (ದೂ), ತಿ, ಚೌ; and ದ್ವಿಕ, ತ್ರಿಕ, ಜತುಷ್ಕ become ದುಗ, ತಿಗ, ಚೌಕ.

ಏಕದ್ವಿತ್ರಿಚತುಃಶ
ಬ್ದಾಕೃತಿಗೆಕ್ಕ ದು ತಿ ಚೌಗಳಾದೇಶಂಗಳ್ |
ಸ್ವೀಕೃತಸಮಾಸಪೂರ್ವದೊ
ಳಾಕರಿಪರ್ ಪ್ರತ್ಯಯಾಂತದೊಳಮೀ ವಿಧಿಯಂ || 290 ||

ಪದಚ್ಛೇದಂ.

ಏಕ-ದ್ವಿ-ತ್ರಿ-ಚತುಃಶಬ್ದಾಕೃತಿಗೆ ಎಕ್ಕ ದು ತಿ ಚೌಗಳ್ ಆದೇಶಂಗಳ್ ಸ್ವೀಕೃತಸಮಾಸಪೂರ್ವದೊಳ್; ಆಕರಿಪರ್ ಪ್ರತ್ಯಯಾಂತದೊಳಂ ಈ ವಿಧಿಯಂ.

ಅನ್ವಯಂ.

ಸ್ವೀಕೃತಸಮಾಸಪೂರ್ವದೊಳ್ ಏಕದ್ವಿತ್ರಿಚತುಃಶಬ್ದಾಕೃತಿಗೆ ಎಕ್ಕ ದು ತಿ ಚೌಗಳ್ ಆದೇಶಂಗಳ್; ಪ್ರತ್ಯಯಾಂತದೊಳಂ ಈ ವಿಧಿಯಂ ಆಕರಿಪರ್.

ಟೀಕು.

ಸ್ವೀಕೃತಸಮಾಸಪೂರ್ವದೊಳ್=ಅಂಗೀಕರಿಸಲ್ಪಟ್ಟ ಸಮಾಸಪದಂಗಳ ಮೊದಲಲ್ಲಿ; ಏಕದ್ವಿತ್ರಿಚತುಃಶಬ್ದಾಕೃತಿಗೆ=ಏಕ ಎಂಬ ದ್ವಿ ಎಂಬ ತ್ರಿ ಎಂಬ ಚತುಃ ಎಂಬ ಶಬ್ದಂಗಳ ಆಕಾರಕ್ಕೆ; ಎಕ್ಕ ದು ತಿ ಚೌಗಳ್=ಎಕ್ಕ ಎಂಬ ದು ಎಂಬ ತಿ ಎಂಬ ಚೌ ಎಂಬ ಶಬ್ದಂಗಳ್; ಆದೇಶಂಗಳ್=ಆದೇಶಂಗಳಪ್ಪುವು; ಪ್ರತ್ಯಯಾಂತದೊಳಂ=ದ್ವಿಕಂ ತ್ರಿಕಂ ಚತುಷ್ಕಂ ಎಂಬ ಪ್ರತ್ಯಯಾಂತಶಬ್ದಂಗಳಲ್ಲಿಯುಂ; ಈ ವಿಧಿಯಂ=ಈ ಪೇೞ್ದ ವಿಧಿಯಂ; ಆಕರಿಪರ್=ಪೇೞ್ವರ್.

ವೃತ್ತಿ.

ಸಮಾಸದಾದಿಯೊಳಿರ್ದ ಏಕದ್ವಿತ್ರಿಚತುಃಶಬ್ದಂಗಳ್ಗೆ ಎಕ್ಕ ದು ತಿ ಚೌ ಎಂಬಿವಾದೇಶಮಪ್ಪುವು; ದ್ವಿತ್ರಿಚತುಃಶಬ್ದಂಗಳ್ ಪ್ರತ್ಯಯಾಂತಮಾದೊಡಮ್ ಈ ಲಕ್ಷಣಮೆ.

ಪ್ರಯೋಗಂ.

ಎಕ್ಕಕ್ಕೆ—ಏಕಶರಂ=ಎಕ್ಕಸರಂ; ಏಕಪತ್ರಂ=ಎಕ್ಕವತ್ತಿ; ಏಕಸ್ಥಲಂ=ಎಕ್ಕತಳಂ.

1) ಭಂಡಾರಂ or ಬಂಡಾರಂ is a corruption of ಭಾಂಡಾಗಾರಂ; s. S. 295.

ದುಗೆ—ದ್ವಿಶರಂ=ದುಸರಂ; ದ್ವಿಗುಣಂ=ದುಗುಣಂ; ದ್ವಿಪಟ್ಟಿಕೆ=ದುವಟ್ಟಿಗೆ; ದ್ವಿಹಸ್ತಂ=ದುಹತ್ತಂ; ದೂವಟ್ಟಿಗೆ, ದೂಹತ್ತವೆಂದುಮುಂಟು.

ತಿಗೆ—ತ್ರಿಗುಣಂ=ತಿಗುಣಂ; ತ್ರಿಶರಂ=ತಿಸರಂ; ತ್ರಿಶೂಲಂ=ತಿಸುಳಂ; ತ್ರಿಪದಿ=ತಿವದಿ; ತ್ರಿವಳಿ=ತಿವಳಿ.

ಚೌಗೆ—ಚತುಃಪದಂ [M. A. and others ಚತುಃಪಥಂ]=ಚೌಪದಂ; ಚತುಃಪಟ್ಟಂ=ಚೌವಟ್ಟಂ, ವಿಕಲ್ಪದಿಂ ಚೌವಟವೆಂದುಮುಂಟು; ಚತುರ್ಗ್ರಾಮಂ=ಚೌಗಾವೆ; ಚತುಃಖಂಡಂ=ಚೌಕಂಡಂ; ಚತುರ್ವೇದಿ=ಚೌವೇದಿ; ಚತುರ್ದಂತಂ=ಚೌಜಂತಂ.

ಪ್ರತ್ಯಯಾಂತಕ್ಕೆ—ದ್ವಿಕಂ=ದುಗಂ; ತ್ರಿಕಂ=ತಿಗಂ; ಚತುಷ್ಕಂ=ಚೌಕಂ.

ಸೂತ್ರಂ.

When, in compounds, ಸಹ and ಮಹತ್ precede a consonant, they may become ಸಾ and ಮಾ. (cf. S. 175).

ಸಮಸಂದ ಸಹಮಹಚ್ಛ
ಬ್ದಮೆ ಸಾಮಾದೇಶದಿಂ ಸಮಾಸಾದಿಯೊಳಂ |
ತಮರ್ದಿರ್ಕುಂ[1] ಪರಪದಪೂ
ರ್ವಮದುಂ ವ್ಯಂಜನದೊಳೊಂದೆ ಬಹುಳತೆಯಿಂದಂ || 291 ||

ಪದಚ್ಛೇದಂ.

ಸಮಸಂದ ಸಹಮಹಚ್ಛಬ್ದಮೆ ಸಾಮಾದೇಶದಿಂ ಸಮಾಸಾದಿಯೊಳ್ ಅಂತು ಅಮರ್ದು ಇರ್ಕುಂ, ಪರಪದಪೂರ್ವಂ ಅದುಂ ವ್ಯಂಜನದೊಳ್ ಒಂದೆ, ಬಹುಳತೆಯಿಂದಂ.

ಅನ್ವಯಂ.

ಪರಪದಪೂರ್ವಂ ಅದುಂ ವ್ಯಂಜನದೊಳ್ ಒಂದೆ, ಸಮಾಸಾದಿಯೊಳ್ ಸಮಸಂದ ಸಹಮಹಚ್ಛಬ್ದಮೆ ಸಾಮಾದೇಶದಿಂ ಅಂತು ಬಹುಳತೆಯಿಂದಂ ಅಮರ್ದು ಇರ್ಕುಂ.

ಟೀಕು.

ಪರಪದಪೂರ್ವಂ=ಮುಂದಣ ಪದದ ಮೊದಲ್; ಅದುಂ=ಅದುಂ; ವ್ಯಂಜನದೊಳ್=ವ್ಯಂಜನಾಕ್ಷರದಲ್ಲಿ; ಒಂದೆ=ಕೂಡೆ; ಸಮಾಸಾದಿಯೊಳ್=ಸಮಾಸದ ಮೊದಲಲ್ಲಿ; ಸಮಸಂದ ಸಹಮಹಚ್ಛಬ್ದಮೆ=ಸಮಾನವಾಗಿ ಸಂದ ಸಹ ಎಂಬ ಮಹತ್ ಎಂಬ ಶಬ್ದಂಗಳೆ; ಸಾಮಾದೇಶದಿಂ=ಸಾ ಎಂಬ ಮಾ ಎಂಬಾದೇಶದಿಂ; ಅಂತು=ಹಾಂಗೆ; ಬಹುಳತೆಯಿಂದಂ=ಬಹುಳತ್ವದಿಂದೆ; ಅಮರ್ದಿರ್ಕುಂ=ಪೊರ್ದುಗೆಯಾಗಿರ್ಪುದು.

ವೃತ್ತಿ.

ವ್ಯಂಜನಂ ಪರಮಾಗೆ, ಸಹಮಹಚ್ಛಬ್ದಂಗಳ್ಗೆ ಸಾ ಮಾ ಎಂಬಾದೇಶಂ ಬಹುಳದಿನಕ್ಕುಂ.

1) ಶಿಥಿಲತ್ವಂ.

## ಪ್ರಯೋಗಂ.

ಸಾಗೆ—ಸಹದೇವಂ=ಸಾದೇವಂ; ಸಹವಾಸಿ=ಸಾವಾಸಿ.

ಮಾಗೆ—ಮಹಾದೇವಂ=ಮಾದೇವಂ; ಮಹಾಕಾಳಿ=ಮಾಕಾಳಿ; ಮಹಾಜನಂ=ಮಾಜನಂ; ಮಹಾದಾನಿ=ಮಾದಾನಿ; ಮಹಾಸಾವಂತಂ=ಮಾಸಾವಂತಂ; ಮಹಾಪಾತಕಂ=ಮಾಪಾತಕಂ; ಮಹಾಪಥಂ=ಮಾಪತಂ; ಮಹಾಪುರುಷಂ=ಮಾಪುರುಷಂ; ಮಹಾಲಕ್ಷ್ಮಿ=ಮಾಲಕುಮಿ.

ಕೆಲವೆಡೆಯೊಳಿಲ್ಲ—ಸಹಜಾತಂ; ಸಹಧರ್ಮಿ; ಸಹಭೋಜಿ;—ಮಹಾಗಿರಿ; ಮಹಾಗಜಂ; ಮಹಾಸೈನ್ಯಂ.

## ಸೂತ್ರಂ.

ಪರದೊಳ್ ಪಬಮಂಗಳ್ ನೆಲ
ಸಿರೆ ವತ್ವಂ ಪೀನಮಾ ಪಕಾರಮದೂತ್ವಂ |
ಬೆರಸಿರೆ ತಾಂ ಹ್ರಸ್ವತೆಯುಂ
ತರೆಂಬ ಶಬ್ದಾಂತರೇಫೆಗಕ್ಕುಂ ಲೋಪಂ || 292 ||

When, in compounds, the first letter of the second word is ಪ, ಬ, or ಮ, these are often changed into ವ (cf. Ss. 67; 104; 258); in such a case an ಊ of ಪ is shortened, and the Repha (Visarga) of a preceding ಅಂತರ್ (ಅಂತಃ) elided.

## ಪದಚ್ಛೇದಂ.

ಪರದೊಳ್ ಪ ಬ ಮಂಗಳ್ ನೆಲಸಿ ಇರೆ, ವತ್ವಂ; ಪೀನಂ ಆ ಪಕಾರಂ ಅದು ಊತ್ವಂ ಬೆರಸಿ ಇರೆ, ತಾಂ ಹ್ರಸ್ವತೆ; ಅಂತರ್ ಎಂಬ ಶಬ್ದಾಂತರೇಫೆಗೆ ಅಕ್ಕುಂ ಲೋಪಂ.

## ಅನ್ವಯಂ.

ಪರದೊಳ್ ಪ ಬ ಮಂಗಳ್ ನೆಲಸಿರೆ, ವತ್ವಂ ಅಕ್ಕುಂ; ಪೀನಂ ಆ ಪಕಾರಂ ಅದು ಊತ್ವಂ ಬೆರಸಿರೆ, ಹ್ರಸ್ವತೆ ತಾಂ; ಅಂತರ್ ಎಂಬ ಶಬ್ದಾಂತರೇಫೆಗೆ ಲೋಪಂ.

## ಟೀಕು.

ಪರದೊಳ್=ಪರಪದದಾದಿಯಲ್ಲಿ; ಪ ಬ ಮಂಗಳ್=ಪಕಾರ ಬಕಾರ ಮಕಾರಂಗಳ್; ನೆಲಸಿರೆ=ನೆಲೆಗೊಂಡಿರೆ; ವತ್ವಂ=ವಕಾರಂ; ಅಕ್ಕುಂ=ಅಪ್ಪುದು; ಪೀನಂ=ವಿಶೇಷವಾಗಿ; ಆ ಪಕಾರಂ=ಆ ಪತ್ವಂ; ಅದು=ಅದು; ಊತ್ವಂ=ಊಕಾರಮಂ; ಬೆರಸಿರೆ=ಕೂಡಿರೆ; ಹ್ರಸ್ವತೆ=ಹ್ರಸ್ವತ್ವಂ; ತಾಂ=ತಾಂ ಆಗುವದು; ಅಂತರೆಂಬ ಶಬ್ದಾಂತರೇಫೆಗೆ=ಅಂತರ್ ಎಂಬ ಶಬ್ದದ ಕಡೆಯಣ ರೇಫೆಗೆ; ಲೋಪಂ=ಅದರ್ಶನಂ ಆಗುವದು.

## ವೃತ್ತಿ.

ಪರಪದದ ಮೊದಲೊಳ್ ಪಕಾರ ಬಕಾರ ಮಕಾರಂಗಳಿರೆ, ವತ್ವಮಕ್ಕುಂ; ಆ

ಪಕಾರದೂತ್ವಕ್ಕೆ ಹ್ರಸ್ವಮಪ್ಪುಕಾರಮಕ್ಕುಂ; ಅಂತರ್ಶಬ್ದದ ಕಡೆಯ ರೇಫೆಗೆ ಲೋಪಮಕ್ಕುಂ.

ಪ್ರಯೋಗಂ.

ಪಕಾರಕ್ಕೆ ವತ್ವಂ—ಹಂಸಪಿಂಡಂ=ಅಂಚೆವಿಂಡು; ಪಂಜರಪಕ್ಷಿ=ಹಂಜರವಕ್ಕಿ; ಪಾದಪಾಶಂ=ಪಾದವಾಸು; ಪಾದಪಟ್ಟಂ=ಪಾಯವಟ್ಟಂ; ರತ್ನಪಟ್ಟಿಗೆ=ರನ್ನವಟ್ಟಿಗೆ; ಯೋಗಪಾದುಕಂ=ಜೋಗವಾವುಗೆ; ಸಂಸ್ಥಾಪತ್ತನಂ=ಸಂತೆವಟ್ಟಣಂ; ಮಾನುಷಪುಸ್ತಕಂ=ಮಾನಸವೊತ್ತಗೆ; ಸಂಘಾತಪ್ರೇಕ್ಷಣಂ=ಸಂಗಡವೆಗ್ಗಣಂ (-ವೆಕ್ಕಣಂ); ರಾಕ್ಷಸಪ್ರಕರಣಂ=ರಕ್ಕಸವಗರಣಂ; ಚಂದ್ರಪುರಂ=ಚಂದವುರಂ.

ಬಕಾರಕ್ಕೆ ವಕಾರಂ—ಶೃಂಖಲಾಬಂಧಂ=ಸಂಕಲೆವಂದಂ; ದಿಶಾಬಲಿ=ದೆಸೆವಲಿ; ಶರಬಂಧಂ=ಸರವಂದಂ.

ಮಕಾರಕ್ಕೆ ವತ್ವಂ—ದೇವಮಾನುಷಂ=ದೇವವಾನಸಂ; ಯಮಳಮರ್ದಳಂ=ಜವಳಿವದ್ದಳೆ; ರತ್ನಮಣಿ=ರನ್ನವಣಿ.

ಆ ಪತ್ವದ ಊತ್ವಕ್ಕುತ್ವಂ—ವರ್ಣಪೂರಂ=ಬಣ್ಣವುರಂ; ಕರ್ಣಪೂರಂ=ಕನ್ನವುರಂ.

ರೇಫಲೋಪಕ್ಕೆ—ಅಂತಃಪುರಂ=ಅಂತವುರಂ.

ಪೀನಗ್ರಹಣದಿಂದೆ ಕೆಲವೆಡೆಯೊಳ್ವತ್ವಮಿಲ್ಲ—ಕಾಂಡಪಟಂ=ಕಂಡಪಡಂ (-ಪಟಂ); ಗೂರ್ಜರಪಟ್ಟಿ=ಗುಜ್ಜರಪಟ್ಟಿ; ಶಂಕರಪ್ರಸಾದಿತಂ=ಸಂಕರಪಸಾಯಿತಂ; ಪತಿಬ್ರತೆ=ಹದಿಬದೆ; ನಿರ್ಬಂಧಿಕಂ=ನಿಬ್ಬಂದಿಗಂ; ನಿರ್ಬುದ್ಧಿ=ನಿಬುದ್ಧಿ; ಅಚ್ಛಮಲ್ಲಿಗೆ=ಅಚ್ಚಮಲ್ಲಿಗೆ; ವಲ್ಲಿಮಾಟಂ=ಬಳ್ಳಿಮಾಡಂ; ಅಕ್ಷರಮಾಲೆ=ಅಕ್ಕರಮಾಲೆ.

ಸೂತ್ರಂ.

ಉದಯಿಪುದು ತೃತೀಯತೆ ಪೂ
ರ್ವದ ಸೂತ್ರವಿಧಾನದಿಂದೆ ಕತಪಕ್ಕೆ ತಗು |
ಳ್ವುದು ದೀರ್ಘಂ ಪೂರ್ವಪದಾಂ
ತ್ಯದೊಳುತ್ತರಪದದ ಮೊದಲೊಳೊದವಿರೆ ಲೋಪಂ || 293 ||

As according to S. 65 in combinations, thus also in Tadbhava compounds ಕ, ತ, ಪ become ಗ, ದ, ಬ; further, when the first syllable of the second word suffers elision, the last letter of the first word is lengthened.

ಪದಚ್ಛೇದಂ.

ಉದಯಿಪುದು ತೃತೀಯತೆ ಪೂರ್ವದ ಸೂತ್ರವಿಧಾನದಿಂದೆ ಕ-ತ-ಪಕ್ಕೆ; ತಗುಳ್ವುದು ದೀರ್ಘಂ ಪೂರ್ವಪದಾಂತ್ಯದೊಳ್ ಉತ್ತರಪದದ ಮೊದಲೊಳ್ ಒದವಿ ಇರೆ ಲೋಪಂ.

### ಅನ್ವಯಂ.

ಪೂರ್ವದ ಸೂತ್ರವಿಧಾನದಿಂದೆ ಕತಪಕ್ಕೆ ತೃತೀಯತೆ ಉದಯಿಪುದು; ಉತ್ತರಪದದ ಮೊದಲೊಳ್ ಲೋಪಂ ಒದವಿರೆ ಪೂರ್ವಪದಾಂತ್ಯದೊಳ್ ದೀರ್ಘಂ ತಗುಳ್ವುದು.

### ಟೀಕು.

ಪೂರ್ವದ=ಮೊದಲ ಸಂಧಿಪ್ರಕರಣದ; ಸೂತ್ರವಿಧಾನದಿಂದೆ=ಸೂತ್ರದ ವಿಧಿಯಿಂದೆ; ಕತಪಕ್ಕೆ=ಕಕಾರ ತಕಾರ ಪಕಾರಂಗಳ್ಗೆ; ತೃತೀಯತೆ=ಮೂಱನೆಯಕ್ಷರದ ಭಾವಂ; ಉದಯಿಪುದು=ಹುಟ್ಟುವದು; ಉತ್ತರಪದದ=ಮುಂದಣ ಪದದ; ಮೊದಲೊಳ್=ಆದಿಯಲ್ಲಿ; ಲೋಪಂ=ಅದರ್ಶನಂ; ಒದವಿರೆ=ಬಂದಿರೆ; ಪೂರ್ವಪದಾಂತ್ಯದೊಳ್=ಮೊದಲ ಪದದ ಕಡೆಯಲ್ಲಿ; ದೀರ್ಘಂ=ದೀರ್ಘಂ; ತಗುಳ್ವುದು=ಎಯ್ದುವುದು, ಬರ್ಪುದೆಂಬುದರ್ಥಂ.

### ವೃತ್ತಿ.

ಪೂರ್ವೋಕ್ತಸೂತ್ರದಿಂ ಪರದ ಕತಪಕ್ಕೆ ತೃತೀಯತೆಯಕ್ಕುಂ; ಪೂರ್ವಪದಾಂತ್ಯಕ್ಕೆ ದೀರ್ಘಮುಮುತ್ತರಪದದಾದಿಗೆ ಲೋಪಮುಮಕ್ಕುಂ.

### ಪ್ರಯೋಗಂ.

ಕಕಾರತೃತೀಯತೆಗೆ—ಮಾನುಷ್ಯಕಾವ್ಯಂ=ಮಾನಸಗಬ್ಬಂ; ಕರ್ಪೂರಕರಂಡಕಂ=ಕಪ್ಪುರಗರಡಗೆ; ಸಂಭಾರಕಬಳಂ=ಸಂಬರಗವಳಂ; ರತ್ನಕಂಬಳಂ=ರನ್ನಗಂಬಳಿ; ಕಾಶಾಕರ್ಪಟಂ=ಕಾಸಿಗಪ್ಪಡಂ (ಗಬ್ಬಡಂ).

ತಕಾರತೃತೀಯತೆಗೆ—ಖದಿರತಾಂಬೂಲಂ=ಕೈರದಂಬುಲಂ; ಮಾಲಾತೋರಣಂ=ಮಾಲೆದೋರಣಂ; ಕಾಕತುಂಡಿ=ಕಾಗೆದೊಂಡೆ; ಅಟ್ಟತುವರಿ=ಅಟ್ಟದೊವರಿ; ಸಂಘಾತತಾಳಂ=ಸಂಗಡದಾಳಂ.

ಪಕಾರತೃತೀಯತೆಯುಂ ಪ್ರಯೋಗದೊಳ್ ನೋಡಿ ಕೊಳ್ವುದು.

ಪೂರ್ವಪದಾಂತ್ಯಕ್ಕೆ ದೀರ್ಘಮುಂ ಉತ್ತರಪದಾದಿಗೆ ಲೋಪಮುಮಾಗಿ—ಧರ್ಮಪಾನೀಯಕ್ಕೆ ದಮ್ಮಾಣಿ, ಕಾಂಸ್ಯತಾಳಕ್ಕೆ ಕಂಸಾಳಮ್ ಎಂದಾಯ್ತು.

### ಸೂತ್ರಂ.

ಪರಪದದಾದಿಗೆ ಲೋಪಂ
ದೊರೆಕೊಳ್ಗುಂ ಕೆಲವಱಲ್ಲಿ ಪೂರ್ವಪದಾಂತ್ಯ |
ಕ್ಕಿರದಕ್ಕುಂ ಲೋಪಂ ವ್ಯವ
ಹರಿಪ ಸಮಾಸಂಗಳಲ್ಲಿ ಕೆಲಕೆಲವೆಡೆಯೊಳ್ || 294 ||

Further, sometimes the first syllable of the second word suffers elision without any changes in the first word; sometimes the last syllable of the first word is elided.

### ಪದಚ್ಛೇದಂ.

ಪರಪದದ ಆದಿಗೆ ಲೋಪಂ ದೊರೆಕೊಳ್ಗುಂ, ಕೆಲವೞಿಲ್ಲಿ ಪೂರ್ವಪದಾಂತ್ಯಕ್ಕೆ ಇರದೆ ಅಕ್ಕುಂ ಲೋಪಂ, ವ್ಯವಹರಿಪ ಸಮಾಸಂಗಳಲ್ಲಿ ಕೆಲ ಕೆಲ ಎಡೆಯೊಳ್.

### ಅನ್ವಯಂ.

ವ್ಯವಹರಿಪ ಸಮಾಸಂಗಳಲ್ಲಿ ಕೆಲಕೆಲವೆಡೆಯೊಳ್ ಪರಪದದ ಆದಿಗೆ ಲೋಪಂ ದೊರೆಕೊಳ್ಗುಂ, ಕೆಲವೞಿಲ್ಲಿ ಪೂರ್ವಪದಾಂತ್ಯಕ್ಕೆ ಇರದೆ ಲೋಪಂ ಅಕ್ಕುಂ.

### ಟೀಕು.

ವ್ಯವಹರಿಪ ಸಮಾಸಂಗಳಲ್ಲಿ=ವ್ಯವಹರಿಸುವ ಸಮಾಸಪದಂಗಳಲ್ಲಿ; ಕೆಲಕೆಲವೆಡೆಯೊಳ್=ಕೆಲವು ಕೆಲವು ತಾವಿನಲ್ಲಿ; ಪರಪದದ=ಮುಂದಣ ಪದದ; ಆದಿಗೆ=ಮೊದಲ್ಗೆ; ಲೋಪಂ=ಅದರ್ಶನಂ; ದೊರೆಕೊಳ್ಗುಂ=ಬರ್ಪುದು; ಕೆಲವೞಿಲ್ಲಿ=ಕೆಲವು ಸಮಾಸಪದಂಗಳಲ್ಲಿ; ಪೂರ್ವಪದಾಂತ್ಯಕ್ಕೆ=ಮೊದಲ ಪದದ ಕಡೆಯಕ್ಷರಕ್ಕೆ; ಇರದೆ=ನಿಲ್ಲದೆ; ಲೋಪಂ=ಅದರ್ಶನಂ; ಅಕ್ಕುಂ=ಆಗುವದು.

### ವೃತ್ತಿ.

ಸಮಾಸದೊಳುತ್ತರಪದದಾದಿಗೆ ಕೆಲವೆಡೆಯೊಳ್ ಲೋಪಮಕ್ಕುಂ; ಪೂರ್ವಪದಾಂತ್ಯಕ್ಕೆ ಕೆಲವೞಿಯೊಳ್ ಲೋಪಮಕ್ಕುಂ.

### ಪ್ರಯೋಗಂ.

ಉತ್ತರಪದಾದಿಯ ಲೋಪಕ್ಕೆ—ಚರ್ಮಪಟ್ಟಿಗೆ=ಚಮ್ಮಟ್ಟಿಗೆ, ಸಮಟಿಗೆಯೆನಲುಮಕ್ಕುಂ.

ಪೂರ್ವಪದಾಂತ್ಯಲೋಪಕ್ಕೆ—ದೇವಕುಲಂ=ದೇಗುಲಂ; ದೇಶಶಾಖೆ=ದೇಸಾಕೆ; ಶೂಚಿಯಾಣಂ=ಸೂಯಾಣಂ.

### ಸೂತ್ರಂ.

Where ಅಕಾರ and ಆಗಾರ form the second word of a compound, they often become ಅರ; and ಅವಳಿಕೆ becomes ಅಳಿಗೆ (or ಳಿಗೆ).

ಅವಗಮಾಕಾರಾಗಾ
ರಾವಳಿಕೆಗಳಿವು ಸಮಾಸದುತ್ತರಪದನಾ |
ಗಾವರಿಸಿರ್ಕುಂ ಲೋಪಂ
ಭಾವಿಪೊಡೆರಡನೆಯ ವರ್ಣದೊಳಮಾದಿಯೊಳಂ || 295 ||

### ಪದಚ್ಛೇದಂ.

ಅವಗಂ ಆಕಾರಾಗಾರಾವಳಿಕೆಗಳ್ ಇವು ಸಮಾಸದ ಉತ್ತರಪದಂ ಆಗೆ, ಆವರಿಸಿ ಇರ್ಕುಂ ಲೋಪಂ, ಭಾವಿಪೊಡೆ ಎರಡನೆಯ ವರ್ಣದೊಳಂ ಆದಿಯೊಳಂ.

ಯಥಾನ್ವಯಂ.

ಟೀಕು.

ಆವಗಂ=ಆವಾಗಳುಂ; ಆಕಾರಾಗಾರಾವಳಿಕೆಗಳ್=ಆಕಾರವೆಂಬ ಆಗಾರವೆಂಬ ಆವಳಿಕೆಯೆಂಬ ಶಬ್ದಂಗಳ್; ಇವು=ಈ ಪದಂಗಳ್; ಸಮಾಸದ=ಸಮಾಸಪದದ; ಉತ್ತರಪದಂ=ಮುಂದಣ ಪದಂ; ಆಗಿ=ಆಗಿ; ಆವರಿಸಿರ್ಕುಂ=ಆವರಿಸಿಪ್ಪುವು; ಭಾವಿಪೊಡೆ=ಭಾವಿಸುವೊಡೆ; ಎರಡನೆಯ ವರ್ಣದೊಳಂ=ಎರಡನೆಯಕ್ಷರದಲ್ಲಿಯುಂ; ಆದಿಯೊಳಂ=ಆದಿಯಕ್ಷರದಲ್ಲಿಯುಂ; ಲೋಪಂ=ಅದರ್ಶನಂ ಬರ್ಪುದು.

ವೃತ್ತಿ.

ಆಕಾರ ಆಗಾರ ಆವಳಿಕಾ ಶಬ್ದಂಗಳ್ ಪರಮಾಗೆ, ತಮ್ಮೆರಡನೆಯಕ್ಕರದೊಳಂ ಆದಿಯಕ್ಕರದೊಳಂ ಲೋಪಂ.

ಪ್ರಯೋಗಂ.

ಆಕಾರಕ್ಕೆ—ಚಿತ್ರಾಕಾರಂ=ಚಿತ್ತಾರಂ; ರೂಪಾಕಾರಂ=ರೂಪಾರಂ.

ಆಗಾರಕ್ಕೆ—ಕೋಷ್ಠಾಗಾರಂ=ಕೊಟ್ಟಾರಂ; ಭಾಂಡಾಗಾರಂ=ಭಂಡಾರಂ; ಕ್ಷೀರಾಗಾರಂ=ಕೀರಾರಂ, ಕೀಲಾರಮ್ ಎಂದುಮುಂಟು; ದೇವಾಗಾರಂ=ದೇವಾರಂ; ಧವಳಾಗಾರಂ=ಧವಳಾರಂ; ಗೂಢಾಗಾರಂ=ಗೂಡಾರಂ.

ಆವಳಿಕೆಗೆ—ದೀಪಾವಳಿಕೆ=ದೀಪಾಳಿಗೆ, ಆದಿಯಕ್ಕರಂ ಲೋಪಮಾಗಿ ದೀವಳಿಗೆ ಎಂದಾಯ್ತು. ಸಿಂಹಾಗಾರಂ ಕಾರಾಗಾರಮೆಂಬ ಶಬ್ದಂಗಳ್ಗೆ ಬಹುಳದಿನೀ ಲಕ್ಷಣಮಿಲ್ಲ.

ಸೂತ್ರಂ.

ದ್ವಾರಂ, when being the second word of a compound with the Tadbhavas ಸಿರಿಯು, ವಂಕ, ಪಾಣಿಯು and ಕಂಟಿಯು, appears as ದರಂ, ದಾರಂ, or ಬಾರಂ.

ದರದಾರಬಾರಮಕ್ಕುಂ
ಪರದಾ ದ್ವಾರಕ್ಕೆ ಪೂರ್ವದೊಳ್ ತದ್ಭವಮಾ |
ಗಿರೆ ಸಿರಿಯವಂಕಪಾಣಿಯ
ಮಿರೆ ಕಂಟಿಯಮುಚಿತವಿಧಿ ವಿಕಲ್ಪವಿಧಾನಂ || 296 ||

ಪದಚ್ಛೇದಂ.

ದರ-ದಾರ-ಬಾರಂ ಅಕ್ಕುಂ ಪರದ ಆ ದ್ವಾರಕ್ಕೆ, ಪೂರ್ವದೊಳ್ ತದ್ಭವಂ ಆಗಿ ಇರೆ ಸಿರಿಯ-ವಂಕ-ಪಾಣಿಯಂ, ಇರೆ ಕಂಟಿಯಂ; ಉಚಿತವಿಧಿ ವಿಕಲ್ಪವಿಧಾನಂ.

ಅನ್ವಯಂ.

ಪೂರ್ವದೊಳ್ ತದ್ಭವಂ ಆಗಿ ಇರೆ ಸಿರಿಯವಂಕಪಾಣಿಯಂ, ಕಂಟಿಯಂ ಇರೆ-ವಿಕಲ್ಪವಿಧಾನಂ ಉಚಿತವಿಧಿ-ಪರದ ಆ ದ್ವಾರಕ್ಕೆ ದರದಾರಬಾರಂ ಅಕ್ಕುಂ.

ಟೀಕು.

ಪೂರ್ವದೊಳ್=ಆದಿಯಲ್ಲಿ; ತದ್ಭವಂ=ತದ್ಭವಂ; ಆಗಿರೆ=ಆಗಿರೆ; ಸಿರಿಯುವಂಕಪಾಣಿಯಂ= ಸಿರಿಯ ಎಂಬ ವಂಕ ಎಂಬ ಪಾಣಿ ಎಂಬ ಶಬ್ದಂಗಳ್; ಕಂಟಿಯಂ=ಕಂಟಿಯ ಎಂಬ ಶಬ್ದಂ; ಇರೆ=ಇರಲಾಗಿ; ವಿಕಲ್ಪವಿಧಾನಂ=ವಿಕಲ್ಪದ ವಿಧಾನಂ; ಉಚಿತವಿಧಿ=ಉಚಿತದ ವಿಧಿಯಾಗಿ; ಪರದ=ಮುಂದಣ; ಆ ದ್ವಾರಕ್ಕೆ=ಆ ದ್ವಾರ ಎಂಬ ಶಬ್ದಕ್ಕೆ; ದರದಾರಬಾರಂ=ದರ ಎಂಬ ದಾರ ಎಂಬ ಬಾರ ಎಂಬಾದೇಶಂ; ಅಕ್ಕುಂ=ಆಗುವದು.

ವೃತ್ತಿ.

ಶ್ರೀವಕ್ರಪಾನೀಯಕಂಟಕವೆಂಬಿವರ್ಕಾದ ಸಿರಿಯ ವಂಕ ಪಾಣಿಯ ಕಂಟಿಯಂಗಳ್ ಮೊದಲೊಳಿರೆ, ಪರದ ದ್ವಾರಶಬ್ದಕ್ಕೆ ದರಮೆಂದುಂ ದಾರಮೆಂದುಂ ಬಾರಮೆಂದುಮಕ್ಕುಂ; ಇವಱೊಳ್ವಿಕಲ್ಪಮನುಚಿತಮಾಗಱಿವುದು.

ಪ್ರಯೋಗಂ.

ಶ್ರೀದ್ವಾರಂ=ಸಿರಿಯದರಂ, ಸಿರಿಯದಾರಂ, ಸಿರಿಯಬಾರಂ.

ವಕ್ರದ್ವಾರಂ=ವಂಕದರಂ, ವಂಕದಾರಂ, ವಂಕಬಾರಂ.

ಪಾನೀಯದ್ವಾರಂ=ಪಾಣಿಯಬಾರಂ; ಕಂಟಕದ್ವಾರಂ=ಕಂಟಿಯಬಾರಂ. ಈ ಎರಡು ಸಮಾಸಪದಕ್ಕಮುಚಿತವಿಧಿಯಿಂ ವಿಕಲ್ಪಮಿಲ್ಲ.

**7. Tatsama words and compounds with them.**

ಇಲ್ಲಿಂದಂ ಮೇಲೆ ತತ್ಸಮಕ್ಕೆ ಸೂತ್ರಂ—

ಸೂತ್ರಂ.

ಮಣಿ ಮಂಚಂ ಪಟ್ಟಂ ತೋ
ರಣಮಟ್ಟಂ ಗೋಣಿ ಸಬಳಮಂಕಂ ಲತೆ ಕಂ |
ಕಣಮೆಸೆವ ಕೋಂಟೆ ಬಲಮಂ
ಗಣಂ ಬಿಲಂ ಬಂದಿ ಮಾಲೆ ಗಾಳಂ ಗಂಡಂ || 297 ||

ಗಲ್ಲಂ ಮಲ್ಲಂ ತಳಮಿಂ
ತೆಲ್ಲಂ ತತ್ಸಮಮುಮಿವಱುದಾಹರಣಂಗಳಂ |
ಸೊಲ್ಲಿಸುವೆನೆರಡು ಮೆಯ್ಯಂ
ಬಲ್ಲರ್ಗಳ್ ಮೆಚ್ಚುತಿರೆ ಸಮಾಸೋಕ್ತಿಗಳಿಂ || 298 ||

There are several Sanskṛt nouns, such as ಮಣಿ, ಮಂಚ, etc., which are used in Canarese in their own forms (i. e. as Tatsamas), and can, therefore, form compounds as well with Sanskṛt as with pure Canarese nouns. (cf. S. 80; 174; s. S. 185).

ಪದಚ್ಛೇದಂ.

ಮಣಿ, ಮಂಚಂ, ಪಟ್ಟಂ, ತೋರಣಂ, ಅಟ್ಟಂ, ಗೋಣಿ, ಸಬಳಂ, ಅಂಕಂ, ಲತೆ, ಕಂಕಣಂ, ಎಸೆವ ಕೋಂಟೆ, ಬಲಂ, ಅಂಗಣಂ, ಬಿಲಂ, ಬಂದಿ, ಮಾಲೆ, ಗಾಳಂ ಗಂಡಂ, ಗಲ್ಲಂ, ಮಲ್ಲಂ, ತಳಂ ಇಂತು ಎಲ್ಲಂ ತತ್ಸಮಮುಂ; ಇವಱ ಉದಾಹರಣೆಗಳಂ ಸೊಲ್ಲಿಸುವೆಂ ಎರಡು ಮೆಯ್ಗಂ, ಬಲ್ಲರ್ಗಳ್ ಮೆಚ್ಚುತಿರೆ, ಸಮಾಸೋಕ್ತಿಗಳಿಂ.

ಯಥಾನ್ವಯಂ.

ಟೀಕು.

ಮಣಿಯೆಂದು, ಮಂಚವೆಂದು, ಪಟ್ಟವೆಂದು, ತೋರಣವೆಂದು, ಅಟ್ಟವೆಂದು, ಗೋಣಿಯೆಂದು, ಸಬಳವೆಂದು, ಅಂಕವೆಂದು, ಲತೆಯೆಂದು, ಕಂಕಣವೆಂದು, ಎಸೆವ ಕೋಂಟೆಯೆಂದು, ಬಲವೆಂದು, ಅಂಗಣವೆಂದು, ಬಿಲವೆಂದು, ಬಂದಿಯೆಂದು, ಮಾಲೆಯೆಂದು, ಗಾಳವೆಂದು, ಗಂಡವೆಂದು, ಗಲ್ಲವೆಂದು, ಮಲ್ಲವೆಂದು, ತಳವೆಂದು; ಇಂತು=ಹೀಗೆ; ಎಲ್ಲಂ=ಈ ಶಬ್ದಂಗಳೆಲ್ಲಂ; ತತ್ಸಮಮುಂ=ತತ್ಸಮಂಗಳೆನಿಸುವವು; ಇವಱ=ಈ ಶಬ್ದಂಗಳ; ಉದಾಹರಣೆಗಳಂ=ಉದಾಹರಣಂಗಳಂ; ಎರಡು ಮೆಯ್ಗಂ=ಸಂಸ್ಕೃತ ಕರ್ಣಾಟಕವೆಂಬೆರಡು ಸ್ವರೂಪಕ್ಕೆಯುಂ; ಬಲ್ಲರ್ಗಳ್=ಬಲ್ಲ ವಿದ್ವಾಂಸರ್; ಮೆಚ್ಚುತಿರೆ=ಅಂಗೀಕರಿಸುತ್ತಿರೆ; ಸಮಾಸೋಕ್ತಿಗಳಿಂ=ಸಮಾಸವಾಕ್ಯಂಗಳಿಂದೆ; ಸೊಲ್ಲಿಸುವೆಂ=ಪೇಳ್ವೆಂ.

ವೃತ್ತಿ.

ಈ ಶಬ್ದಂಗಳ್ ಸಂಸ್ಕೃತಕ್ಕಂ ಕನಡಕ್ಕಂ ಸರಿ; ಇವಱುದಾಹರಣಂಗಳಂ ಸಮಾಸೋಕ್ತಿಯಿಂ ಸಂಸ್ಕೃತ ಕರ್ಣಾಟಕಂಗಳೊಳ್, ಬಲ್ಲರ್ ಮೆಚ್ಚೆ, ತೋಱಿದಪೆಂ.

ಪ್ರಯೋಗಂ.

ಮಣಿಗೆ—ಮಕುಟಮಣಿ; ದಿನಮಣಿ; ಕೆಲವಣಿ; ಉಡೆವಣಿ.

ಮಂಚಕ್ಕೆ—ಕಾಂಚನಮಂಚಂ; ರತ್ನಮಂಚಂ; ಸೆಳೆಮಂಚಂ.

ಪಟ್ಟಕ್ಕೆ—ಪಟ್ಟವರ್ಧನಂ; ಪಟ್ಟಮಹಿಷಿ; ಪಟ್ಟಶರಂ; ಪಟ್ಟವಣಿ; ಪಟ್ಟಗಾರೆ; ಪಟ್ಟಗರ್ದುಗೆ.

ತೋರಣಕ್ಕೆ—ಕಾಂಸ್ಯತೋರಣಂ; ಮಕರತೋರಣಂ; ಪಚ್ಚೆದೋರಣಂ; ತಳಿದೋರಣಂ.

ಅಟ್ಟಕ್ಕೆ—ಅಟ್ಟಹಾಸಂ; ಅಟ್ಟವಡಿ; ಅಟ್ಟಗವಲ್.

ಗೋಣಿಗೆ—ಗೋಣಿಕಾಪುತ್ರಂ; ಕಱುಗೋಣಿ; ಪೇರ್ಗೋಣಿ.

ಸಬಳಕ್ಕೆ—ಸಬಳತ್ರಿಣೇತ್ರಂ; ಸಬಳಸಹಸ್ರಬಾಹು; ಸಬಳಗದ್ಯಾಣಂ; ಸಬಳದೆರೆ [—ದೊಱೆ, M. A.; M. B. also—ದೆರೆ; s. S. 299—ದೆಱೆ]; ಸಬಳವಿಂನಣಿ.

ಅಂಕಕ್ಕೆ—ಮೃಗಾಂಕಂ; ವೃಷಾಂಕಂ; ಮಾಱಂಕಂ; ಕಟ್ಟಂಕಂ; ಅಂಕವಱಿ; ಅಂಕವಾತು.

ಲತೆಗೆ—ನವಲತೆ; ಎಳಲತೆ; ಲತೆವಳ್ಳಿ.

ಕಂಕಣಕ್ಕೆ—ಮಣಿಕಂಕಣಂ; ಹಸ್ತಕಂಕಣಂ; ಹಿಂಡುಗಂಕಣಂ; ಗುಬ್ಬಿಗಂಕಣಂ.

ಕೋಂಟೆಗೆ—ಧೂಳಿಕೋಂಟೆ; ಹೆಡೆಗೆಗೋಂಟೆ (ಹಿಡೆಗೆ—); ತಱಗೋಂಟೆ (ತಳಿ—); ಹತ್ತುಗೋಂಟೆ.

ಬಲಕ್ಕೆ—ಭೂಬಲಂ; ಭುಜಬಲಂ; ಆಳ್ಬಲಂ; ತೋಳ್ಬಲಂ; ನೆಲವಲಂ; ಪೇರ್ವಲಂ; ಮಾರ್ವಲಂ.

ಅಂಗಣಕ್ಕೆ—ಅಂಗಣವಲಯಂ; ಅಂಗಣವಾವಿ; ಅಂಗಣವೆಟ್ಟು; ಅಂಕಣಶಬ್ದಕ್ಕಂಗಣವಾದುದಾಗಿ ತತ್ಸಮಮಾಗಲಾರ್ಪುದು.

ಬಿಲಕ್ಕೆ—ಬಿಲದ್ವಾರಂ; ಬಿಲಸರ್ಗಂ; ಪೆರ್ಬಿಲಂ.

ಬಂದಿಗೆ—ಬಂದಿಗ್ರಹಣಂ; ಬಲ್ವಂದಿಕಾಱಂ, ಬಲ್ವಂದಿಕಾಱನ ವೋಲ್ ಹಿಂಡೊಡೆದೊಂದೆ [—ಡೊಡೆದಂತೆ] ಪೋಯ್ತು; ಬಂದಿವಿಡಿದಂ ಬಿಂಬಾಧರವಂ (—ಧರಸ್ಥಾನವಂ;—ನವುಂ in M. B.).

ಮಾಲೆಗೆ—ವನಮಾಲೆ; ಕಂಠಮಾಲೆ; ಪೂಮಾಲೆ; ಪಚ್ಚೆಮಾಲೆ.

ಗಳಕ್ಕೆ—ಗಳಗಾಳಂ; ಸಣ್ಣಗಾಳಂ; ಎಡೆಗಾಳಂ.

ಗಂಡಕ್ಕೆ—ಗಂಡಗರ್ವಂ; ಗಂಡಗುಣಂ; ಗಂಡವರಿಜು; ಗಂಡಗಲಿ; ಗಂಡವಸದನಂ; ಗಂಡಪೆಂಡಿರ್.

ಗಲ್ಲಕ್ಕೆ—ಗಲ್ಲಸ್ಥಳಂ; ಗಲ್ಲಗಿವಿ; ಗಲ್ಲಗುಗ್ಗುರಿ; ತೆಳ್ಗಲ್ಲಂ.

ಮಲ್ಲಕ್ಕೆ—ಮಲ್ಲಮುರಾಂತಕಂ; ಮಲ್ಲವಾತು; ಮಲ್ಲಗಾಳಿಗಂ.

ತಳಕ್ಕೆ—ಕರತಳಂ; ಧರಣಿತಳಂ; ಕೆಂದಳಂ; ತಟ್ಟತಳಂ; ತಳಹಗ್ಗಂ ಎಂಬಂತೆ.

ಸೂತ್ರಂ.

ಸಕ್ಕದಮಂ ಮಱಿಗೊಳ್ಳದೆ
ಚೊಕ್ಕಳಿಕೆಯಿನಚ್ಚಗಂನಡಂ ಬೆಟ್ಟರ ಕ |
ಯ್ಯೊಕ್ಕ ನಿಧಿಯೆನಿಪಪಭ್ರಂ
ಶಕ್ಕಂ ದೇಶೀಯಪದಕಮುಂಟು ಸಮಾಸಂ || 299 ||

In forming compounds not only Tadbhava words (and Tatsama words, S. 289), but also Tadbhava Compounds and Tatsama Compounds may be joined to pure Canarese words.

## ಪದಚ್ಛೇದಂ.

ಸಕ್ಕದಮಂ ಮಱಿಗೊಳ್ಳದೆ ಚೊಕ್ಕಳಿಕೆಯಿಂ ಅಚ್ಚಗಂನಡಂ ಬೇಲ್ಪಿರ ಕಯ್ವೊಕ್ಕ ನಿಧಿ ಎನಿಪ ಅಪಭ್ರಂಶಕ್ಕಂ ದೇಶೀಯಪದಕಂ ಉಂಟು ಸಮಾಸಂ.

## ಯಥಾನ್ವಯಂ.

## ಟೀಕು.

ಸಕ್ಕದಮಂ=ಸಂಸ್ಕೃತಮಂ; ಮಱಿಗೊಳ್ಳದೆ=ಮಱಿ ಪೊಗದೆ; ಚೊಕ್ಕಳಿಕೆಯಿಂ=ಚೊಕ್ಕಟದಿಂದೆ; ಅಚ್ಚಗಂನಡಂ=ಅಚ್ಚ ಕಂನಡಂ; ಬೇಲ್ಪಿರ=ಬಯಸುವರ (ಬೇಡುವವರ); ಕಯ್ವೊಕ್ಕ ನಿಧಿ=ಕೈ ಸಾರ್ದ ನಿಧಾನಂ; ಎನಿಪಪಭ್ರಂಶಕ್ಕಂ=ಎನಿಸುವ ಅಪಭ್ರಂಶಶಬ್ದಕ್ಕೆಯುಂ; ದೇಶೀಯಪದಕಂ=ದೇಶೀಯಪದಕ್ಕೆಯುಂ; ಸಮಾಸಂ=ಸಮಾಸಂ; ಉಂಟು=ಉಂಟಾಗಿರ್ಪುದು.

## ವೃತ್ತಿ.

ಸಂಸ್ಕೃತಮಂ ಮಱಿಗೊಳ್ಳದೆ ನೆಱಿವರ್ಣಿಯಿಂದಚ್ಚಗಂನಡಮಂ ಪೇಳ್ವಿಗೀಯಪಭ್ರಂಶಪದಮುಮ್ ಇದಱ ಸಮಾಸಮುಂ ತತ್ಸಮದ ಸಮಾಸಮುಂ ಕಯ್ಮೊಕ್ಕ ನಿಧಾನಮಿದಱೊಡನೆ ಕನ್ನಡದ ದೇಶೀಯಪದಮುಂ ಸಮಾಸಿಸಲಪ್ಪುದು.

## ಪ್ರಯೋಗಂ.

ಅಪಭ್ರಂಶಕ್ಕಂ ದೇಶೀಯಪದಕ್ಕಂ ಸಮಾಸಂ—ಸೆಜ್ಜೆವನೆ; ಸಿಂಗವೇಂಟೆ; ರಾಯಗೋಟೆ.

ಅಪಭ್ರಂಶಸಮಾಸಕ್ಕಂ ದೇಶೀಯಪದಕ್ಕಂ ಸಮಾಸಂ—ತಾಣದೀವಿಗೆವೆಳಗು; ಜವಳಿವದ್ದಳೆದೊಂಗಲ್; ಜೊನ್ನವಕ್ಕಿಗಣ್ಗಳ್.

ತತ್ಸಮಸಮಾಸಕ್ಕಂ ದೇಶೀಯಪದಕ್ಕಂ ಸಮಾಸಂ—ಸಬಳಗದ್ಯಾಣದೆಱ; ಕಟ್ಟಂಕದಲ್ಲಣಂ; ಪೂಮಾಲೆದುಱುಂಬು.

## ಗದ್ಯಂ.

ಇದು ಸಮಸ್ತಶಾಬ್ದಿಕಜನಮನೋಜನಿತಶಬ್ದಸಂದೇಹಶಲ್ಯಚಾರುಚುಂಬಕಾಯಮಾನಾನೂನಕರ್ಣಾಟಕಲಕ್ಷಣಶಿಕ್ಷಾಚಾರ್ಯಸುಕವಿಕೇಶಿರಾಜವಿರಚಿತಮಪ್ಪ ಶಬ್ದಮಣಿದರ್ಪಣದೊಳ್ಅಪಭ್ರಂಶಪ್ರಪಂಚಲಕ್ಷಣಮೆಂಬ ಸಪ್ತಮಮಪ್ಪ ಸಂಧಿ ಸಮಾಪ್ತಂ.

೭ನೆಯ ಅಧ್ಯಾಯಂ ಸಮಾಪ್ತಂ.

# ೮ನೆಯ ಅಧ್ಯಾಯಂ. VIII. CHAPTER.

## ಅವ್ಯಯಪ್ರಕರಣಂ.

ON PARTICLES[1].

ಸೂತ್ರಂ.

Particles (Adverbs, ಅವ್ಯಯಂ) include all Imitative sounds and many formations by the affixes ಅದು, ಅನೆ, ಅಗೆ. (see s. S. 193).

ಅನುಕೃತಿಪದವೊದವೆಯುಮದು
ವನೆಯೆಂಬೆರಡುಂ ಪದಾಂತ್ಯದೊಳ್ ಬರೆಯುಂ ನೆ |
ಟ್ಟನೆ ತಾವವ್ಯಯಮಪ್ಪುವು
ವನೆಯ ನಕಾರಂ ವಿಕಲ್ಪದಿಂದೆ ಗಕಾರಂ || 300 ||

ಪದಚ್ಛೇದಂ.

ಅನುಕೃತಿಪದಂ ಒದವೆಯುಂ ಅದು ಅನೆ ಎಂಬ ಎರಡುಂ ಪದಾಂತ್ಯದೊಳ್ ಬರೆಯುಂ ನೆಟ್ಟನೆ ತಾಂ ಅವ್ಯಯಂ ಅಪ್ಪುವು; ಅನೆಯ ನಕಾರಂ ವಿಕಲ್ಪದಿಂದೆ ಗಕಾರಂ.

ಟೀಕು.

ಅನುಕೃತಿಪದಂ=ಅನುಕರಣಪದಂಗಳ್; ಒದವೆಯುಂ=ಬಂದೊಡೆಯುಂ; ಅದು=ಅದೆಂದು; ಅನೆ=ಅನೆ ಎಂದು; ಎಂಬೆರಡುಂ=ಎಂಬೆರಡು ರೂಪುಂ; ಪದಾಂತ್ಯದೊಳ್=ಪದದ ಕಡೆಯಲ್ಲಿ; ಬರೆಯುಂ=ಬಂದೊಡಂ; ನೆಟ್ಟನೆ=ವ್ಯಕ್ತವಾಗಿ; ತಾಂ=ಆ ಶಬ್ದಂಗಳ್ ತಾಂ; ಅವ್ಯಯಂ=ಅವ್ಯಯಂಗಳ್; ಅಪ್ಪುವು=ಆಗುವವು; ಅನೆಯ=ಅನೆ ಎಂಬ ರೂಪಿನ; ನಕಾರಂ=ನತ್ವಂ; ವಿಕಲ್ಪದಿಂದೆ=ವಿಕಲ್ಪದಿಂದೆ; ಗಕಾರಂ=ಗತ್ವವಾಗುವದು.

ವೃತ್ತಿ.

ಧಿಗಿಲನೆ, ಭುಗಿಲನೆ, ಭೋರನೆ ಎಂಬನುಕರಣಪದಂಗಳ್ ಬರೆಯುಂ, ಅದು ಅನೆ ಎಂಬಿವು ಪದಾಂತ್ಯಂಗಳೊಳಿರೆಯುಂ, ಅವ್ಯಯಪದಂಗಳಪ್ಪುವು.

1) Indeclinables, though the true translation, might not be the proper word on account of S. 320 seq.; cf. S. 35; also Ss. 88; 90. See ಕ್ರಿಯಾವಿಶೇಷಣಂ, S. 144.

ಪ್ರಯೋಗಂ.

ಅದುಗೆ—ನೂಂಕದು; ನೂಳದು (s. S. 304); ತೆತ್ತದು, ತೆತ್ತದೆಂದು ತೀರದೆಂಬರ್ಥಂ[1].

ಅನೆಗೆ—ಕಂಮನೆ; ಇಂಮನೆ; ಸಿಯ್ಯನೆ; ಮೆಲ್ಲನೆ.

ನಕಾರಕ್ಕೆ ವಿಕಲ್ಪದಿಂ ಗಕಾರಂ—ನೆಟ್ಟನೆ=ನೆಟ್ಟಗೆ; ಸುಂಮನೆ=ಸುಂಮಗೆ; ಕಂಮನೆ=ಕಂಮಗೆ; ಬಿಂನನೆ=ಬಿಂನಗೆ.

ಸೂತ್ರಂ.

ಇಲ್ಲ, not (S. 186); ಕೀಱಿದು (ಕಿಱಿಯದು) crowdedly, confusedly; ನಿರ್ನಿರ್ (ನಿರ್ನಿರ್), ನಿರ್ನೆರಂ (S. 90), causelessly.

ಸೊಲ್ಲೊಳ್ ಕ್ರಿಯಾತ್ಮಕಾವ್ಯಯ
ಮಿಲ್ಲೆಂಬುದು ಕೀಱಿದೆಂಬುದಾಕೀರ್ಣಾರ್ಥಂ |
ಬಲ್ಲರ್ಗೆ ನಿರ್ನಿಮಿತ್ತಾ
ರ್ಥೋಲ್ಲಸಿತಂ ನಿರ್ನಿರೆಂಬುದುಂ ನಿರ್ನೆರಮುಂ || 301 ||

ಪದಚ್ಛೇದಂ.

ಸೊಲ್ಲೊಳ್ ಕ್ರಿಯಾತ್ಮಕಾವ್ಯಯಂ ಇಲ್ಲ ಎಂಬುದು; ಕೀಱಿದು ಎಂಬುದು [ಕಿರಿಯದು and ಕಿರಿದು in M. B.] ಆಕೀರ್ಣಾರ್ಥಂ; ಬಲ್ಲರ್ಗೆ ನಿರ್ನಿಮಿತ್ತಾರ್ಥೋಲ್ಲಸಿತಂ ನಿರ್ನಿರ್ ಎಂಬುದುಂ ನಿರ್ನೆರಮುಂ.

ಟೀಕು.

ಇಲ್ಲೆಂಬುದು=ಇಲ್ಲ ಎಂಬುದು; ಸೊಲ್ಲೊಳ್=ವಾಕ್ಯದಲ್ಲಿ; ಕ್ರಿಯಾತ್ಮಕಾವ್ಯಯಂ=ಕ್ರಿಯಾಸ್ವರೂಪವಾದವ್ಯಯಂ; ಕೀಱಿದೆಂಬುದು=ಕೀಱಿದೆಂಬುದು; ಆಕೀರ್ಣಾರ್ಥಂ=ತುಱುಗಿದರ್ಥಂ; ಬಲ್ಲರ್ಗೆ=ಬಲ್ಲವರ್ಗೆ; ನಿರ್ನಿರೆಂಬುದುಂ=ನಿರ್ನಿರ್ ಎಂಬುದುಂ; ನಿರ್ನೆರಮುಂ=ನಿರ್ನೆರಂ ಎಂಬುದುಂ; ನಿರ್ನಿಮಿತ್ತಾರ್ಥ=ಕಾರಣವಲ್ಲದ ಅರ್ಥದಲ್ಲಿ; ಉಲ್ಲಸಿತಂ=ಉನ್ನತವಾಗಿ ಬಪ್ಪುದು.

ಸೂತ್ರಂ.

ಸುಂಮಗೆ, ಸುಂಮನೆ (S. 318), ಉಸಿಕನೆ, silently; ಗುಱುಗುಂಮಗೆ, ಬಿಂನಗೆ, ಬಿಂನನೆ, inactively.

ನೆಗೞ್ಗುಂ ಮೌನಾರ್ಥಂ ಸುಂ
ಮಗೆ ಸುಂಮನೆಯುಸಿಕನೆಂದು ನುಡಿವವ್ಯಯದೊಳ್ |
ಪುಗುಗುಂ ಗುಱುಗುಂಮಗೆ ಬಿಂ
ನಗೆ ಬಿಂನನೆಯೆನಲೊಡಂ ಕ್ರಿಯಾಶೂನ್ಯಾರ್ಥಂ || 302 ||

1) Adjectives used as Adverbs. See S. 88 "ಅವ್ಯಯಲಿಂಗಕ್ಕೆ".

ಪದಚ್ಛೇದಂ.

ನೆಗಟ್ಟಿಂ ಮೌನಾರ್ಥಂ ಸುಂಮಗೆ ಸುಂಮನೆ ಉಸಿಕನೆ ಎಂದು ನುಡಿವ ಅವ್ಯಯದೊಳ್; ಪುಗುಗುಂ ಗುಱುಗುಂಮಗೆ ಬಿಂನಗೆ ಬಿಂನನೆ ಎನಲೊಡಂ ಕ್ರಿಯಾಶೂನ್ಯಾರ್ಥಂ.

ಟೀಕು.

ಸುಂಮಗೆ=ಸುಂಮಗೆಯೆಂದು; ಸುಂಮನೆ=ಸುಂಮನೆಯೆಂದು; ಉಸಿಕನೆ=ಉಸಿಕನೆಯೆಂದು; ನುಡಿವವ್ಯಯದೊಳ್=ಪೇಳ್ವ ಅವ್ಯಯದಲ್ಲಿ; ಮೌನಾರ್ಥಂ=ಮೌನದರ್ಥಂ; ನೆಗಟ್ಟಿಂ=ಪ್ರಸಿದ್ಧಿವಡೆವುದು; ಗುಱುಗುಂಮಗೆ=ಗುಱುಗುಂಮಗೆಯೆಂದು; ಬಿಂನಗೆ=ಬಿಂನಗೆಯೆಂದು; ಬಿಂನನೆ=ಬಿಂನನೆಯೆಂದು; ಎನಲೊಡಂ=ಎನಲೊಡನೆ; ಕ್ರಿಯಾಶೂನ್ಯಾರ್ಥಂ=ಕ್ರಿಯೆಯಿಲ್ಲದರ್ಥಂ; ಪುಗುಗುಂ=ಪ್ರವೇಶವಪ್ಪುದು.

ಸೂತ್ರಂ.

ಆನುಂ, soever, refers to place, direction, time and number; ಅಣಂ, ಆಣಂ, whatsoever.

ಆನುಮೆನಿಪ್ಪವ್ಯಯಮುಂ
ಸ್ಥಾನದಿಶಾಕಾಲಸಂಖ್ಯೆಗಳೊಳುಸಿರ್ವರ[61] ಮ |
ತ್ತೇನುಮೆನಿಪ್ಪರ್ಥಮನಿರ
ದಾನಿಪರಣಮಾಣಮೆಂದು ನುಡಿವವ್ಯಯದೊಳ್ || 303 ||

ಪದಚ್ಛೇದಂ.

ಆನುಂ ಎನಿಪ್ಪ ಅವ್ಯಯಮುಂ ಸ್ಥಾನದಿಶಾಕಾಲಸಂಖ್ಯೆಗಳೊಳ್ ಉಸಿರ್ವರ್; ಮತ್ತೆ ಏನುಂ ಎನಿಪ್ಪ ಅರ್ಥಮಂ ಇರದೆ ಆನಿಪರ್ ಅಣಂ ಆಣಂ ಎಂದು ನುಡಿವ ಅವ್ಯಯದೊಳ್.

ಟೀಕು.

ಸ್ಥಾನದಿಶಾಕಾಲಸಂಖ್ಯೆಗಳೊಳ್=ಸ್ಥಾನಂಗಳಲ್ಲಿ ದಿಕ್ಕುಗಳಲ್ಲಿ ಕಾಲಂಗಳಲ್ಲಿ ಸಂಖ್ಯೆಗಳಲ್ಲಿ; ಆನುಂ=ಆನುಂ ಎಂದು; ಎನಿಪ್ಪವ್ಯಯಮುಂ=ಎನಿಸುವವ್ಯಯಮುಂ; ಉಸಿರ್ವರ್=ಪೇಳ್ವರ್; ಮತ್ತೆ=ಬಳಿಕಂ; ಅಣಂ=ಅಣಂ ಎಂದು; ಆಣಂ=ಆಣಂ ಎಂದು; ನುಡಿವವ್ಯಯದೊಳ್=ಪೇಳ್ವವ್ಯಯದಲ್ಲಿ; ಏನುಂ=ಏನುಂ ಎಂದು; ಎನಿಪ್ಪರ್ಥಮಂ=ಎನಿಸುವರ್ಥಮಂ; ಇರದೆ=ನಿಲ್ಲದೆ; ಆನಿಪರ್=ಸಂಬಂಧಿಸುವರ್.

ವೃತ್ತಿ.

ಸ್ಥಾನ ದೆಸೆ ಕಾಲ ಸಂಖ್ಯೆಗಳಲ್ಲಿ ಆನುಂ ಎಂಬವ್ಯಯಮುಂ ಪೇೞಲಕ್ಕುಂ; ಏನುಮೆಂಬರ್ಥದೊಳ್ ಅಣಂ ಆಣಂ ಎಂಬವ್ಯಯಮುಂ ಪೇೞಲಕ್ಕುಂ.

ಪ್ರಯೋಗಂ.

ಸ್ಥಾನಕ್ಕೆ—ಎಲ್ಲಿಯಾನುಂ.

1) ಶಿಥಿಲತ್ವಂ.

ದೆಸೆಗೆ—ಎತ್ತಾನುಂ.

ಕಾಲಕ್ಕೆ—ಎಂದಾನುಂ.

ಸಂಖ್ಯೆಗೆ—ಒಂದಾನುಂ; ಎರಡಾನುಂ; ಪತ್ತಾನುಂ; ನೂಱಾನುಂ.

ಅಣಕ್ಕೆ—ಕಾರ್ಯಮಣಮಿಲ್ಲ.

ಆಣಕ್ಕೆ—ಗುಣಮಾಣಮಿಲ್ಲ ಎನಲೊಡಮೇನುಮಿಲ್ಲೆಂಬರ್ಥಂ.

ಸೂತ್ರಂ.

ನಾಡೆಯೆಡೆಯಾವಗಂ ನೆಱೆ
ನೀಡುಂ ಕರಮಾದಮೆಯ್ದೆ ನೂಳದು ಪಿರಿದುಂ |
ನೀಡು ಮಿಗೆ ಕೆಂನಮೆಲ್ಲಂ
ರೂಢಿಯನುಳ್ಳುದುಮಿವವ್ಯಯದೊಳಧಿಕಾರ್ಥಂ || 304 ||

ನಾಡೆ, ಎಡೆ (s. S. 56), ಆವಗಂ, ನೆಱೆ (S. 58), ನೀಡುಂ, ಕರಂ, ಆದಂ, ಎಯ್ದೆ, ನೂಳದು, ಪಿರಿದುಂ, ನೀಡು, ಮಿಗೆ (s. Ss. 88; 90), ಕೆಂನಂ (s. S. 88) signify "much", "exceedingly", "more".

ಪದಚ್ಛೇದಂ.

ನಾಡೆ, ಎಡೆ, ಆವಗಂ, ನೆಱೆ, ನೀಡುಂ, ಕರಂ, ಆದಂ, ಎಯ್ದೆ, ನೂಳದು, ಪಿರಿದುಂ, ನೀಡು, ಮಿಗೆ, ಕೆಂನಂ ಎಲ್ಲಂ ರೂಢಿಯಂ ಉಳ್ಳುದು; ಇವು ಅವ್ಯಯದೊಳ್ ಅಧಿಕಾರ್ಥಂ.

ಟೀಕು.

ನಾಡೆ=ನಾಡೆ ಎಂದು; ಎಡೆ=ಎಡೆ ಎಂದು; ಆವಗಂ=ಆವಗಂ ಎಂದು; ನೆಱೆ=ನೆಱೆ ಎಂದು; ನೀಡುಂ=ನೀಡುಂ ಎಂದು; ಕರಂ=ಕರಂ ಎಂದು; ಆದಂ=ಆದಂ ಎಂದು; ಎಯ್ದೆ=ಎಯ್ದೆ ಎಂದು; ನೂಳದು=ನೂಳದು ಎಂದು; ಪಿರಿದುಂ=ಪಿರಿದುಂ ಎಂದು; ನೀಡು=ನೀಡು ಎಂದು; ಮಿಗೆ=ಮಿಗೆ ಎಂದು; ಕೆಂನಂ=ಕೆಂನಂ ಎಂದು; ಎಲ್ಲಂ=ಈ ಶಬ್ದಂಗಳೆಲ್ಲಂ; ರೂಢಿಯನುಳ್ಳುದು=ಪ್ರಸಿದ್ಧಿಯನುಳ್ಳುದು; ಇವು=ಈ ಶಬ್ದಂಗಳ್; ಅವ್ಯಯದೊಳ್=ಅವ್ಯಯದಲ್ಲಿ; ಅಧಿಕಾರ್ಥಂ=ಅಧಿಕವಾದರ್ಥಂ.

ಸೂತ್ರಂ.

ಭೋಂಕನೆ ಚೆಕ್ಕನೆ ಭೋರನೆ
ಭೊಂಕಲ್ ಚಡುಪುಡನೆ ಗಿಜ್ಜಿತಿಜ್ಜಿನೆಯುಂ ಮ |
ತ್ತಂ ಕಡುಚೆಚ್ಚರಬೆಚ್ಚರ
ಮುಂ ಕೂಡಿರೆ ತಂಮೊಳೊದವುಗುಂ ಶೀಘ್ರಾರ್ಥಂ || 305 ||

ಭೋಂಕನೆ (s. S. 88), ಚೆಕ್ಕನೆ, ಭೋರನೆ (s. S. 300), ಭೊಂಕಲ್, ಚಡುಪುಡನೆ, ಗಿಜ್ಜಿತಿಜ್ಜಿನೆ, ಕಡು, ಚೆಚ್ಚರಂ (s. Ss. 88; 90; S. 150), ಬೆಚ್ಚರಂ signify "swiftly".

ಪದಚ್ಛೇದಂ.

ಭೋಂಕನೆ, ಚೆಕ್ಕನೆ, ಭೋರನೆ, ಭೊಂಕಲ್ (ಭೋಂಕಲ್), ಚಡುಪುಡನೆ, ಗಿಜ್ಜಿತಿಜ್ಜಿನೆಯುಂ, ಮತ್ತಂ ಕಡು, ಚೆಚ್ಚರ, ಬೆಚ್ಚರಮುಂ ಕೂಡಿರೆ, ತಂಮೊಳ್ ಒದವುಗುಂ ಶೀಘ್ರಾರ್ಥಂ.

### ಟೀಕು.

ಭೋಂಕನೆ ಎಂದು; ಚೆಕ್ಕನೆ ಎಂದು; ಭೋರನೆ ಎಂದು; ಭೊಂಕಲ್ (ಭೋಂಕಲ್) ಎಂದು; ಚಡುಪುಡನೆ ಎಂದು; ಗಿಜ್ಜಿತಿಜ್ಜಿನೆ ಎಂದು; ಮತ್ತಂ=ಆ ಮೇಲೆ; ಕಡುಚೆಚ್ಚರಬೆಚ್ಚರಮುಂ (ಕಡು, ಚೆಚ್ಚರಂ, ಬೆಚ್ಚರಂ) ಎಂದು[1]; ಕೂಡಿರೆ=ಪೊರ್ದುಗೆಯಾಗಿರೆ; ತಂಮೊಳ್=ತಂಮಲ್ಲಿ; ಶೀಘ್ರಾರ್ಥಂ=ಬೇಗವೆಂಬರ್ಥಂ; ಒದವುಗುಂ=ಪ್ರಾಪ್ತಿಸುವದು.

### ಸೂತ್ರಂ.

ಏಗಂ, ವಲಂ (s. S. 88), ವೆಱಿಂ, ದಲ್ (s. S. 88) signify "most certainly"; ಮತ್ತಿನ (s. S. 90) means "further"; ಬೇಱಿ ಬೇಱಿ "separately".

ಏಗಂ ವಲಂ ವೆಱಿಂ ದಲ್
ತಾಗುಗುಮತಿನಿಶ್ಚಯಾರ್ಥಮಂ ತಾನಿತರಾ |
ರ್ಥಾಗತಮದು ಮತ್ತಿನನುಡಿ
ಯೇಗೆಯ್ದುಂ ಬೇಱಿಬೇಱಿಯೆನೆ ಪೃಥಗರ್ಥಂ || 306 ||

### ಪದಚ್ಛೇದಂ.

ಏಗಂ ವಲಂ ವೆಱಿಂ ದಲ್ ತಾಗುಗುಂ ಅತಿನಿಶ್ಚಯಾರ್ಥಮಂ; ತಾಂ ಇತರಾರ್ಥಾಗತಂ ಅದು ಮತ್ತಿನನುಡಿ; ಏಗೆಯ್ದುಂ ಬೇಱಿಬೇಱಿ ಎನೆ ಪೃಥಗರ್ಥಂ.

### ಟೀಕು.

ಏಗಂ=ಏಗಂ ಎಂದು; ವಲಂ=ವಲಂ ಎಂದು; ವೆಱಿಂ=ವೆಱಿಂ ಎಂದು; ದಲ್=ದಲ್ ಎಂದು; ಅತಿನಿಶ್ಚಯಾರ್ಥಮಂ=ಅತ್ಯಂತನಿಶ್ಚಯಾರ್ಥವಂ; ತಾಗುಗುಂ=ಎಯ್ದುವುವು; ಮತ್ತಿನನುಡಿ=ಮತ್ತಿನ ಎಂಬ ನುಡಿ; ಅದು ತಾಂ=ಅದು ತಾಂ; ಇತರಾರ್ಥಾಗತಂ=ಅನ್ಯಾರ್ಥದಲ್ಲಿ ಬರ್ಪುದು; ಏಗೆಯ್ದುಂ=ಏನಂ ಮಾಡೆಯುಂ; ಬೇಱಿಬೇಱಿಯೆನೆ=ಬೇಱಿಬೇಱಿ ಎಂದೊಡಂ; ಪೃಥಗರ್ಥಂ=ಇಂಗಡಿಂಗಡವೆಂಬರ್ಥಂ.

### ಸೂತ್ರಂ.

ತಿಜ್ಜಿನೆ, ತಿಟ್ಟನೆ, ಬಟ್ಟನೆ mean "whirlingly"; ಒಯ್ಯನೆ, ನೆಟ್ಟನೆ (s. S. 90), ನೆಟ್ಟಗೆ "very distinctly", "nicely".

ಅನು ತಿಜ್ಜಿನೆ ತಿಟ್ಟನೆ ಬ
ಟ್ಟನೆಯೆಂಬಿವಱೊಳ್ ಭ್ರಮಾರ್ಥಮೊಯ್ಯನೆಯೆನೆ ನೆ |
ಟ್ಟನೆಯೆನೆ ನೆಟ್ಟಗೆಯೆನೆ ಬಂ
ದು ನಿಲ್ಕುಮಿವಱೊಳ್ ಪರಿಸ್ಫುಟಾರ್ಥವಿಧಾನಂ || 307 ||

### ಪದಚ್ಛೇದಂ.

ಅನು ತಿಜ್ಜಿನೆ ತಿಟ್ಟನೆ ಬಟ್ಟನೆ ಎಂಬ ಇವಱೊಳ್ ಭ್ರಮಾರ್ಥಂ; ಒಯ್ಯನೆ ಎನೆ, ನೆಟ್ಟನೆ ಎನೆ, ನೆಟ್ಟಗೆ ಎನೆ, ಬಂದು ನಿಲ್ಕುಂ ಇವಱೊಳ್ ಪರಿಸ್ಫುಟಾರ್ಥವಿಧಾನಂ.

1) The Sholiast also in the other manuscripts seems to make a compound of them.

### ಟೀಕು.

ಅನು ತಿಬ್ಬಿನೆ=ಅನು (ಬಳಿಕ) ತಿಬ್ಬಿನೆಯೆಂದು; ತಿಟ್ಟನೆ=ತಿಟ್ಟನೆಯೆಂದು; ಬಟ್ಟನೆ=ಬಟ್ಟನೆಯೆಂದು; ಎಂಬಿವಱೊಳ್=ಎಂಬೀ ಶಬ್ದಂಗಳಲ್ಲಿ; ಭ್ರಮಾರ್ಥಂ=ಭ್ರಮಣಾರ್ಥಂ; ಒಯ್ಯನೆಯೆನೆ=ಒಯ್ಯನೆಯೆಂದೊಡೆ; ನೆಟ್ಟನೆಯೆನೆ=ನೆಟ್ಟನೆಯೆಂದೊಡೆ; ನೆಟ್ಟಗೆಯೆನೆ=ನೆಟ್ಟಗೆಯೆಂದೊಡೆ; ಇವಱೊಳ್=ಈ ಶಬ್ದಂಗಳಲ್ಲಿ; ಪರಿಸ್ಫುಟಾರ್ಥವಿಧಾನಂ=ವ್ಯಕ್ತವಾದರ್ಥವಿಧಾನಂ; ಬಂದು ನಿಲ್ಕುಂ=ಬಂದು ನಿಲ್ವುದು.

### ಸೂತ್ರಂ.

ಅಹಹಂ is used in pain; ಅಕ್ಕಟಾ in grief and surprise; ಅಯ್ಯೋ in a pitying tone which shows grief (s. S. 57).

ವೇದನೆಯೊಳಹಹಮೆಂಬುದು
ಖೇದದೊಳಚ್ಚರಿಯೊಳಕ್ಕಟಾ ಎಂಬುದು ತತ್- |
ಖೇದವಿಡಂಬನಕರುಣಾ
ನಾದದೊಳಯ್ಯೋ ಎನಿಪ್ಪುದವತರಿಸಿರ್ಕುಂ || 308 ||

### ಪದಚ್ಛೇದಂ.

ವೇದನೆಯೊಳ್ ಅಹಹಂ ಎಂಬುದು, ಖೇದದೊಳ್ ಅಚ್ಚರಿಯೊಳ್ ಅಕ್ಕಟಾ ಎಂಬುದು, ತತ್ಖೇದವಿಡಂಬನಕರುಣಾನಾದದೊಳ್ ಅಯ್ಯೋ ಎನಿಪ್ಪುದು ಅವತರಿಸಿ ಇರ್ಕುಂ.

### ಟೀಕು.

ವೇದನೆಯೊಳ್=ನೋವಿನಲ್ಲಿ; ಅಹಹಂ ಎಂಬುದು=ಅಹಹಂ ಎಂಬ ಶಬ್ದಂ; ಖೇದದೊಳ್=ದುಃಖದಲ್ಲಿ; ಅಚ್ಚರಿಯೊಳ್=ಆಶ್ಚರ್ಯದಲ್ಲಿ; ಅಕ್ಕಟಾ ಎಂಬುದು=ಅಕ್ಕಟಾ ಎಂಬ ಶಬ್ದಂ; ತತ್ಖೇದವಿಡಂಬನಕರುಣಾನಾದದೊಳ್=ಆ ದುಃಖದ ವಿಡಂಬನದ ಕರುಣದ ಧ್ವನಿಯಲ್ಲಿ; ಅಯ್ಯೋ ಎನಿಪ್ಪುದು=ಅಯ್ಯೋ ಎಂಬ ಶಬ್ದಂ; ಅವತರಿಸಿರ್ಕುಂ=ಹುಟ್ಟಿರ್ಪುದು.

### ಸೂತ್ರಂ.

ಓಹೋ (s. S. 56), ಹೋ are used in preventing; ಒಡನೆ means "with" "forthwith" (cf. S. 246); ಗಹಗಹಂ is used in laughing; ಸೋಡಂಬಾಡಂ (s. S. 88) means "much" "more" (The last word which is given as one, may present the two distinct words: ಸೋಡಂ; ಬಾಡಂ).

ಸವನಿಪುದೋಹೋ ಹೋ ಎನೆ
ನಿವಾರಣಾರ್ಥಂ ಸಹಾರ್ಥವೊಡನೆನೆ ಹಸನ |
ವ್ಯವಹೃತಿ ಗಹಗಹಮೆನೆ ಪಿರಿ
ದುವೆಂಬಭಿಪ್ರಾಯದಲ್ಲಿ ಸೋಡಂಬಾಡಂ || 309 ||

### ಪದಚ್ಛೇದಂ.

ಸವನಿಪುದು ಓಹೋ ಹೋ ಎನೆ ನಿವಾರಣಾರ್ಥಂ; ಸಹಾರ್ಥಂ ಒಡನೆ ಎನೆ; ಹಸನವ್ಯವಹೃತಿ ಗಹಗಹಂ ಎನೆ; ಪಿರಿದುಂ ಎಂಬ ಅಭಿಪ್ರಾಯದಲ್ಲಿ ಸೋಡಂಬಾಡಂ.

ಟೀಕು.

ಓಹೋ=ಓಹೋ ಎಂದು; ಹೋ=ಹೋ ಎಂದು; ಎನೆ=ಎಂದೊಡೆ; ನಿವಾರಣಾರ್ಥಂ=ನಿಲ್ಲಿಸುವರ್ಥಂ; ಸವನಿಪುದು=ಪ್ರಾಪ್ತಿಸುವದು; ಒಡನೆನೆ=ಒಡನೆ ಎಂದೊಡೆ; ಸಹಾರ್ಥಂ=ಸಂಗಡವೆಂಬರ್ಥಂ; ಗಹಗಹಮೆನೆ=ಗಹಗಹಂ ಎಂದೊಡೆ; ಹಸನವ್ಯವಹೃತಿ=ನಗುವ ವ್ಯವಹಾರಂ; ಪಿರಿದುವೆಂಬಭಿಪ್ರಾಯದಲ್ಲಿ=ಪಿರಿದು ಎಂಬರ್ಥದಲ್ಲಿ; ಸೋಡಂಬಾಡಂ=ಸೋಡಂಬಾಡಮೆಂದಾಗುವದು.

ಸೂತ್ರಂ.

ಆಃ, ಅಃ (s. S. 57) are used in showing surprise; ಉಃ expresses vicious (?) joy and disgust.

ಪರಿವಿಡಿಯಿಂದಾಃ ಅಃ ಎಂ
ಬೆರಡುಂ ವಿಸ್ಮಯವಿಡಂಬನಂ ವ್ಯಸನಸುಖ |
ಸ್ಫುರಿತಾರ್ಥದೊಳುಃ ಎಂಬುದು
ಪಿರಿದುಮಸಹ್ಯಾರ್ಥದೊಳ್ ಪ್ರಯೋಗಿಸ ಪಡೆಗುಂ || 310 ||

ಪದಚ್ಛೇದಂ.

ಪರಿವಿಡಿಯಿಂದೆ ಆಃ ಅಃ ಎಂಬ ಎರಡುಂ ವಿಸ್ಮಯವಿಡಂಬನಂ; ವ್ಯಸನಸುಖಸ್ಫುರಿತಾರ್ಥದೊಳ್ ಉಃ ಎಂಬುದು, ಪಿರಿದುಂ ಅಸಹ್ಯಾರ್ಥದೊಳ್ ಪ್ರಯೋಗಿಸ ಪಡೆಗುಂ.

ಟೀಕು.

ಪರಿವಿಡಿಯಿಂದೆ=ತರುವಾಯಿಂದೆ; ಆಃ ಅಃ ಎಂಬೆರಡುಂ=ಆಃ ಎಂಬ ಅಃ ಎಂಬ ಎರಡು ಶಬ್ದಂಗಳುಂ; ವಿಸ್ಮಯವಿಡಂಬನಂ=ಚೋದ್ಯವಿಡಂಬನಂಗಳ್; ವ್ಯಸನಸುಖಸ್ಫುರಿತಾರ್ಥದೊಳ್=ವ್ಯಸನದ ಸುಖಂ ಕಾಣಿಸಿದರ್ಥದಲ್ಲಿ; ಪಿರಿದುಂ=ವಿಶೇಷವಾಗಿ; ಅಸಹ್ಯಾರ್ಥದೊಳ್=ಅಸಹ್ಯಾರ್ಥದಲ್ಲಿಯುಂ; ಉಃ ಎಂಬುದು=ಉಃ ಎಂಬ ಶಬ್ದಂ; ಪ್ರಯೋಗಿಸ ಪಡೆಗುಂ=ಪ್ರಯೋಗಿಸಲ್ಪಡುವದು.

ಸೂತ್ರಂ.

ಎಲೆಲೆ (s. S. 56), ಏ are used in calling to mind, in investigating, and in addressing; ಎ, and also ಏ, are used in emphasizing (Ss. 53; 56; 64; 314).

ಸ್ಮರಣವಿಚಾರಾಮಂತ್ರಣ
ಪರಿಗತವೆನಿಸಿರ್ಪುವೆಲೆಲೆ ಏ ಎಂಬಿವು ಸಂ |
ಚರಿಸುವುದನುಮತದೊಳ್ ಬ
ಲ್ಲರಿನೇಕಾರಮದೆಕಾರಮವಧಾರಣೆಯೊಳ್ || 311 ||

ಪದಚ್ಛೇದಂ.

ಸ್ಮರಣವಿಚಾರಾಮಂತ್ರಣಪರಿಗತಂ ಎನಿಸಿ ಇರ್ಪುವು ಎಲೆಲೆ ಏ ಎಂಬ ಇವು; ಸಂಚರಿಸುವುದು ಅನುಮತದೊಳ್ ಬಲ್ಲರಿಂ ಏಕಾರಂ ಅದು ಎಕಾರಂ ಅವಧಾರಣೆಯೊಳ್.

ಟೀಕು.

ಎಲೆಲೆ=ಎಲೆಲೆ ಎಂದು; ಏ=ಏ ಎಂದು; ಎಂಬಿವು=ಎಂಬೀ ಶಬ್ದಂಗಳ್; ಸ್ಮರಣವಿಚಾರಾಮಂತ್ರಣಪರಿಗತಂ=ನೆನೆವಲ್ಲಿ ವಿಚಾರದಲ್ಲಿ ಸಂಬುದ್ಧಿಯಲ್ಲಿ ಎಯ್ದಲ್ಪಟ್ಟವು; ಎನಿಸಿರ್ಪುವು=ಎನಿಸಿರ್ಪವು; ಅವಧಾರಣೆಯೊಳ್=ನಿರ್ಧಾರಣದಲ್ಲಿ; ಬಲ್ಲರಿಂ=ಬಲ್ಲ ವಿದ್ವಾಂಸರಿಂದೆ; ಅನುಮತದೊಳ್=ಅನುಮತದಲ್ಲಿ; ಏಕಾರಂ=ಏಕಾರಂ; ಅದು=ಅದು; ಎಕಾರಂ=ಎಕಾರಂ; ಸಂಚರಿಸುವುದು=ಬರ್ಪುದು.

ಸೂತ್ರಂ.

ಮತ್ತೆಂಬುದು ಪುನರರ್ಥದೊ
ಳೆತ್ತಾನುಮದೆಲ್ಲಿಯಾನುಮೆಂಬರ್ಥದೊಳಾ |
ಯತ್ತಂಗಳರಮೆ ಅರೆಗಳ್
ಸುತ್ತೆಂ ತರಲಾರ್ಥದಲ್ಲಿ ಬೆಳ್ಪಳಮಕ್ಕುಂ || 312 ||

ಮತ್ತೆ (s. Ss. 88; 90) means "again"; ಅರಮೆ, ಅರೆ (s. Ss. 56; 64) mean "here and there" (=partially, very little); ಬೆಳ್ಪಳಂ (s. S. 88,=ಬೆಳ್ವಳಂ) "unsteadily", "ficklely".

ಪದಚ್ಛೇದಂ.

ಮತ್ತೆ ಎಂಬುದು ಪುನರರ್ಥದೊಳ್; ಎತ್ತಾನುಂ ಅದು ಎಲ್ಲಿಯಾನುಂ ಎಂಬ ಅರ್ಥದೊಳ್ ಆಯತ್ತಂಗಳ್ ಅರಮೆ ಅರೆಗಳ್; ಸುತ್ತೆಂ, ತರಲಾರ್ಥದಲ್ಲಿ ಬೆಳ್ಪಳಂ ಅಕ್ಕುಂ.

ಟೀಕು.

ಪುನರರ್ಥದೊಳ್=ಆಮೇಲೆಂಬರ್ಥದಲ್ಲಿ; ಮತ್ತೆ ಎಂಬುದು=ಮತ್ತೆ ಎಂಬ ಶಬ್ದಂ; ಅಕ್ಕುಂ=ಆಗುವದು; ಎಲ್ಲಿಯಾನುಂ ಎಂಬರ್ಥದೊಳ್=ಎಲ್ಲಿಯಾನುಂ ಎಂದು ಪೇಳ್ವರ್ಥದಲ್ಲಿ; ಎತ್ತಾನುಂ=ಎತ್ತಾನುಂ; ಅದು=ಅದು ಎಂದಲ್ಲಿ; ಅರಮೆ ಅರೆಗಳ್=ಅರಮೆ ಅರೆ ಎಂಬ ಶಬ್ದಂಗಳ್; ಆಯತ್ತಂಗಳ್=ಏಕಾರ್ಥದಲ್ಲಿ ಆಯತ್ತಂಗಳ್ ಅಪ್ಪುವು; ಸುತ್ತೆಂ=ಭ್ರಮೆಯೆಂ; ತರಲಾರ್ಥದಲ್ಲಿ=ಎಳದೆಂಬರ್ಥದಲ್ಲಿ (?); ಬೆಳ್ಪಳಂ=ಬೆಳ್ಪಳಂ ಎಂಬುದು ಅಪ್ಪುದು.

ಸೂತ್ರಂ.

ಸಲೆಯೆಂಬುದು ನಿತ್ಯಾರ್ಥಾ
ವಲಂಬಿ ಹುಂಮೆನೆಯುಂ[1] ಅಲ್ತೆಯಲ್ತೆಯೆನೆಯುಂ |
ಫಲಿಯಿಸುಗುಂ ಪ್ರಶ್ನಾರ್ಥೋ
ಜ್ಜ್ವಲಾನುಮಾನಾರ್ಥಯುಗಳಮವು ಶಾಬ್ದಿಕರಿಂ || 313 ||

ಸಲೆ means "constantly", "essentially"; ಹುಂ and ಅಲ್ತೆಯಲ್ತೆ (ಅಲ್ತೆ, cf. S. 47) are used in asking and inferring.

ಪದಚ್ಛೇದಂ.

ಸಲೆ ಎಂಬುದು ನಿತ್ಯಾರ್ಥಾವಲಂಬಿ; ಹುಂ ಎನೆಯುಂ ಅಲ್ತೆಯಲ್ತೆ ಎನೆಯುಂ ಫಲಿಯಿಸುಗುಂ ಪ್ರಶ್ನಾರ್ಥೋಜ್ಜ್ವಲಾನುಮಾನಾರ್ಥಯುಗಳಂ ಅವು ಶಾಬ್ದಿಕರಿಂ.

1) On account of the metre the Bindu cannot join the following ಅ.

## ಟೀಕು.

ಸಲೆಯೆಂಬುದು=ಸಲೆ ಎಂಬ ಶಬ್ದಂ; ನಿತ್ಯಾರ್ಥಾವಲಂಬಿ=ನಿತ್ಯವಾದರ್ಥದಲ್ಲಿ ಅವಲಂಬ ಮುಳ್ಳುದು; ಹುಂ ಎನೆಯುಂ=ಹುಂ ಎಂದೊಡೆಯುಂ; ಅಲ್ತೆಯಲ್ತೆ ಎನೆಯುಂ=ಅಲ್ತೆ ಅಲ್ತೆ ಎಂದೊಡಂ; ಶಾಬ್ದಿಕರಿಂ=ಶಬ್ದಜ್ಞರಿಂದೆ; ಪ್ರಶ್ನಾರ್ಥೋರ್ಜ್ಜಲಾನುಮಾನಾರ್ಥಯುಗಳಂ=ಪ್ರಶ್ನೆಯ ಅರ್ಥವೆಂಬ ಪ್ರಕಾಶಮಾನವಾದ ಅನುಮಾನದರ್ಥವೆಂಬ ಎರಡರ್ಥಂ; ಅವು=ಅವು; ಫಲಿಯಿಸುಗುಂ=ಫಲಿತವಪ್ಪುವು.

## ಸೂತ್ರಂ.

ಅಂ, ಉಂ mean "and", "also" (cf. S. 122b); ಎ, ಏ, ಒ, ಓ (cf. Ss. 56; 57), joined to a word, express doubt, question and censure. (cf. Ss. 145; 311).

ಅಮುಮೆಂಬಿವೆರಡುಮಮುರ್ಗಂ[1]
ಸಮುಚ್ಚಯಾರ್ಥದೊಳೆ ಏ ಒ ಓ ಎಂಬಿವು ಶ |
ಬ್ದಮನಪ್ಪಿ ವಿಶಂಕಾಪ್ರ
ಶ್ನಮಂಡಲಾಕ್ಷೇಪಕಾರ್ಥದೊಳ್ ವರ್ತಿಸುಗುಂ || 314 ||

## ಪದಚ್ಛೇದಂ.

ಅಂ ಉಂ ಎಂಬ ಇವು ಎರಡುಂ ಅಮುರ್ಗಂ ಸಮುಚ್ಚಯಾರ್ಥದೊಳ್; ಎ ಏ ಒ ಓ ಎಂಬ ಇವು ಶಬ್ದಮಂ ಅಪ್ಪಿ ವಿಶಂಕಾಪ್ರಶ್ನಮಂಡಲಾಕ್ಷೇಪಕಾರ್ಥದೊಳ್ ವರ್ತಿಸುಗುಂ.

## ಟೀಕು.

ಅಂ=ಅಂ ಎಂದು; ಉಂ=ಉಂ ಎಂದು; ಎಂಬಿವೆರಡುಂ=ಎಂಬಿವೆರಡು ರೂಪುಗಳುಂ; ಸಮುಚ್ಚಯಾರ್ಥದೊಳ್=ಸಮುಚ್ಚಯದರ್ಥದಲ್ಲಿ; ಅಮುರ್ಗಂ=ಪೊರ್ದುಗೆಯುಪ್ಪುವು; ಎ=ಎ ಎಂದು; ಏ=ಏ ಎಂದು; ಒ ಓ=ಒ ಓ ಎಂದು; ಎಂಬಿವು=ಎಂಬೀ ಶಬ್ದಂಗಳ್; ಶಬ್ದಮಂ=ಶಬ್ದವಂ; ಅಪ್ಪಿ=ಕೂಡಿ; ವಿಶಂಕಾಪ್ರಶ್ನಮಂಡಲಾಕ್ಷೇಪಕಾರ್ಥದೊಳ್=ವಿಶಂಕೆಯ (ಮತ್ತೆ) ಪ್ರಶ್ನೆಯ (ಮಂಡಲದ ಮತ್ತೆ) ಆಕ್ಷೇಪಕದ ಅರ್ಥದಲ್ಲಿ; ವರ್ತಿಸುಗುಂ=ವರ್ತಿಸುವವು.

## ಸೂತ್ರಂ.

ಬೞಿಕೆ, ಬೞಿಕ್ಕಂ, ಬೞಿಕಂ, ಬೞಿಕ್ಕೆ, ಬೞಿಯುಂ mean "afterwards" (see s. S. 23, No. 34); ಮೇಣ್ means "further", "or".

ಬೞಿಕೆ ಬೞಿಕ್ಕಂ ಬೞಿಕಂ
ಬೞಿಕ್ಕೆ ಬೞಿಯುಂ ಪ್ರಸಿದ್ಧಪಶ್ಚಾದರ್ಥಂ |
ಫೞಿಯಿಪುದು ವಿಕಲ್ಪಾರ್ಥಂ
ಕೞಲದೆ ಮೇಣೆಂಬ ಶಬ್ದದೊಳ್ ಶಾಬ್ದಿಕರಿಂ || 315 ||

1) ಶಿಥಿಲತ್ವಂ.

### ಪದಚ್ಛೇದಂ.

ಬೞಿಕೆ ಬೞಿಕ್ಕಂ ಬೞಿಕಂ ಬೞಿಕ್ಕೆ ಬೞಿಯಂ ಪ್ರಸಿದ್ಧಪಶ್ಚಾದರ್ಥಂ ಘಟಿಯಿಪುದು, ವಿಕಲ್ಪಾರ್ಥಂ ಕಟಿಲದೆ ಮೇಣ್ ಎಂಬ ಶಬ್ದದೊಳ್ ಶಾಬ್ದಿಕರಿಂ.

### ಟೀಕು.

ಶಾಬ್ದಿಕರಿಂ=ಶಬ್ದಜ್ಞರಿಂದೆ; ಬೞಿಕೆ=ಬೞಿಕೆ ಎಂದು; ಬೞಿಕ್ಕಂ=ಬೞಿಕ್ಕಂ ಎಂದು; ಬೞಿಕಂ=ಬೞಿಕಂ ಎಂದು; ಬೞಿಕ್ಕೆ=ಬೞಿಕ್ಕೆ ಎಂದು; ಬೞಿಯಂ=ಬೞಿಯಂ ಎಂದು; ಪ್ರಸಿದ್ಧಪಶ್ಚಾದರ್ಥಂ=ಪ್ರಸಿದ್ಧವಾದ ಮತ್ತೆಂಬರ್ಥವಾಗಿ; ಘಟಿಯಿಪುದು=ಬರ್ಪುದು; ಮೇಣೆಂಬ ಶಬ್ದದೊಳ್=ಮೇಣೆಂಬ ಶಬ್ದದಲ್ಲಿ; ವಿಕಲ್ಪಾರ್ಥಂ=ವಿಕಲ್ಪವೆಂಬರ್ಥಂ; ಕಟಿಲದೆ=ಕೆಡದೆ ಬರ್ಪುದು.

### ಸೂತ್ರಂ.

ಉಪಮಾನಾರ್ಥದೊಳಿವು ವ
ರ್ತಿಪುವಂತಿರೆಯಂತೆಯಂತೆವೋಲ್ವೋಲ್ಗಳ್ ರಂ |
ಜಿಪುವು ಗಡ ಗಳಗಡಂಗಳ
ವುಪಚಿತವಾರ್ತೆಯೊಳಮುಚಿತಸಂಭಾಷಣೆಯೊಳ್ || 316 ||

ಅಂತಿರೆ, ಅಂತೆ, ಅಂತೆವೋಲ್, ವೋಲ್, signify "as", "like as" (s. S. 88; S. 214); ಗಳ and ಗಡ (s. S. 57; S. 160) are used in good news, and in convenient (familiar) talk (=certainly, indeed).

### ಪದಚ್ಛೇದಂ.

ಉಪಮಾನಾರ್ಥದೊಳ್ ಇವು ವರ್ತಿಪುವು ಅಂತಿರೆ ಅಂತೆ ಅಂತೆವೋಲ್ ವೋಲ್ಗಳ್; ರಂಜಿಪುವು, ಗಡ, ಗಳ ಗಡಂಗಳ್ ಅವು ಉಪಚಿತವಾರ್ತೆಯೊಳಂ ಉಚಿತಸಂಭಾಷಣೆಯೊಳ್.

### ಟೀಕು.

ಅಂತಿರೆಯಂತೆಯಂತೆವೋಲ್ವೋಲ್ಗಳ್=ಅಂತಿರೆಯೆಂದು, ಅಂತೆಯೆಂದು, ಅಂತೆವೋಲ್ ಎಂದು, ವೋಲ್ ಎಂದು, ಎಂಬೀ ಶಬ್ದಂಗಳ್; ಇವು=ಈ ಪೇೞ್ದ ಶಬ್ದಂಗಳ್; ಉಪಮಾನಾರ್ಥದೊಳ್=ಪೋಲಿಸುವರ್ಥದಲ್ಲಿ; ವರ್ತಿಪುವು=ವರ್ತಿಸುವುವು; ಗಳ ಗಡಂಗಳ್=ಗಳ ಎಂಬ ಗಡ ಎಂಬ ಶಬ್ದಂಗಳ್; ಅವು=ಆ ಶಬ್ದಂಗಳ್; ಉಪಚಿತವಾರ್ತೆಯೊಳಂ=ಉಪಚಾರವಾದ ವಾರ್ತೆಯಲ್ಲಿಯುಂ; ಉಚಿತಸಂಭಾಷಣೆಯೊಳ್=ಉಚಿತವಾದ ಸಂಭಾಷಣೆಯಲ್ಲಿ; ರಂಜಿಪುವು=ರಂಜಿಸುವವು; ಗಡ=ಗಡ.

### ಸೂತ್ರಂ.

ಮೆಱೆಗುಂ ಸುಮ್ಮನೆ ಸುಮ್ಮಗೆ
ಬಱಿದಲ್ಲವರೆಂಬ ಮಾತಕಾರಣದೊಳ್ ಪೊ |
ಚ್ಚಱಿಗುಂ ತ್ರೈತೀಯೆ ಬಂದಂ
ತಱಿನೆಂಬ ಪದಕ್ಕಮಾ ಎಕಾರಕ್ಕಿತರಂ || 317 ||

ಸುಮ್ಮನೆ, ಸುಮ್ಮಗೆ (s. S. 88; S. 302), ಬಱಿದೆ (S. 88), ಅಲ್ಲವರ್ (?) and ಅಂತಱಿಂ (ಅಂತಱಿಂದಂ, ಅಂತಱಿಂದೆ, s. S. 90) mean "causelessly".

## ಪದಚ್ಛೇದಂ.

ಮೆಱಿಗುಂ ಸುಂಮನೆ ಸುಂಮಗೆ ಬಱಿದೆ ಅಲ್ಲವರ್ ಎಂಬ ಮಾತು ಅಕಾರಣದೊಳ್ ಪೊಚ್ಚಱಿಗುಂ; ತೃತೀಯೆ ಬಂದು ಅಂತಱಿಂ ಎಂಬ ಪದಕ್ಕಂ ಆ ಎಕಾರಕ್ಕೆ ಇತರಂ.

## ಟೀಕು.

ಸುಂಮನೆ=ಸುಂಮನೆಯೆಂದು; ಸುಂಮಗೆ=ಸುಂಮಗೆಯೆಂದು; ಬಱಿದೆ=ಬಱಿದೆಯೆಂದು; ಅಲ್ಲವರ್=(or ಅಲ್ಲವರೆ?) ಅಲ್ಲವರೆಂದು; ಎಂಬ ಮಾತು=ಎಂಬ ವಾಕ್ಯಂ; ಅಕಾರಣದೊಳ್=ಕಾರಣವಿಲ್ಲೆಂಬರ್ಥದಲ್ಲಿ; ಮೆಱಿಗುಂ=ಮೆಱಿವುದು; ಅಂತಱಿನೆಂಬ ಪದಕ್ಕಂ=ಅಂತಱಿಂ ಎಂಬ ಅವ್ಯಯಪದಕ್ಕೆಯುಂ; ಆ ಎಕಾರಕ್ಕಿತರಂ=(ಸುಂಮನೆ ಮೊದಲಾದವಿಱಲ್ಲಿಯ) ಆ ಎಕಾರಕ್ಕೆ ಅನ್ಯವಾದ; ತೃತೀಯೆ=ಇಂ, ಇಂದಂ, ಇಂದೆ ಎಂಬ ತೃತೀಯೆ; ಬಂದು=ಬಂದು; ಪೊಚ್ಚಱಿಗುಂ=ಪೊರ್ದುಗೆಯಪ್ಪುದು.

## ಸೂತ್ರಂ.

ಹೌವ್ವನೆ is uttered when something suddenly happens, or when one is seized with fear; ಅಂತು, ಇಂತು "thus" are attached to the end of a sentence (cf. Ss. 316; 320); ಚೀಃ and ಇಸ್ಸಿ denote detestation.

ಹೌವನೆಯಾಕಸ್ಮಿಕಭಯ
ಭಾವಿತಮಂತಿಂತುಗಳ್ ಪದಾಪೂರಣದೊಳ್ |
ಕೋವುವು ಚೀಃ ಇಸ್ಸೀಗಳ್[1]
ತಾವೊಗೆದು ಜುಗುಪ್ಸನಾರ್ಥದೊಳ್ ವರ್ತಿಸುಗುಂ || 318 ||

## ಪದಚ್ಛೇದಂ.

ಹೌವನೆ (ಹೌವ್ವನೆ) ಆಕಸ್ಮಿಕಭಯಭಾವಿತಂ; ಅಂತು ಇಂತುಗಳ್ ಪದಾಪೂರಣದೊಳ್ ಕೋವುವು; ಚೀಃ ಇಸ್ಸಿಗಳ್ ತಾಂ ಒಗೆದು ಜುಗುಪ್ಸನಾರ್ಥದೊಳ್ ವರ್ತಿಸುಗುಂ.

## ಟೀಕು.

ಹೌವನೆ=ಹೌವನೆಯೆಂದು; ಆಕಸ್ಮಿಕಭಯಭಾವಿತಂ=ಆಕಸ್ಮಿಕಾರ್ಥವುಂ ಭಯಭಾವಿತಾರ್ಥವುಂ [—ರ್ಥಂ]; ಅಂತಿಂತುಗಳ್=ಅಂತು ಇಂತು ಎಂಬ ಶಬ್ದಂಗಳ್; ಪದಾಪೂರಣದೊಳ್=ಪದದ ಆ ಪೂರಣದಲ್ಲಿ; ಕೋವುವು=ಪವಣಿಗೆಯಪ್ಪವು; ಜುಗುಪ್ಸನಾರ್ಥದೊಳ್=ಹೇಸಿಕೆಯರ್ಥದಲ್ಲಿ; ಚೀಃ ಇಸ್ಸಿಗಳ್=ಚೀಃ ಇಸ್ಸಿ ಎಂಬುವು; ತಾಂ=ತಾಂ; ಒಗೆದು=ಹುಟ್ಟಿ; ವರ್ತಿಸುಗುಂ=ವರ್ತಿಸುವುವು.

## ಸೂತ್ರಂ.

ಬಳ್ಲೆ, ಬೞಿ (cf. S. 315) mean "further", "and"; ಅಂದು "than", ಇಂದು "now", ಉಂದು "now", ಎಂದು "when". (S. 121).

ಮತ್ತೆಂಬರ್ಥದೊಳುಸಿರ್ವರ[2]
ಬಿತ್ತೆಗರಾ ಬಲ್ಲೆ ಬೞಿಗಳಂ ಕಾಲಾರ್ಥಂ |
ಪತ್ತುವುದಂದಿಂದುಂದೆಂ
ದೆತ್ತಂ ನುಡಿವವ್ಯಯಂಗಳೊಳ್ ವಾಗ್ಮಿದರಿಂ || 319 ||

1) The long i for metre's sake put in by us. 2) ಶಿಥಿಲತ್ವಂ.

ಪದಚ್ಛೇದಂ.

ಮತ್ತೆ ಎಂಬ ಅರ್ಥದೊಳ್ ಉಸಿರ್ವರ್ ಬಿತ್ತರಿಗರ್ ಆ ಬಲ್ಲೆ ಬಱಿಗಳಂ; ಕಾಲಾರ್ಥಂ ಪತ್ತುವುದು ಅಂದು ಇಂದು ಉಂದು ಎಂದು ಎತ್ತಂ ನುಡಿವ ಅವ್ಯಯಂಗಳೊಳ್ ವಾಗ್ವಿದರಿಂ.

ಟೀಕು.

ಬಿತ್ತರಿಗರ್=ಬಲ್ಲವರ್; ಮತ್ತೆಂಬರ್ಥದೊಳ್=ಮತ್ತೆ ಎಂಬರ್ಥದಲ್ಲಿ; ಆ ಬಲ್ಲೆ ಬಱಿಗಳಂ=ಆ ಬಲ್ಲೆಯೆಂಬ ಬಱಿಯೆಂಬ ಶಬ್ದಂಗಳಂ; ಉಸಿರ್ವರ್=ಪೇಳ್ವರ್; ವಾಗ್ವಿದರಿಂ=ವಾಕ್ಯವಂ ಬಲ್ಲವರಿಂದೆ; ಅಂದು=ಅಂದೆಂದು; ಇಂದು=ಇಂದೆಂದು; ಉಂದು=ಉಂದೆಂದು; ಎಂದು=ಎಂದೆಂದು ಎತ್ತಂ=ಆವೆಡೆಯಲ್ಲಿಯುಂ; ನುಡಿವವ್ಯಯಂಗಳೊಳ್=ಪೇಳ್ವವ್ಯಯಂಗಳಲ್ಲಿ; ಕಾಲಾರ್ಥಂ=ಕಾಲದರ್ಥಂ; ಪತ್ತುವುದು=ಪೊರ್ದುಗೆಯಾಗುವದು.

ಸೂತ್ರಂ.

ಭ್ರಾಂತಿಯನುಱಿದಂತಿಂತುಂ
ತೆಂತೆಂಬಿವು ತಾಂ ಪ್ರಕಾರಕಾಲಾರ್ಥಂಗಳ್ |
ಮುಂತೆ ಚತುರ್ಥೀಷಷ್ಟೀ
ಕಾಂತಂಗಳವೆಂದು ತಿಳಿಗೆ ಪೇಳ್ದವ್ಯಯಮಂ || 320 ||

ಅಂತು "in that manner", ಇಂತು "in this manner" (cf. S. 318), ಉಂತು "in this manner", ಎಂತು "how" refer to manifold ways. — Now follow Particles of time which have a Genitive and Dative.

ಪದಚ್ಛೇದಂ.

ಭ್ರಾಂತಿಯಂ ಉಱಿದು ಅಂತು ಇಂತು ಉಂತು ಎಂತು ಎಂಬ ಇವು ತಾಂ ಪ್ರಕಾರಕಾಲಾರ್ಥಂಗಳ್.— ಮುಂತೆ, ಚತುರ್ಥೀಷಷ್ಟೀಕಾಂತಂಗಳ್ ಅವು ಎಂದು, ತಿಳಿಗೆ ಪೇಳ್ದ ಅವ್ಯಯಮಂ.

ಅನ್ವಯಂ.

ಭ್ರಾಂತಿಯಂ ಉಱಿದು ಅಂತು ಇಂತು ಉಂತು ಎಂತು ಎಂಬಿವು ತಾಂ ಪ್ರಕಾರಕಾಲಾರ್ಥಂಗಳ್.— ಮುಂತೆ ಪೇಳ್ದವ್ಯಯಮಂ, ಚತುರ್ಥೀಷಷ್ಟೀಕಾಂತಂಗಳ್ ಅವು ಎಂದು, ತಿಳಿಗೆ.

ಟೀಕು.

ಭ್ರಾಂತಿಯಂ=ಭ್ರಮೆಯಂ; ಉಱಿದು=ಬಿಟ್ಟು; ಅಂತು=ಅಂತೆಂದು; ಇಂತು=ಇಂತೆಂದು; ಉಂತು=ಉಂತೆಂದು; ಎಂತು=ಎಂತೆಂದು; ಎಂಬಿವು=ಎಂಬೀ ಶಬ್ದಂಗಳ್; ತಾಂ=ತಾಂ; ಪ್ರಕಾರಕಾಲಾರ್ಥಂಗಳ್=ಆ ಪ್ರಕಾರಮೀ ಪ್ರಕಾರಮೆಂಬಂತೆ ಪ್ರಕಾರಕಾಲಾರ್ಥವಂ ಪೇಳ್ವವು;—ಮುಂತೆ=ಮುಂದೆ; ಪೇಳ್ದವ್ಯಯಮಂ=ಹೇಳ್ವವ್ಯಯಶಬ್ದಂಗಳಂ; ಚತುರ್ಥೀಷಷ್ಟೀಕಾಂತಂಗಳ್=ಚತುರ್ಥೀವಿಭಕ್ತಿ ಷಷ್ಟೀವಿಭಕ್ತಿಯಿಂದೆ ಬೆಳಗುವವು; ಅವು=ಆ ಶಬ್ದಂಗಳ್; ಎಂದು=ಎಂದು; ತಿಳಿಗೆ=ಅಱಿಗೆ. (The ಕಾಲ after ಪ್ರಕಾರ probably=ಕಾಲ್ಯ=ಉಚಿತ)

## ವೃತ್ತಿ.

ಕಾಲಭೇದಮನಱಿವ ಮುಂದಣಾವ್ಯಯಂಗಳೊಳ್ ಚತುರ್ಥಿ ಷಷ್ಠಿಗಳ್ ಪರಿಣಮಿಸಿರ್ಪುವೆಂದಱಿವುದು.

## ಸೂತ್ರಂ.

They all (with the exception of ಸವಳದೆ) receive the Bindu in being declined, and are: ಆಗಳ್, then, ಈಗಳ್, now, ಆಗಡು, than, ಈಗಡು, now; ಸವಳದೆ, ಪೊೞ್ತಿಡೆ, ಸವಳ್ತಡೆ, early;—ನಾಡಿದು, the day after tomorrow, ನಾಳೆ, tomorrow, ನಿಂನೆ, yesterday, ಮೊಂನೆ, the day before yesterday, ಈವರೆ (cf. S. 248), till now, ಮೊನೆಯೆಡು (?), till then.

ತಳೆಗುಂ ಕಾಲಾರ್ಥಮನಾ
ಗಳೀಗಳೆಂಬಾಗಡೀಗಡೆಂಬಿವು ಬಿಂದೂ |
ಜ್ಜ್ವಳಮುಮಿವುದಯಮನುಸಿರ್ಪುವು[1]
ತಿಳಿ ಸವಳದೆ ಪೊೞ್ತಿಡೆನೆ ಸವಳ್ತಡೆಯೆನೆಯುಂ || 321 ||

ಸವಸಂದ ಕಾಲವಾಚಕ
ಮಿವು ನಾಡಿದು ನಾಳೆ ನಿಂನೆ ಮೊಂನೆಗಳಾದಂ |
ವಿವರಿಪುವೀವಱಿ ಮೊನೆಯೆ[2] (-ವರೆ)
ಡಿವು ಕಿಂಚಿದ್ಭೂತಭೂತಕಾಲದ್ವಯದೊಳ್ || 322 ||

## ಪದಚ್ಛೇದಂ.

ತಳೆಗುಂ ಕಾಲಾರ್ಥಮಂ ಆಗಳ್ ಈಗಳ್ ಎಂಬ ಆಗಡು ಈಗಡು ಎಂಬ ಇವು, ಬಿಂದೂಜ್ಜ್ವಳಮುಂ ಇವು; ಉದಯಮಂ ಉಸಿರ್ಪುವು, ತಿಳಿ, ಸವಳದೆ ಪೊೞ್ತಿಡೆ ಎನೆ, ಸವಳ್ತಡೆ [ಸವಲ್ತಿಡೆ] ಎನೆಯುಂ. ಸವಸಂದ ಕಾಲವಾಚಕಂ ಇವು ನಾಡಿದು ನಾಳೆ ನಿಂನೆ ಮೊಂನೆಗಳ್ ಆದಂ; ವಿವರಿಪುವು ಈವಱಿ (ಈವಱು,-ರೆ) ಮೊನೆಯೆಡು (?) ಇವು ಕಿಂಚಿದ್ಭೂತಭೂತಕಾಲದ್ವಯದೊಳ್.

## ಟೀಕು.

ಆಗಳ್ ಈಗಳ್ ಎಂಬ ಆಗಡು ಈಗಡು ಎಂಬಿವು=ಆಗಳೆಂಬ ಈಗಳೆಂಬ ಆಗಡೆಂಬ ಈಗಡೆಂಬ ಈ ಶಬ್ದಂಗಳ್; ಕಾಲಾರ್ಥಮಂ=ಕಾಲಾರ್ಥವನ್ನು; ತಳೆಗುಂ=ತಳೆವುವು; ಸವಳದೆ=ಸವಳದೆ ಎಂದು; ಪೊೞ್ತಿಡೆ=ಪೊೞ್ತಿಡೆ ಎಂದು; ಎನೆ=ಎನೆ; ಸವಳ್ತಡೆ=ಸವಳ್ತಡೆ ಎಂದು; ಎನೆಯುಂ=ಎಂದೊಡೆಯುಂ; ಬಿಂದೂಜ್ಜ್ವಳಮುಂ=ಬಿಂದುವಿನೊಡನೆ ಪ್ರಕಾಶಿಪುವಾಗಿಯುಂ; ಇವು=ಈ ಶಬ್ದಂಗಳ್; ಉದಯಮಂ=ಉದಯಕಾಲಮಂ; ಉಸಿರ್ಪುವು=ಪೇೞ್ವುವು; ತಿಳಿ=ಅಱಿ. ನಾಡಿದು ನಾಳೆ ನಿಂನೆ ಮೊಂನೆಗಳ್=ನಾಡಿದು ಎಂಬ ನಾಳೆ ಎಂಬ ನಿಂನೆ ಎಂಬ ಮೊಂನೆ ಎಂಬ ಶಬ್ದಂಗಳ್; ಇವು=ಇವು; ಆದಂ=ಆದಂ ಎಂಬ ಪೀನಗ್ರಹಣದಿಂದೆ; ಸವಸಂದ ಕಾಲವಾಚಕಂ=ಸಮಾನವಾಗಿ

1) ಶಿಥಿಲತ್ವಂ. 2) According to the metre it ought to be ಮೊಂನೆಯೆಡು. In the following ವೃತ್ತಿ one manuscript has ಮೊನ್ನಯುಡು, another ಮೊನೆಯೊಡಿಂಗೆ.

ಸಂದ ಕಾಲವಾಚಕವಂ ಪೇೞ್ವ ಶಬ್ದಂಗಳ್; ಕಿಂಚಿದ್ಭೂತಭೂತಕಾಲದ್ವಯದೊಳ್=ಸ್ವಲ್ಪಭೂತಕಾಲ ಭೂತಕಾಲವೆಂಬೆರಡಱಲ್ಲಿ; ಈವಱಿ=ಈವಱಿ ಎಂದು; ಮೊನೆಯೆಡು=ಮೊನೆಯೆಡು ಎಂದು; ಇವು=ಈ ಶಬ್ದಂಗಳ್; ವಿವರಿಪುವು=ವಿವರವಾಗುವವು. [ಈವಱಿ in M. A. and M. B.]

## ವೃತ್ತಿ.

ಇವಱೊಳ್ ಚತುರ್ಥಿ ಷಷ್ಠಿಗಳ್ ಪತ್ತುವಂದವುಂ ಉದಾಹರಿಪೆಂ.—ಆಗಳಿಂಗೆ, ಈಗಳಿಂಗೆ, ಆಗಡಿಂಗೆ, ಈಗಡಿಂಗೆ; ಆಗಳಿನ, ಈಗಳಿನ, ಆಗಡಿನ, ಈಗಡಿನ; ಸವಳ್ತಡಿಂಗೆ, ಪೊೞ್ತಡಿಂಗೆ, ಸವಳ್ತಡಿನ, ಪೊೞ್ತಡಿನ. ಸವಳದೆಗೆ ಆಗದು.—ನಾಳಿಂಗೆ, ನಾಡಿದಿಂಗೆ, ನಿಂನಿಂಗೆ, ಮೊಂನಿಂಗೆ; ನಾಳಿನ, ನಾಡಿದಿನ, ನಿಂನಿನ, ಮೊಂನಿನ; ಈವಱಿಂಗೆ, ಮೊನೆಯೆಡಿಂಗೆ [also in M. B. and M. A.]; ಈವಱಿನ, ಮೊನೆಯೆಡಿನ. ಈವಱಿಂಬುದು ಈಷದ್ಭೂತಕಾಲಂ; ಮೊನೆಯೆಡೆಂದು ಭೂತಕಾಲಂ; ಇವು ವರ್ಷವಾಚಕಂಗಳಾಗಿ ಕಾಲೋಪಯುಕ್ತಂಗಳ್.

## ಗದ್ಯಂ.

ಇದು ಸಮಸ್ತಶಾಬ್ದಿಕಜನಮನೋಜನಿತಶಬ್ದಸಂದೇಹಶಲ್ಯಚಾರುಚುಂಬಕಾಯಮಾನಾನೂನಕರ್ಣಾಟಕಲಕ್ಷಣಶಿಕ್ಷಾಚಾರ್ಯಸುಕವಿಕೇಶಿರಾಜವಿರಚಿತಮಪ್ಪ ಶಬ್ದಮಣಿದರ್ಪಣದೊಳ್ ಅವ್ಯಯಾರ್ಥವಿವರಣಮೆಂಬ ಅಷ್ಟಮಮಪ್ಪ ಸಂಧಿ ಸಂಪೂರ್ಣಂ.

೮ನೆಯ ಅಧ್ಯಾಯಂ ಸಮಾಪ್ತಂ.

